ಬಿಡಿಮುತ್ತು—೬

# ಕವಿ-ಕಾವ್ಯ-ದೃಷ್ಟಿ

( ವಿವೇಚನಾತ್ಮಕ ಪ್ರಬಂಧಗಳ ಸಂಗ್ರಹ )

ಶ್ರೀ. ವಿ. ಸೀತಾರಾಮಯ್ಯ

೧೯೫೫

ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ

# ಕೃತಜ್ಞತೆ



ಕನ್ನಡದ ಶ್ರೇಷ್ಠಕವಿ, ರಸಗ್ರಾಹಿ ವಿಮರ್ಶಕ, ದೃಶ್ಯದ ಹಿಂದೆ ಇರುವ ಅದೃಶ್ಯವನ್ನು ತೆರೆದು ತೋರಿಸುವ ನಾಟಕಕಾರ, ಅರ್ಥಶಾಸ್ತ್ರವಿಶಾರದರಾದ ಶ್ರೀ. ವಿ. ಸೀತಾರಾಮಯ್ಯನವರ ಗ್ರಂಥವೊಂದನ್ನು ಪ್ರಕಟಿಸಬೇಕೆಂಬ ಹಂಬಲ ಬಹಳ ವರ್ಷಗಳಿಂದಲೂ ಇತ್ತು. ಅದೀಗ ಈ ಗ್ರಂಥದಿಂದ ಪೂರ್ತಿಗೊಂಡುದಕ್ಕಾಗಿ ಸಂತೋಷವಾಗಿದೆ. ತಮ್ಮ ಸತ್ವಯುತ ಲೇಖನಗಳ ಈ ಸಂಗ್ರಹವನ್ನು ಪ್ರಕಟಿಸಲು ಅನುಮತಿ ಕೊಟ್ಟುದಕ್ಕಾಗಿ ಶ್ರೀ. ವೀ. ಸೀತಾರಾಮಯ್ಯನವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈ ಲೇಖನಗಳಲ್ಲಿ ಕೆಲವು ಈಗಾಗಲೆ ಅಲ್ಲಿ ಇಲ್ಲಿ ಪ್ರಕಟವಾಗಿವೆ. ಕೆಲವು ಆಕಾಶವಾಣಿಯಲ್ಲಿಯೂ ಬಿತ್ತರಿಸಲ್ಪಟ್ಟಿವೆ. ಅವನ್ನು ಮೊದಲಿಗೆ ಪ್ರಕಟಿಸಿದ, ಬಿತ್ತರಿಸಿದ ಪ್ರಕಾಶನ ಸಂಸ್ಥೆಗಳಿಗೂ, ಆಕಾಶವಾಣಿಯವರಿಗೂ ಉಪಕೃತನಾಗಿದ್ದೇನೆ.

ಈ ಗ್ರಂಥವು ಎರಡು ವರ್ಷಗಳ ಹಿಂದೆಯೇ ಬೆಳಕಿಗೆ ಬರಬೇಕಾಗಿತ್ತು. ಆದರೆ ಕೆಲವೊಂದು ಅನಿವಾರ್ಯ ಕಾರಣಗಳಿಂದ ಇಷ್ಟು ದೀರ್ಘ ಅವಧಿಯವರೆಗೂ ತಡೆದು ನಿಂತು ಈಗ ಪ್ರಕಟಿಸುವ ಸುಸಂದರ್ಭವೊದಗಿದ್ದಕ್ಕಾಗಿ ಸಮಾಧಾನ ವ್ಯಕ್ತಪಡಿಸದಿರಲಾರೆ.

ಪ್ರಕಾಶಕ

# ಪರಿವಿಡಿ




ಕವಿ-ಕಾವ್ಯ-ದೃಷ್ಟಿ . . . . ೧
ಕಲೆಯ ಪ್ರಪಂಚ . . . . ೩೦
ಸಾಹಿತ್ಯವಿಮರ್ಶೆ . . . . ೪೮
ಸ್ಫೂರ್ತಿ ಮತ್ತು ಕಲೆಗಾರಿಕೆ . . . ೬೩
ಭಾರತಸಂಸ್ಕೃತಿ-ಧರ್ಮ . . . . ೭೨
ಭಾರತಗಳ ಶ್ರೀಕೃಷ್ಣ . . . . ೮೯
ಅಲ್ಲಮಪ್ರಭು . . . . . ೧೧೨
ಶ್ರೀಚೆನ್ನಕೇಶವನ ಅಂತಃಪುರಗೀತೆ . . . ೧೨೩
ಶ್ರೀನಿವಾಸರ ಕವಿತೆ . . . . ೧೨೯
$F^{6}$ಆರೋಹಣ . . . . . ೧೩೭
ಕಲಾಕೃತಿಯ ಅರ್ಥ . . . . ೧೪೬




# ಮೊದಲ ಮಾತು



ಇಲ್ಲಿ ಕೂಡಿಸಿರುವ ಲೇಖನಗಳೆಲ್ಲ ಈಗಾಗಲೆ ಬೇರೆ ಬೇರೆ ಕಡೆ ಪ್ರಕಟವಾಗಿವೆ. ಕೆಲವು ಇಪ್ಪತ್ತು ವರ್ಷಗಳಿಗೆ ಹಿಂದೆ ಹೊರಬಿದ್ದುವು. ಸಾಹಿತ್ಯದ ಸ್ವರೂಪವನ್ನೂ ವಿಮರ್ಶೆಯ ಸ್ವರೂಪವನ್ನೂ ಕುರಿತು ಆಗೀಗ ನಾನು ಆಡಿದ, ಬರೆದ ಕೆಲವು ಮಾತುಗಳು ಇಲ್ಲಿವೆ. ಇವನ್ನು ಹೀಗೆ ತೆರಳೆ ಮಾಡಿ ತಮ್ಮ ಗ್ರಂಥಪ್ರಕಾಶನ ಸಮಿತಿಯ ಬಿಡಿಮುತ್ತಿನಲ್ಲಿ ಸೇರಿಸಿಕೊಳ್ಳುತ್ತೇವೆಂದು ಕೇಳಿ ಗೆಳೆಯರಾದ ಶ್ರೀ. ಜಿ. ಬಿ ಜೋಶಿಯವರು ನನಗೆ ಗೌರವ ಮಾಡಿದ್ದಾರೆ. ಇವು ಯಾರಿಗೆ ಬೇಕೋ, ಯಾರಿಗೆ ರುಚಿಸುವುವೊ ಅದು ಅವರು ನೋಡಿಕೊಳ್ಳಬೇಕಾದ ಸಂಗತಿ. ಮನೋಹರ ಗ್ರಂಥಮಾಲೆ ಹೊಸ ಕನ್ನಡ ಸಾಹಿತ್ಯಕ್ಕೆ ಗಣ್ಯವಾದ ಸರಸವಾದ ಸೇವೆಯನ್ನು ಸಲ್ಲಿಸಿದೆ. ಆ ಗ್ರಂಥಮಾಲೆಯನ್ನು ನಡಸಿರುವ ಸಾಹಸ ಜೋಶಿಯವರದು; ಅವರ ಸಲಹೆಗಾರ ಮಂಡಲಿಯದು. ಆ ಮಾಲೆಯ ಒಂದು ಹೂವಾಗಿ ಸೇರಿಕೊಳ್ಳುವುದು ನನಗೂ ಒಂದು ಸಂತೋಷ.

ಇಲ್ಲಿಯ ಬರೆಪಣಿಗೆ ಎರಡು ಬಗೆಯಾಗಿದೆ. ಒಂದು: ಸುಮಾರು ತತ್ತ್ವಭಾಗಕ್ಕೆ ಸೇರಿದ್ದು. ಇನ್ನೊಂದು: ವಿಮರ್ಶೆಯ ಪ್ರಯೋಗಭಾಗ. ಕಡೆಯ ಲೇಖನ ಮೊದಲ ಭಾಗಕ್ಕೇ ಸೇರಬೇಕಾದ್ದು.

ಸಾಹಿತ್ಯದಲ್ಲಿ ಎಷ್ಟು ಬಗೆ, ಮಟ್ಟ ಇವೆಯೋ ಅಷ್ಟಕ್ಕೆ ಕಡಮೆ ಇಲ್ಲದ ಮಟ್ಟದ ವ್ಯಾಖ್ಯಾನ ವಿಮರ್ಶೆ ಇವೆ. ತಮಗೆ ಕಾಣಿಸಿದುದನ್ನು ತಮಗೆ ಹಿತ ಕಂಡ ರೀತಿಯಲ್ಲಿ ಬರಹಗಾರರು ಬರೆಯುತ್ತಾರೆ. ಲೋಕ ಅದನ್ನು ಪ್ರೀತಿಯಿಂದ ಸ್ವೀಕರಿಸಿದರೆ ಅದೊಂದು ಭಾಗ್ಯ. ಸ್ವೀಕರಿಸಬೇಕೆಂದಾಗಲಿ, ಮೆಚ್ಚಬೇಕೆಂದಾಗಲಿ ಯಾವ ನಿರ್ಬಂಧವೂ ಇಲ್ಲ. ಬಹುಮಟ್ಟಿಗೆ ಪರಿಚಯಾತ್ಮಕವಾದ ಈ ಸ್ವರೂಪನಿರ್ದೇಶನಗಳಲ್ಲಿ ಬೆಲೆಯಿದ್ದರೆ ಅದನ್ನು ಒಪ್ಪುವವರು ಒಪ್ಪಬಹುದು. ನನಗೆ–ನನ್ನ-ಬರವಣಿಗೆ ಸುಲಭವಲ್ಲ. ರಂಗು, ಚುಂಗು, ರಸ, ಬೆಡಗುಗಳು ಯಾವುದೂ ಇಲ್ಲದ ಈ ಒಣ ಗದ್ಯವನ್ನು ಒಟ್ಟಿಗೆ ಓದು

ವುದು ಕೂಡ ಕಷ್ಟವಾದೀತು. ಆಮೆಯು ಚಿಪ್ಪು, ಆಳಿಲಿನ ಮೃದುಮೆಯ್, ಎರಳೆಯ ಸೊಗಸು ಅವಸಕ್ಕೆ ಸಹಜ. ಒಂದು ಇನ್ನೊಂದಾಗಲಾರದು. ಅಂಥದನ್ನು ಬಯಸಬಾರದು ಕೂಡ. ವಿಮರ್ಶೆಯಲ್ಲಿ ತೊಡಗಿದ ಯಾರು ಯಾವ ವಿಚಕ್ಷಣೆ ಮೆರೆಯುವರೋ, ಯಾವ ತೀರ್ಮಾನಗಳಿಗೆ ಬಂದು ತಾರತಮ್ಯಗಳನ್ನು ಕಟ್ಟುವರೋ ಅದೆಲ್ಲ ಒಬ್ಬರ ಬೆಲೆ. ಅವಗ ರುಚಿ, ಸಂಸ್ಕಾರ, ಮನಸ್ಸುಗಳಿಗೆ ಸಂಬಂಧಿಸಿದ್ದು. ತಿಳಿದವರು ಸಹೃದಯರು ಎಂದು ಲೋಕವರಿತ ನಾಲ್ವರ ಬೆಲೆ ನಾಲ್ಕು ಬಗೆಯಾಗಿರಬಲ್ಲದು. ಆವರಲ್ಲಿ ಯಾರ ವಿಮರ್ಶೆ ಕೃತಿಕಾರನ ಸಮಾನಾನುಭವವನ್ನು ವ್ಯಕ್ತಪಡಿಸುತ್ತದೆ ಯೆನ್ನಬಹುದು? ಈ ನಡುವೆ ನಮ್ಮದೇ ದೃಷ್ಟಿ, ರೀತಿ, ರುಚಿ ನಿರ್ಣಯ ಸರಿ ಎಂದು ಹಟ ಹಿಡಿಯುವುದು ತರವಾಗದು. ಅಂತೇ ಒಳ್ಳೆಯ ಸಾಹಿತ್ಯ—ಹಾಗಿರಬೇಕು ಹೀಗಿರಕೂಡದು ಎಂದು ಹೊರಗಿಂದ ನುಡಿಯುವುದು, ಸಾಹಿತ್ಯ ಸ್ವರೂಪಜ್ಞತೆಯ ಮತ್ತು ಅದು ಹುಟ್ಟುವ ಸನ್ನಿವೇಶಜ್ಞತೆಯ ಲಕ್ಷಣವಲ್ಲ. ಇತ್ತ ವಿಮರ್ಶೆ ಹೀಗೆ ಆಗಬೇಕು, ವಿಮರ್ಶಕರು ಇಂಥವರೇ ಸರಿ ಎಂದು ಚಂಡಿಸುವುದೂ ಸರಿಯಾಗದೇನೊ. ಅಂಥವರನ್ನು ಎಲ್ಲಿಂದ ಮಾಡಿಸಿ ತರೋಣ? ಒಬ್ಬ ವ್ಯಕ್ತಿಯ ಪ್ರೀತಿಯನ್ನೂ ಮನಸ್ಸನ್ನೂ ಸಾರ್ವಕಾಲಿಕ ತತ್ವ, ಪ್ರಮಾಣ ಎಂಬ ಮಟ್ಟಕ್ಕೇರಿಸಿಕೊಂಡು ಒರಟಾಗಿ, ಗಡುಸಾಗಿ ಮಾತನಾಡಿದರೆ ಅದು ನಿಜವಾದ ವಿಮರ್ಶೆ ಎಂದು ಕರೆಯುವ ಚಟ ಕೆಲ ವೇಳೆ ಪ್ರಬಲಿಸುತ್ತದೆ. ಆಯಾ ಮೋಹ ತನ್ನಂತೆ ತಾನೇ ಮುರಿಯಬೇಕು; 'ಕದಡಿದ ಸಲಿಲ ತನ್ನಿಂತಾನೆ ತಿಳಿವಂದದೆ' ತಿಳಿಯಬೇಕು. ನಮ್ಮ ಸೂತ್ರಗಳಿಗೆ ತಕ್ಕಂತೆ, ನಮ್ಮ ಧ್ಯೇಯನಿಷ್ಠೆ ಸಾಧಿಸುವಂತೆ ವಿಮರ್ಶಕರ ಸೃಷ್ಟಿಯಾಗುವುದು ಕಡಿಮೆ ವಯಸ್ಸು, ಸಾಹಿತ್ಯಾನುಭವ ಕಡಮೆಯಾದಂತೆಲ್ಲ, ತೀರ್ಮಾನ ಬಿಗಿಯಾಗಿರುತ್ತದೆ; ಅಂಥಲ್ಲಿನ ವಿಶ್ವಾಸ ವಿಸ್ಮಯ ತರುತ್ತದೆ. 'ಮೀಸೆ ಬಂದವನು ದೇಶಣ್ಣ' ಎಂಬ ಗಾದೆ ಉಂಟು. ಮೀಸೆ ಮೊಳೆಯಲು ತೊಡಗುತ್ತಿರುವಾಗ ಲೋಕ ಹೇಗೆ ಕಂಡೀತು? ಇನ್ನು ಕೆಲವರು ಒಂದು ಸಲ ನಿರ್ಣಯಗಳನ್ನು ಮಾಡಿಕೊಂಡು ಮನಸ್ಸನ್ನು ಮುಚ್ಚಿಕೊಂಡುಬಿಡುತ್ತಾರೆ. ಅಲ್ಲಿ ಜುಂಗು ಕರಟ ಒಡೆದ ಹೊರತು ಕೊಬ್ಬರಿ ಎಳನೀರು ಸಿಕ್ಕವು. ಬೆಳವಣಿಗೆ ನಿಂತು ಹೋದ ಮನಸ್ಸಿನ ವೈಖರಿ ಬೇಸರ ತರಬಲ್ಲದು. ಅದೆಲ್ಲ ಹೇಗೇ ಇರಲಿ ಸದ್ಯಃ ಬೇಡ. ಒಂದೆರಡು ವಿಷಯಗಳ ನೆಲಸನ್ನು ಕಾಣಿಸಲು ಇಲ್ಲಿ ಯತ್ನ

ನಡೆದಿದೆ ಅಷ್ಟೇ. ಇಲ್ಲಿನ ಸರಿ ತಪ್ಪುಗಳನ್ನು ತಿಳಿದವರು ನಿರ್ಣಯಿಸಬೇಕು.

ಇವನ್ನು ಈ ಮುಂಚೆ ಪುಸ್ತಕಗಳಲ್ಲಿಯೋ ಪತ್ರಿಕೆಗಳಲ್ಲಿಯೋ ಅಚ್ಚುಮಾಡಿ ಉತ್ತೇಜನ ಕೊಟ್ಟಿರುವ ಗೆಳೆಯರಿಗೆ ವಂದನೆಗಳು. ನನ್ನ ಪ್ರಾರ್ಥನೆಯನ್ನು ಮನ್ನಿಸಿ, ಮೈಸೂರು, ಧಾರವಾಡ ಮುಂತಾದ ಬಾನುಲಿ ಕೇಂದ್ರಗಳಲ್ಲಿ ಪ್ರಚಾರಮಾಡಿದ ಕೆಲವು ಗಾಳಿಮಾತುಗಳನ್ನು ಈ ಪುಸ್ತಕಕ್ಕಾಗಿ ಬಳಸಿಕೊಳ್ಳಲು, ಉದಾರವಾಗಿ ಅನುಮತಿ ಕೊಟ್ಟ ಭಾರತದ ಆಕಾಶವಾಣಿಯ ಅಧಿಕಾರಿಗಳಿಗೆ, ಮುಖ್ಯವಾಗಿ The Director, A. I. R Delhi ಅವರಿಗೆ ನಾನು ಋಣಿ.

ಅಚ್ಚಿನ ಕರಡನ್ನು ಕಳಿಸುವುದರಲ್ಲಿಯೂ ಅಚ್ಚು ಮಾಡುವುದರಲ್ಲಿಯೂ ನೆರವಾದ ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಅಚ್ಚುಕೂಟದವರಿಗೆ ನನ್ನ ವಂದನೆಗಳು.

ಬೆಂಗಳೂರು
೧೫—೮—೧೯೫೫

— ವಿ. ಸೀತಾರಾಮಯ್ಯ

# ತಿದ್ದುಪಡಿ

| ಪುಟ | ಸಾಲು | ಓದಿ |
|---|---|---|
| ೯ | ೨೮ | ವಿಮರ್ಶ |
| ೧೨ | ೧೬ | ಸೇವೆಯನ್ನೂ ಮಾಡುವುದು |
| ,, | ೧೭ | ಸರಿಯೆನ್ನಲು |
| ೨೨ | ೨ | ತಮ್ಮ |
| ,, | ೨೦ | ವಿಮರ್ಶ |
| ,, | ೨೬ | ಅವನು |
| ೨೩ | ೨೨ | ಚೆಂದವು |
| ೩೦ | ೧೮ | ಚಾಣ, |
| ೩೧ | ೪ | ಯಾವ ಒಂದು |
| ೪೬ | ೧ | ಸಭ್ಯಕೀರ್ತಿ |
| ೪೯ | ೧ | ಕಾದಂಬರಿಕಾರ |
| ,, | ೪ | ಎಸ್ರಾ |
| ೫೫ | ೧೩-೪ | ಆ ಮನಸ್ಸಿಗೆ. . . .ಕಟ್ಟಿದ್ದು |
| ೬೮ | ೪ | ರೂಪಗೂಡುತ್ತ |
| ೭೦ | ೨೧ | ಗಳದಾಗಲಿ |
| ೮೪ | ೧೭ | ದಶರಥಾದಿಗಳನ್ನು |
| ,, | ೨೧ | ಆದ ರಾಮನು |
| ೯೫ | ೧೫ | ತ್ತಿತ್ತು. |
| ೯೭ | ೮ | ಉಗ್ರಸೇನ, ವಸುದೇವ |
| ೧೦೭ | ೧೬ | ಲಾಗದು |
| ೧೧೬ | ೨ | ಆತನ ಎದುರಿಗೆ |
| ೧೧೮ | ೨೧ | ವಾಲ್ಮೀಕಿಗಳದು ; |
| ೧೩೦ | ೧೪ | ಅವರನ್ನು ( ಬೇಕಿಲ್ಲ ) |
| ೧೩೪ | ೧೬ | ಮಾಡ್ದು |
| ೧೩೯ | ೨ | ಇತರರಾರಿಗೂ |
| ೧೪೪ | ೨೨ | ಎಂದು; ಮಠಾಧಿಕಾರಿ |
| ೧೪೫ | ೧೨ | ಆಸ್ಟ್ರಿಯಾ |
| ,, | ೧೩ | ಬ್ರಿಟಿಷ |

# ಕವಿಕಾವ್ಯದೃಷ್ಟಿ *

ಮೈಸೂರು ದೇಶದಲ್ಲಿ ವಾಸಮಾಡುವ ನಮಗೆ ಮಲೆನಾಡು ಬಯಲು ಸೀಮೆ—ಇವೆರಡರ ಪರಿಚಯ ಮಾತ್ರ ಇರುತ್ತದೆ. ನಾನು ಪೂರ್ತಿ ಬಯಲು ಸೀಮೆಯವನು. ಅಲ್ಲಿ ಇಲ್ಲಿ ನಮ್ಮೂರ ಕಡೆ ಬೆಟ್ಟ ಗುಡ್ಡಗಳಿದ್ದರೂ ನಿಡಿದಾಗಿ ಹಬ್ಬಿದ ಪರ್ವತಶ್ರೇಣಿಯನ್ನು ನೋಡಬೇಕಾದರೆ ನಾನು ಮಲೆನಾಡಿಗೇ ಹೋಗಬೇಕು. ಇವೆರಡರ ಸೌಂದರ್ಯವೂ ಒಂದು ಬಗೆಯದು. ನಮ್ಮ ಸೀಮೆಯ ಸೊಬಗನ್ನು ನಿಮ್ಮ ಕರೆನಾಡಿನಲ್ಲಿ ಕಾಣುವುದು ಸಾಧ್ಯವಿಲ್ಲ. ಅದನ್ನು ಕಂಡಾಗ ನಿಮ್ಮ ಮನಸ್ಸು ಖಂಡಿತವಾಗಿಯೂ ಸೋಲುವುದು. ನಾವು ಅದರಲ್ಲಿಯೇ ಹುಟ್ಟಿ ಬೆಳೆದವರಾದುದರಿಂದ ಅದು ಬಳಕೆಗೆ ಬಂದು ನಮಗೆ ಅಗ್ಗವಾಗಿದೆ. ನಮಗೆ ಹೊಸದಾದ ಈ ಪ್ರದೇಶದ ಚೆಲುವು ಕಾಣಿಸಿದೊಡನೆಯೇ ಅದು ನಮ್ಮ ಕಣ್ಣನ್ನು ಸೂರೆಗೊಳ್ಳುತ್ತದೆ. ಉತ್ತರಕನ್ನಡ ನಾಡನ್ನು ನೋಡಬೇಕೆಂಬ ಆಸೆಯು ನನಗೆ ಬಹುದಿನದ ಬಯಕೆಯಾಗಿದ್ದು ಇಂದು ನೆರವೇರಿದುದಕ್ಕಾಗಿ ನನಗೆ ಹಿರಿದಾದ ಸಂತೋಷ. ಇಂತಹ ಸಂತೋಷವನ್ನು ಒದಗಿಸಿಕೊಟ್ಟುದಕ್ಕಾಗಿ ಈ ಪರಿಷತ್ತಿನ ಸ್ವಾಗತಮಂಡಲಿಯವರಿಗೆ ನಾನು ಕೃತಜ್ಞನಾಗಿದ್ದೇನೆ.

ಮೈಸೂರು ದೇಶದಲ್ಲಿ ನಮಗೆ ಪರಿಚಯವಿರುವ ಪಶ್ಚಿಮಘಟ್ಟದ ಬೆಟ್ಟ ಸಾಲು ಮೈದಾನಕ್ಕೆ ಸುಮುಖವಾಗಿ ಸಾನುವನ್ನು ಧರಿಸಿರುವ ಸಾಲು. ನಿಮ್ಮ ಕಡೆಗಿರುವ ಸಹ್ಯಾದ್ರಿಯ ಸಾಲು ಕಡಲಿಗೆ ಕಾಲು ಚಾಚಿ ನಿಂತಿರುವ ಅಚಲ ಪಂಕ್ತಿ. ಕಡಲೂ ಬೆಟ್ಟಸಾಲೂ ಪ್ರಕೃತಿದೇವಿಯ ಚೊಚ್ಚಲ ಮಕ್ಕಳು.

---

* ೨೯-೧೨-೧೯೪೧ರಲ್ಲಿ ಕಾರವಾರದಲ್ಲಿ ನಡೆದ ಕನ್ನಡ ಕವಿಸಮ್ಮೇಳನದಲ್ಲಿ ಮಾಡಿದ ಭಾಷಣದ ಅನುವಾದ. ಇಲ್ಲಿನ ಶೈಲಿಯು ಪೂರ್ತಿ ಭಾಷಣದ ರೀತಿಯಲ್ಲ, ಪೂರ್ತಿ ಬರವಣಿಗೆಯ ರೀತಿಯಲ್ಲವಾದರೂ ಭಾಷಣದ ರೀತಿಯನ್ನು ಉಳಿಸಿಕೊಂಡು ನೆನಪಿನಲ್ಲಿದ್ದುದನ್ನು ಬರೆದಿದೆ.

ಇವೆರಡೂ ಜೀವನದ ಹಿರಿಮೆಯಲ್ಲಿನ ಎರಡು ದೊಡ್ಡ ತತ್ವಗಳಿಗೆ ಪ್ರತಿನಿಧಿಯಾಗಿವೆ. ಒಂದು ಅಚಲವಾದ ನಿಯಮದ ಎಲ್ಲೆಕಟ್ಟು; ಇನ್ನೊಂದು ಅನಂತ ಸ್ವಾತಂತ್ರ್ಯ ಪ್ರಪಂಚ. ಇವೆರಡೂ ಸಂಧಿಸಿರುವ ನಿಮ್ಮ ಕರೆನಾಡು ಪುಣ್ಯಶಾಲಿಯಲ್ಲದೆ ಏನು? ಜನಸಂಚಾರಕ್ಕೆ ಅಡ್ಡಲಾಗಿ ನಿಂತಿರುವ ಈ ನಿಯಮ ಪಂಕ್ತಿಯನ್ನು ದಾಟಿ ಇಳಿದು ಬಂದ ಹೊರತು ಸ್ವಾತಂತ್ರ್ಯದ ದರ್ಶನವು ನಮ್ಮ ಕಣ್ಣಿಗೆ ಸುಲಭವಾಗಿ ಆಗದು. ನಿಯಮವು ಕೆಟ್ಟದೆಂದಲ್ಲ. ಆದರೆ ಬಹುದಿನ ಕೇವಲ ಅದರ ಕಟ್ಟನಲ್ಲಿಯೇ ಇದ್ದು ಬಿಟ್ಟರೆ ಸ್ವಾತಂತ್ರ್ಯದ ಅನುಭವವೇ ಮರೆತುಹೋಗಿ ಸತ್ಯಕ್ಕೆ ಆ ಒಂದು ಮುಖವೂ ಇದೆ ಎಂಬುದು ಮರೆತುಹೋಗುವುದು.* ಹೀಗೆ ಒಳ್ಳೆಯದಾದ ಸಂಗತಿಯೇ ಏಳಿಗೆಗೂ ಚಲನ ವಲನಕ್ಕೂ ತಡೆಯಾಗುವುದು. ನಿಯಮದ ನಿಶ್ಚಲ ಸ್ವರೂಪವನ್ನು ನೋಡಿ ಎದೆಗುಂದಿ, ಸ್ವಾತಂತ್ರ್ಯದ ವರ್ಣನೆಯನ್ನೂ ಪ್ರಶಂಸೆಯನ್ನೂ ಕೇಳಿ ಆಸೆ ಪಡುತ್ತ ಅದನ್ನು ಕಣ್ತಣಿಯ ಕಂಡು ಪೂಜಿಸಬೇಕೆಂದಿದ್ದ ನಾವು ಬೆಟ್ಟದ ಶಿಖರಗಳನ್ನು ಹತ್ತಿ, ಪಡುವಲನ್ನೇ ದಿಟ್ಟಿಸುತ್ತ, ಕೊರಲೆತ್ತಿ, ಕಣ್ಣನ್ನು ಆಚೆ ಈಚೆ ಆತುರದಿಂದ ಕಳುಹಿಸುತ್ತ ದಾರಿ ನಡೆದು ಬಂದೆವು. ನಿಮ್ಮ ಊರು ಹತ್ತಿರವಾದಷ್ಟೂ ಕಡಲಿಗೆ ಹತ್ತಿರ ಹತ್ತಿರ ಬಂದೆವು. ಆಗೊಮ್ಮೆ ಈಗೊಮ್ಮೆ, ಕೈತೋಟಗಳಾಚೆ, ಕಬ್ಬಿನ ತೋಟಗಳ ನಡುವೆ, ಸರುವೆ ತೋಪುಗಳ ಸಾಲುಗಳ ಸಂದಿನಲ್ಲಿ, ದೂರದ ತೆಂಗು ಹಲಸು ಮಾವುಗಳ ತಳಗೆ ವಿಶಾಲವಾಗಿ ನೆಲಸಿರುವ ನೀರಿನ ನೀಲಿಯೊಟ್ಟಲನ್ನು ನೋಡುತ್ತ ತವಕಗೊಂಡು ಬಂದೆವು. ನಮ್ಮೊಡನೆ ಕಣ್ಣುಮುಚ್ಚಾಲೆಯಾಡುವಂತೆ ಈ ಮೂಲೆಯಲ್ಲಿ ಒಂದು ಸಲ, ಆ ತಿರುವಿನಲ್ಲಿ ಇನ್ನೊಂದು ಸಲ, ಇನ್ನೇನು ಕಣ್ಣಿಗೆ ಕಾಣಿಸಿತು, ಅಗೊ ಅದೇ ಎಂದುಕೊಳ್ಳುತ್ತಿದ್ದ ಹಾಗೆಯೇ ಕಣ್ಣಿಗೆ ಮರೆಯಾದ ಕಡಲು ಪುನಃ ಸ್ವಲ್ಪ ದೂರದಲ್ಲಿ ಮತ್ತೊಂದು ಬಾರಿ ಮೊದಲಿಗಿಂತಲೂ ಸ್ಪಷ್ಟವಾಗಿ ದರ್ಶನ ಕೊಡುತ್ತ, ಕಾಣುತ್ತ ಮರೆಯಾಗುತ್ತ ಆಡಿ, ಕಾಡಿ, ಕಡೆಗೆ ನಿಮ್ಮೂರಿನಲ್ಲಿ ನಾವು ಗಾಡಿಯನ್ನಿಳಿಯುವ ವೇಳೆಗೆ ನಮ್ಮ ಬಿಡದಿಯ ಮನೆಯ ಮುಂದೆಯೇ ಸ್ವಾಗತಕ್ಕಾಗಿ ಕಾದು ನಿಂತಿದ್ದಿತು. ನಾವು ಶ್ರದ್ಧಾಳುಗಳಾಗಿ ಬಂದಿದ್ದೆವೆಂದು ಅದಕ್ಕೆ ಗೊತ್ತಿಲ್ಲವೆ?

---

* ನಮ್ಮ ಸಂಪ್ರದಾಯ ಆಚಾರಗಳಲ್ಲಿ ಆಗಿರುವಂತೆ.

ನಿಮ್ಮ ಈ ಊರು ತಾನೇ ಎಷ್ಟು ಸುಂದರವಾದುದು! ನನಗೆ ಹೀಗೆ ತೋರುತ್ತದೆ: ಪ್ರೀತಿಯ ಮಕ್ಕಳಾದ ನಿಮಗೆ ಸಹ್ಯಾದ್ರಿಯು ತನ್ನ ಮಡಿಲಲ್ಲಿ ಒಂದು ನೆಲೆಯನ್ನು ಕಟ್ಟಿಕೊಟ್ಟು ಕೇವಲ ತನ್ನ ಧೈರ್ಯದಿಂದ ನಿರ್ಭಯಬಂದು ಎಲ್ಲಿ ಜೀವನದ ಇನ್ನೊಂದು ಮುಖವನ್ನು ನೀವು ಮರೆ ತೀರೋ ಎಂಬ ಶಂಕೆಯಿಂದ ತನ್ನ ಸೋದರ ಸಾಗರನಿಗೆ ಹೇಳಿ ನಿಮ್ಮ ಕಣ್ಣೆದುರಿಗೆ ಆತನು ನಿರಂತರನವ್ಯತೆಯಿಂದ ಸುಳಿಯುತ್ತಿರುವಂತೆ ಏರ್ಪಡಿ ಸಿರಬೇಕು. ತನ್ನ ಪರಿಕಾರರಂತೆ ಇರುವ ಆ ಪುಡಿ ಗುಡ್ಡಗಳನ್ನು ದಾರಿಗೆ ಸರಿಯಾಗಿ ನಿಲ್ಲಿಸಿ ನಿಲವುದೀವಿಗೆ ಹೊತ್ತಿಸಿ ಆತನಿಗೆ ಸ್ವಾಗತ ಹೇಳಿಸುತ್ತಿರ ಬೇಕು. ಆದುದರಿಂದಲೇ ನಿಮ್ಮಲ್ಲಿ ನಿಯಮ ಸ್ವಾತಂತ್ರ್ಯಗಳ ಶುಭಾಭಿಸಂಧಿ ಯಿದೆ. ಇಂತಹ ನಿಯಮ ಸ್ವಾತಂತ್ರ್ಯಗಳ ಸಂಗಮಸ್ಥಾನವೊಂದರಲ್ಲಿ ಕನ್ನಡ ಕವಿಸಮ್ಮೇಳನವು ನಡೆಯುತ್ತಿರುವುದು ಸಾಮಾನ್ಯ ಸಂಘಟನೆಯಲ್ಲ. ಅದು ಧ್ವನಿಪೂರ್ಣವಾಗಿದೆ: ನಮ್ಮ ಸಾರಸ್ವತ ಪ್ರಪಂಚದ ಭವಿಷ್ಯಕ್ಕೆ ಶುಭ ಸೂಚಿಕೆಯಾಗಿದೆ.

ಕನ್ನಡ ಕವಿತೆಯು ಈವರೆಗೂ ಕೇವಲ ಪ್ರಾಚೀನ ಸಂಪ್ರದಾಯ ಬದ್ಧವಾಗಿಯೇ ಇದ್ದಿತು. ಆಗೊಂದು ಸಲ ಈಗೊಂದು ಸಲ ಕನ್ನಡಿಗರ ಸ್ವಾತಂತ್ರ್ಯಪ್ರೀತಿಯಿಂದ ಕವಿತೆಯು ಹೊಸ ತಾನಗಳಲ್ಲಿ ಕುಣಿದು ·ನಾಟ್ಯ ವಾಡಿದ್ದರೂ ಬಹುತರ ಹಿಂದಿನ ಹಿಗ್ಗಟ್ಟಿಗೇ ಸಿಕ್ಕಿಬಿದ್ದಿದ್ದಿತು. ಕಾಲವು ಈಗ ಬದಲಾಯಿಸಿದೆ. ಅದರೊಡನೆ ನಮ್ಮ ಜೀವನ ರೀತಿಯೂ ಬದಲಾಯಿಸಿದೆ; ಜನರ ಆಶೆ ಆಕಾಂಕ್ಷೆಗಳು ಬೇರೆಯಾಗುತ್ತಿವೆ. ಹೊಸ ಸಂಪರ್ಕಗಳಿಂದ ಹೊಸ ದೃಷ್ಟಿ ಬಂದಿದೆ. ಹೊಸ ಸೌಂದರ್ಯಗಳೂ ರಸಾನುಭವಗಳೂ ಶುಚಿ ರುಚಿಗಳೂ ನಮ್ಮ ಕಡೆಗೆ ತೇಲಿಬರುತ್ತಲಿವೆ. ಬಹುದಿನದ ನಿರ್ಬಂಧ ದಿಂದ ಕಂದಿದ್ದ ಕವಿಹೃದಯವು ಸ್ವಸ್ವರೂಪವನ್ನು ತಿಳಿದು ಹೊರಗಿನ ಸ್ವಾತಂತ್ರ್ಯ ಸಂಚಾರದಿಂದ ತಾನೂ ಜಾಗೃತವಾಗಿ ಅದರ ಸಂಗ ಬಯಸಿ ಮೇಲಕ್ಕೆ ಉಕ್ಕಿ ಬಂದಿದೆ. ರೂಪದಲ್ಲಿ, ರೀತಿಯಲ್ಲಿ, ಆಸೆಯಲ್ಲಿ, ಸಾಧನ ದಲ್ಲಿ, ಜೀವದಲ್ಲಿ, ರುಚಿಯಲ್ಲಿ, ರಚನೆಯಲ್ಲಿ, ತಾನತಾಂಡವಗಳಲ್ಲಿ, ಧ್ವನಿ ವಿಲಾಸಗಳಲ್ಲಿ ತಮಗೆ ತೋರಿದಂತೆ ವಿಹರಿಸಬೇಕೆಂದು ಬಯಸಿದೆ. ಸ್ವಾಭಾ ವಿಕವೇ ತಾನೆ!

ಒಂದು ದೃಷ್ಟಿಯಿಂದ ನೋಡಿದರೆ ಸಾಹಿತ್ಯದಲ್ಲಿ ಹಳತು ಹೊಸತು

ಎಂಬ ಭೇದವೇ ಇಲ್ಲ. ಹಿಂದಿನ ಕಾಲದ್ದು ಹಳತು, ಇಂದಿನದು ಹೊಸತು ಎಂಬ ಭಾವನೆಯು ಸರ್ವಥಾ ಸರಿಯಲ್ಲ. ಒಂಬತ್ತನೆಯ ಶತಮಾನದಲ್ಲಿ ಹುಟ್ಟಿದ ಒಂದು ಕಾವ್ಯವು ಇಂದಿಗೂ ನಾಳೆಗೂ ಕಾಲಕಾಲಕ್ಕೂ ಹೊಸದಾಗಿಯೇ ಇರಬಹುದು. ಇದೇ ಈ ದಿನ ಬರೆದ ಕವಿತೆಯು ಸತ್ವತಃ ಬಹಳ ಹಳತಾಗಿರಬಹುದು. ಎಂದರೆ ಹೊಸದೆಲ್ಲ ಹೊಸತಲ್ಲ ಹಳದೆಲ್ಲ ಹಳತಲ್ಲ ಎಂದು ಹೇಳಿದಂತಾಯಿತು. ಮಾನವ ಹೃದಯವನ್ನು ಸರಸವಾಗಿ ವಿಶಾಲವಾಗಿ ಸರ್ವತೋಮುಖವಾಗಿ ಚಿತ್ರಿಸುವ, ಅದರ ಒಳಜಾಡನ್ನು ಹಿಡಿದು ಅಲ್ಲಿನ ಸುಖದುಃಖಗಳನ್ನೂ ಆವೇಗಗಳನ್ನೂ ತೋರಿಸುವ ಸಾಹಿತ್ಯವು ಭಾಷಾರೀತಿಗಳಲ್ಲಿ ಹಳದಾಗಿರಲಿ ಹೊಸದಾಗಿರಲಿ ಜೀವಂತವಾಗಿರುವುದು; ಅಮೃತವಾಗುವುದು. ಕವಿಯು ತನ್ನ ಕಾಲದವರನ್ನೇ ಕುರಿತು ಆಗಿನ ಭಾಷೆ, ಶೈಲಿ, ಸಂಪ್ರದಾಯ, ಕಟ್ಟು ಇವುಗಳನ್ನೇ ಅನುಸರಿಸಿ ಮಾತನಾಡುತ್ತಿದ್ದರೂ ಅಡಿಯಲ್ಲಿ ಎಲ್ಲ ಕಾಲಕ್ಕೂ ಸಹಜವಾದ, ಮಾನವ ಪ್ರಪಂಚಕ್ಕೆಲ್ಲಾ ಸಾಮಾನ್ಯವಾಗಿ ಹೊಂದುವ, ರಸಸೃಷ್ಟಿಯನ್ನು ಮಾಡುತ್ತಿರುತ್ತಾನೆ; ಸೌಂದರ್ಯಗಳನ್ನು ನೇಯುತ್ತಿರುತ್ತಾನೆ. ಶುಭಗಳನ್ನು ಬಯಸುತ್ತ, ಹಿಗ್ಗುತ್ತ, ಹಾಡುತ್ತ ಇರುತ್ತಾನೆ. ಪ್ರತಿಭೆಗೆ ಆ ಸಮಯದಲ್ಲಿ ಹೊಳೆದ ಸೌಂದರ್ಯವನ್ನು ಬುದ್ಧಿಯಿಂದ ಸೆರೆಹಿಡಿದು ನಿಲ್ಲಿಸಿ ಅದಕ್ಕೆ ಒಂದು ಭವ್ಯ ಮಂದಿರವನ್ನು ಕಟ್ಟಿಕೊಟ್ಟು ಅಲ್ಲಿ ಅದು ಚ್ಯುತಿಯಿಲ್ಲದಂತೆ ನೆಲಸಿ ಕಾಲದ ಅಂತ್ಯದವರೆಗೂ ಸಹೃದಯರನ್ನು ರಂಜಿಸುವಂತೆ ಏರ್ಪಡಿಸುತ್ತಾನೆ. ಅವನು ಕೇವಲ ತನ್ನ ಗುಂಪಿನವರಿಗೋ ತನ್ನ ಕಾಲದವರಿಗೋ ಮಾತ್ರ ಅರ್ಥವಾಗುವ, ಒಪ್ಪುವ ಸಂಗತಿಗಳನ್ನು ಕುರಿತೇ ಬರೆಯುತ್ತಿದ್ದರೆ ಅವನ ಕಾಲದೊಡನೆಯೇ ಅದೂ ಮೃತವಾಗುತ್ತಿತ್ತು. ನಮ್ಮ ಕಾಲದವರಿಗೆ ಅರ್ಥವಾಗದಾಗುತ್ತಿತ್ತು; ಒಪ್ಪದಾಗುತ್ತಿತ್ತು. ಹೀಗೆ ನಿಜವಾದ ಕಾವ್ಯದಲ್ಲಿ ಕಾಲಾತೀತವಾದ, ದೇಶಾತೀತವಾದ, ಮಾನವ ವರ್ಗಕ್ಕೆಲ್ಲ ಚರಿತ್ರೆಗೆಲ್ಲ ಸಮಕಾಲೀನವಾಗಿ ಹೊಂದಿ ಸಂತೋಷವುಂಟುಮಾಡಬಲ್ಲ, ಜೊತೆಗೆ ಎಲ್ಲರ ಉತ್ಥಾನತೆಗೂ ಸಾಧನವಾಗಬಲ್ಲ ಹಿರಿಯ ಗುಣವಿರುತ್ತದೆ.

ಸಾಹಿತ್ಯವೂ ಕಲೆಯೂ ಸುತ್ತಲಿನ ಜೀವನವನ್ನು ವರ್ಣಿಸುವುವು. ಬದುಕು ಯಾವ ಬಗೆಯದಾಗಿದ್ದರೆ ಕಾವ್ಯವು ಆ ಬಗೆಯದಾಗುವುದು. ಅದರಲ್ಲಿ ಹುರುಳಿದ್ದರೆ ಇದರಲ್ಲಿ ಹುರುಳಿರುವುದು. ಅದಕ್ಕೆ ತಿರುಳಿಲ್ಲದಿದ್ದರೆ

ಇದಕ್ಕೂ ತಿರುಳಿಲ್ಲದಾಗುವುದು. ಜೀವನ್ತವಾದ ಎಲ್ಲ ಕಾಲಗಳಲ್ಲಿಯೂ ದೇಶಗಳಲ್ಲಿಯೂ ಅತ್ಯುತ್ತಮವಲ್ಲವಾದರೆ ಎರಡನೆಯ ಅಂತಸ್ತಿನ ಕಾವ್ಯ ವಾದರೂ ಇದ್ದೇ ಇರುವುದು. ಹುಟ್ಟಿ, ತಿಂದು, ಬೆಳೆದು, ನಿದ್ರೆಮಾಡಿ, ಯಾವ ವಿಶೇಷವನ್ನೂ ಗಳಿಸಿ ಮೆರೆಯದೆ, ಕಾಲಕ್ಕೆ ತುತ್ತಾಗುವ ಯಾವುದನ್ನೂ ಜೀವನ್ತ ವಾಗಿದೆಯೆನ್ನಲಾಗುವುದಿಲ್ಲ. ಉಸಿರನ್ನು ಹೊತ್ತಿದ್ದ ಮಾತ್ರಕ್ಕೇ ಯಾವ ಪ್ರಾಣವೂ ಬದುಕಾಗಲಾರದು. ತಿಳಿವು, ಉತ್ಸಾಹ, ವೀರ್ಯ, ಸಾಹಸ ಗಳಿಲ್ಲದ ಬಾಳು ಬಾಳಲ್ಲ. ಎಲ್ಲಿ ಚೈತನ್ಯಪೂರ್ಣವಾದ ಬದುಕಿರುತ್ತದೆಯೊ ಅಲ್ಲಿನ ಪ್ರತಿಯೊಂದು ಭಾವವೂ ಆಸೆಯೂ ಶ್ರದ್ಧೆಯಿಂದ ಕೂಡಿರುವುವು; ಕಾರ್ಯಮುಖವಾಗಿರುವುವು. ಅಲ್ಲಿ ನಡತೆಯು ಶೀಲಪೂರ್ಣವಾಗಿರುವುದು; ಗುರಿಯು ಉನ್ನತವಾಗಿರುವುದು. ಇಂತಹ ಆವರಣದಲ್ಲಿ ಸಂತತವಾಗಿ ಶಾಸ್ತ್ರ, ಕಲೆ, ಚರ್ಚೆ, ಕಾರ್ಯೋತ್ಸಾಹ ಕಾರ್ಯಸಿದ್ಧತೆಗಳು ತಲೆದೋರಿ ಜೀವನವನ್ನು ಬೆಳಗುವುವು. ಇಂತಹ ಜೀವನವಿದ್ದಲ್ಲಿಯೇ ಕಾವ್ಯಕ್ಕೆ ಪೂರ್ಣ ವಾದ ಆವೇಶವು ದೊರಕಬೇಕಾದರೆ. ದೊಡ್ಡ ಉತ್ಸಾಹಗಳೊ, ಸಂತೋಷ ಗಳೊ, ಸಂಕಟಗಳೊ, ಸಮಾರಂಭಗಳೊ ಇಲ್ಲದಿದ್ದಲ್ಲಿ ದೊಡ್ಡ ಕವಿತೆಯು ಹುಟ್ಟುವುದು ಅಪರೂಪ.*

ಪ್ರತಿಯೊಂದು ಕಾಲದವರಿಗೂ ತಮ್ಮ ಕಣ್ಣಮುಂದಿನ ಪ್ರಪಂಚವೇ ಕಾವ್ಯಾವೇಶವನ್ನೂ ಅನುಭವಗಳನ್ನೂ ಉಂಟುಮಾಡಿ ಕೊಡುವುದು. ಸ್ವಂತ ಅನುಭವಕ್ಕೆ ಬಾರದಿರುವುದನ್ನು ಯಾರೇ ಆಗಲಿ ಚೆನ್ನಾಗಿ ವರ್ಣಿಸಲಾರರು. ಸಮುದ್ರವನ್ನಾಗಲಿ ಯುದ್ಧವನ್ನಾಗಲಿ ಕಂಡಿರದವರು ಅದನ್ನು ಬಣ್ಣಿಸ ತೊಡಗಿದರೆ ಅದರಲ್ಲಿ ಎಷ್ಟು ಸತ್ಯವಿದ್ದೀತು? ವರ್ಣಿಸಲು ತೊಡಗಿದರೆ ಅದಕ್ಕೆ ಜೀವಕಳೆ ಬರುವುದಿಲ್ಲ. ಎಷ್ಟೇ ಸರಳವಾಗಿ ಮೃದುವಿನ್ಯಾಸದಿಂದ, ಎಷ್ಟೇ ಸುಮಧುರ ತಾನಗಳಿಂದ ತಮ್ಮ ಕೃತಿಯನ್ನು ಹೆಣೆಯಲಿ, ಅಲ್ಲಿ ಜೀವದ ಕಾವೂ ಸ್ಪಂದನವೂ ಇರುವುದಿಲ್ಲ. ಆದುದರಿಂದಲೇ ಕವಿಗಳು ಯಾವಾಗಲೂ ತಮ್ಮ ಕಾಲದ ತಮ್ಮ ಅನುಭವದ ವಿಷಯಗಳನ್ನೇ ಕುರಿತು ಹೆಚ್ಚಾಗಿ ಬರೆಯುವರು; ಹಾಗೆ ಮಾಡುವುದೇ ಧರ್ಮ, ಕರ್ತವ್ಯ ಎಂದು ಅರಿಯುವರು. ತಮ್ಮ ಅನುಭವದ ಮಾರ್ಗವನ್ನೂ ಓಟವನ್ನೂ ಹಿಡಿದು

---

* ತಳಮಳವೂ, ಸಂಕ್ರಾಂತಿಯೊ, ಸೋಲಿನ ವ್ಯಥೆ ಕ್ಲೇಶಗಳೊ ಇರುವಾಗಲೇ ಉತ್ತಮ ಸಾಹಿತ್ಯ ಹುಟ್ಟಿರುವುದು, ಹುಟ್ಟುವುದು ಎಂಬ ವಾದವೂ ಇದೆ.

ಓಡುವುದೇ ಹಾಗೆ ಓಡಿ ಅದರ ಜೀವಕಳೆಯನ್ನು ಮೆರೆಸಿ ಹಾಡುವುದೇ ಅವರ ಸ್ವಾತಂತ್ರ್ಯ. ತಾವು ಕಂಡು ಕೇಳಿದುದನ್ನು, ಅನುಭವಿಸಿದುದನ್ನು ಹಿಗ್ಗಿಸಿ ಕೊಂಡು ಹೊಂದಿಸಿಕೊಂಡು, ಕಲೆಯ ತನಿರಸವನ್ನು ಅದಕ್ಕೆ ಧಾರೆಯೆರೆದು ತಮ್ಮ ಶಿಕ್ಷಣ ಸಂಸ್ಕಾರಗಳಿಂದ ಪಡೆದ ನಿಪುಣತೆಯನ್ನೆಲ್ಲ ವೆಚ್ಚ ಮಾಡಿ ಸ್ವಂತವಾದ ಕಾವ್ಯವನ್ನು ನಿರ್ಮಾಣ ಮಾಡುವರು. ಹೀಗೆ ಹೇಳುವುದು ಕೂಡ ಒಂದು ವಿಧದಲ್ಲಿ ಅಸತ್ಯವೇ ಆಗುವದು. ಏಕೆಂದರೆ ಕಾವ್ಯಸೃಷ್ಟಿಯಲ್ಲಿ, ಪ್ರತಿಭೆಯದಿಷ್ಟು ಭಾಗ, ವಸ್ತುವಿನದು ಇಷ್ಟು ಭಾಗ, ರಚನಾನಿಪುಣತೆ ಇಷ್ಟು ಭಾಗ, ಆವೇಶ ಇಷ್ಟು ಭಾಗ, ಛಂದಸ್ಸು ಇಷ್ಟು ಭಾಗ ಎಂದು ಮುಂತಾಗಿ ಅಳತೆ ತೂಕಗಳನ್ನು ಜೋಡಿಸಿ ಯಾರೂ ಕವಿತೆಯನ್ನು ಬರೆಯುವುದಿಲ್ಲ. ಆವೇಶ ಸಾಮಗ್ರಿಯಿಂದ ಪ್ರತಿಭೆಯು ಉದ್ದೀಪ್ತವಾಗಿ ಶಾಖಗೊಂಡು, ಕುದಿದು ಒಂದು ಪಾಕಕ್ಕೆ ತಿರುಗಿ ಕವಿಯ ಮನಸ್ಸಿನಲ್ಲಿಯೇ ಮೊರೆದು, ಕುಣಿದು, ಸಂತತವಾಗಿ ಧ್ವನಿಗೈಯುತ್ತಿರುವ ಒಂದು ನಾದಲಯ ಪ್ರಪಂಚದಲ್ಲಿ ಒಳಗೇ ಹದವಾಗಿ, ಒಂದು ಧಾಟಿಯಲ್ಲಿ ಬೆಸೆದುಕೊಂಡು, ತನ್ನದೇ ಆದ ಒಂದು ವಿಶಿಷ್ಟರೀತಿಯಲ್ಲಿ ಸಂಪೂರ್ಣ ಅವಯವಿಯಾಗಿ ಹೊರ ಹೊಮ್ಮುತ್ತದೆ. ಅದನ್ನು ಕಂಡು ಕೇಳಿದ ನಾವು ಬುದ್ಧಿಯಿಂದ ಆಮೇಲೆ ಅದರ ವಿಭಜನೆಮಾಡಿ ಇಲ್ಲಿ ಈ ಈ ಅಂಶವು ಇಷ್ಟಿಷ್ಟು ಎಂದು ಅರ್ಥಮಾಡಿ ಕೊಳ್ಳುತ್ತೇವೆ. ಆಗಲೂ ಅದರ ಜೀವಾಳವು ಇಲ್ಲೇ ಇದೆ, ಹೀಗೇ ಉಂಟಾ ಗಿದೆ ಎಂದು ಹೇಳುವುದು ಕಷ್ಟ. ಕಾವ್ಯದಲ್ಲಿ ವಿಷಯ, ಶೈಲಿ, ರೂಪ, ಛಂದಸ್ಸುಗಳ ಸಂಬಂಧವು ದೇಹಾತ್ಮ ಸಂಬಂಧದಂತೆ. ಅದನ್ನು ಪ್ರತ್ಯೇಕವಾಗಿ ತೋರಿಸಲು ಸಾಧ್ಯವಿಲ್ಲ. ಆಯಾ ಭಾಗಗಳನ್ನು ಪ್ರತ್ಯೇಕಿಸಲು ಪ್ರಯತ್ನ ಪಟ್ಟರೆ ಕಾವ್ಯದ ಜೀವವು ಹಾರಿಹೋಗುವುದು.

ಹಿಂದಿನ ಕಾಲದ ಕವಿಗಳೆಲ್ಲರೂ ತಮಗೆ ಇಷ್ಟವಾದ ಬಳಕೆಯಾದ ಕಥಾ ವಸ್ತುಗಳನ್ನು ಆರಿಸಿಕೊಂಡರು; ತಮ್ಮ ಅನುಭವದಿಂದ ಅವುಗಳನ್ನು ಪೋಷಿ ಸಿದರು; ಅವನ್ನು ಕುರಿತು ಬರೆದರು, ಹಾಡಿಕೊಂಡರು; ಪ್ರಪಂಚಕ್ಕೆ ದಿವ್ಯ ವಾದ ಸಾಹಿತ್ಯ ದಾನಮಾಡಿದರು. ಅವರ ಕಾಲವು ಅವರ ಕೃತಿಯಲ್ಲಿ ಹೊರತು ಅವರೊಡನೆಯೇ ಹೋಯಿತು. ಈಗ ನಮ್ಮ ಸುತ್ತಲಿರುವ ಪ್ರಪಂಚದ ರೀತಿಯೇ ಬೇರೆಯಾಗಿದೆ. ಕಡೆಗೆ ಈಗ್ಗೆ ಐವತ್ತು ವರ್ಷಗಳ ಹಿಂದೆ ಬದುಕಿದ್ದ ನಮ್ಮ ತಾತಂದಿರು ಇಲ್ಲಿಗೆ ಬಂದು ನೋಡುವುದು ಸಾಧ್ಯ

ವಾದರೆ ಇದರಲ್ಲಿ ಬಹು ಭಾಗವನ್ನು ಗುರುತಿಸಲಾರರು. ನಮ್ಮ ವೇಷ, ನಡತೆ, ಅಭಿಪ್ರಾಯದ ಹಲವಂಶ ಅವರಿಗೆ ಅರ್ಥವಾಗದು. ನಮ್ಮ ಕೆಲವು ಉತ್ಸಾಹಗಳನ್ನೂ ಭಕ್ತಿಗಳನ್ನೂ ನೋಡಿ ಬೆದರಿಯಾರು. ಅವರ ಪ್ರಪಂಚ ಕ್ಕಿಂತ ನಮ್ಮದು ಹೆಚ್ಚು ವಿಸ್ತಾರವಾಗಿದೆ. ವಿಧವಿಧವಾದ ಸಿಕ್ಕುಗಳಲ್ಲಿಯೂ ಪರಾಧೀನತೆಗಳಲ್ಲಿಯೂ ಸಿಕ್ಕಿಹಾಕಿಕೊಂಡಿದೆ. ಅಖಂಡವಾದ ಮಾನವ ಪ್ರಪಂಚವೇ ಈಗ ನಮ್ಮ ಕಣ್ಣೆದುರಿಗೆ ಎದ್ದು ನಿಂತು ನಮ್ಮ ಸಂಕೋಚ ಗಳನ್ನು ಮುರಿದು ನಾಶಮಾಡುತ್ತಿದೆ; ನಮ್ಮ ಭುಜಗಳನ್ನಪ್ಪಳಿಸಿ ಅವನ್ನು ವಿಶಾಲಗೊಳಿಸುತ್ತಿದೆ; ಮನಸ್ಸನ್ನು ತನ್ನಗಲಕ್ಕೆ ತೆರೆಯಿಸುತ್ತ ತನ್ನ ಸಮಕ್ಕೆ ನಿಂತು ಯೋಚಿಸು, ನಿರ್ವಹಿಸು ಎಂದು ಕೂಗುತ್ತಿದೆ. ಈಗಿನ ಆಸೆ, ಆವಶ್ಯ ಕತೆ, ಕಾರ್ಯರೀತಿ, ಜೀವನದ ಲಕ್ಷ್ಯಗಳೇ ಬೇರೆ. ಅವು ಕೇವಲ ನಮ್ಮವು. ಆದುದರಿಂದ ನಮ್ಮ ಕೃತಿಗಳು ನಮ್ಮ ಜೀವನದಂತೆ ಇರಬೇಕು.

ಮೊದಲು ನಾವು ನಮ್ಮ ಕಾಲಕ್ಕೆ ಸೇರಿದವರು. ಆಮೇಲೆ, ಬೇಕಾದರೆ, ಇತರ ಕಾಲಕ್ಕೆ ಸೇರಬಹುದು. ನಮಗೆ ಕವಿತಾವೇಶ ನಮ್ಮ ಪ್ರಪಂಚದ ಪ್ರಶ್ನೆಗಳಿಂದ, ತೊಡಕುಗಳಿಂದ, ಉತ್ಸಾಹ ಸಾಧನೆಗಳಿಂದ, ಸಂತೋಷ ವಿಜೃಂಭಣಗಳಿಂದ, ಸೋಲು ನಿರಾಶೆಗಳಿಂದ ಬರುವುದೇ ಸರಿ. ಅವುಗಳ ಗೌರವದಿಂದ ನಮ್ಮ ಕಾವ್ಯಕ್ಕೆ ಗೌರವವು ಬರಬೇಕು. ಅದು ಬಿಟ್ಟು ನಮಗೆ ಪರಿಚಿತವಲ್ಲದ ಬೇರೆ ಒಂದನ್ನು ಅಟ್ಟಿ ಹೋದರೆ ಆತ್ಮವಂಚನೆಯಾಗುವುದು. ಅದೂ ಅಲ್ಲದೆ, ಬೇರೆಯೊಂದನ್ನೇಕೆ ನಾವು ಅರಸಿ ಹೋಗಬೇಕು? ವರ್ತಮಾನ ದಲ್ಲಿ ಬದುಕು ಬದುಕುತ್ತಿರುವ ನಮಗೂ ದೇವರು ಬೇಕಾದಷ್ಟು ಅವಕಾಶ ಗಳನ್ನು ಕಲ್ಪಿಸಿಕೊಟ್ಟಿಲ್ಲವೆ? ನಮಗೂ ಮೈ ಕೈಕಾಲು, ಕಣ್ಣು ಕಿವಿ ಮೂಗುಗಳಿಲ್ಲವೆ? ಮನಸ್ಸು ನಾಲಿಗೆಗಳಿಲ್ಲವೆ? ನಮ್ಮ ಸುತ್ತಲಿರುವ ಪ್ರಪಂಚದಲ್ಲಿಯೂ ಎಂದಿನಂತೆಯೇ ಸಂಜೆ ಬೆಳಗುಗಳು; ಚಂದ್ರಸೂರ್ಯರು; ವಿಧವಿಧವಾದ ಬಣ್ಣಬೆಡಗುಗಳು; ನೆಳಲು; ಬಿಸಿಲು; 'ತಾರಾಗ್ನಿ, ಹಿಮಾಶ್ರು, ಕಾಮನ ಬಿಲ್ಲಿನ ಕಾದ ಹೊನ್ನು' — ಇವು ಬೆಡಗಿಂದ ನಿಂತು ಕಾಣುವವು. ಎಂದಿನಂತೆಯೇ ಎಲೆ ಹೂ ಹಣ್ಣು ಬಳ್ಳಿಗಳ, ಪಕ್ಷಿಮೃಗ ನದಿ ಸರೋವರಗಳ ಸುಂದರ ಪ್ರಪಂಚವಿದೆ. ವಿಶಾಲವಾಗಿ ಹಬ್ಬಿರುವ ಸಮುದ್ರದ ಅಲೆಗಳು ಎಂದಿನಂತೆಯೇ ಆವೇಶದಿಂದ ಘೋಷಿಸುತ್ತ ಗರ್ಜಿಸುತ್ತ, ಬೆಳ್ನೊರೆ ಗಳನ್ನು ಹೊತ್ತು ಸರಸವಾಡುತ್ತ ಒಂದು ಬಗೆಯ ವೀರಮೋಹಕತೆಯನ್ನು

ಕಣ್ಣಿಗೆ ಕವಿಸುತ್ತಿವೆ. ಮಾನವ ಹೃದಯವು ಎಂದಿನಂತೆಯೇ ತಿಳಿವಿನಲ್ಲಿ, ಅಜ್ಞಾನದಲ್ಲಿ, ರಾಗದ್ವೇಷಗಳಲ್ಲಿ, ಉನ್ನತಿ ಅವನತಿಗಳಲ್ಲಿ, ತೇಲುತ್ತ ಮುಳುಗುತ್ತ ನವರಸ ಸೃಷ್ಟಿಗೆ ಉಪಕರಣ ಸಾಮುಗ್ರಿಗಳನ್ನು ಒಂದೇ ಸವನೆ ಒದಗಿಸಿಕೊಳ್ಳುತ್ತಲೇ ಇದೆ. ಹೀಗಿರುವಾಗ ನಾವು ಇತರರ ಕಣ್ಣಿನಿಂದ ಏಕೆ ನೋಡಬೇಕು? ಅವರ ಬುದ್ಧಿಯ ಕಟ್ಟನಲ್ಲಿ ತೊಡರಿಕೊಂಡು ತೆವಳಿಕೊಂಡು ಏಕೆ ನಡೆಯಬೇಕು? ಅವರ ಭಾವಕ್ಕೆ ಏಕೆ ದಾಸರಾಗಬೇಕು? ನಮಗೆ ಕಾಣುವ ನೋಟಗಳನ್ನು ನಾವು ಚಿತ್ರಿಸೋಣ. ನಮ್ಮ ಕಾಲದಲ್ಲಿ ಶೃಂಗಾರ ವಿಲ್ಲವೆ? ಒನಪು ಒಯ್ಯಾರ, ಬಿಂಕ ಬಿನ್ನಾಣಗಳಿಲ್ಲವೆ? ಎಲ್ಲ ಬಗೆ ಯಲ್ಲಿಯೂ ಬಿಡುಗಡೆಯನ್ನೂ ಸ್ವಾಧೀನತೆಯನ್ನೂ ಬಯಸಿ, ಆದುದಾಗಲಿ ಸಾಧಿಸಿಯೇ ತೀರುವೆವು ಎಂದು ನಿಶ್ಚಲ ನಿಶ್ಚಯದಿಂದ ಮುಂದುವರಿಯುತ್ತಿ ರುವ ನಮ್ಮ ಜನತೆಯಲ್ಲಿ ಈಗ ವೀರವಿಲ್ಲವೆ? ಶೌರ್ಯದ ವೈಭವವಿಲ್ಲವೆ? ಇಲ್ಲಿನ ಅನ್ಯಾಯ ಕಠಿಣತೆ ಸಂಕಟಗಳಿಗೆ ಕರಗುವ ಕರುಣೆ ಶೋಕಗಳಿಲ್ಲವೆ? ಸರಸ ಹಾಸ್ಯಗಳಿಗೆ ಎಡೆಯಿಲ್ಲವೆ? ಒಂದು ದಿನಕ್ಕೆ ಒಂದು ನೂರು ಭೀಕರ ಭಯಾನಕ ಪ್ರಸಂಗಗಳ ಕಥೆಯು ನಮ್ಮ ಕಿವಿಗಳನ್ನಿರಿಯುತ್ತಿಲ್ಲವೆ? ಕರು ಳನ್ನು ಕೆವುಚಿ ಹಿಂಡಿ ಜೀವನವನ್ನು ಒಳಗಿನಿಂದಲೇ ತಿಂದು ನಾಶ ಮಾಡುವ ವೆತೆಗಳೂ, ಸಂದೇಹ ಸಂಶಯಗಳೂ, ಪ್ರವೃತ್ತಿ ಯುದ್ಧಗಳೂ ಇಲ್ಲವೆ? ಇವು ಗಳನ್ನು ಕುರಿತು ನಮ್ಮ ಕವಿಗಳು ಹಾಡುವರು. ಇವನ್ನು ಅರಿಯದವರು— ಇವನ್ನು ವರ್ಣಿಸಲಾರದವರು, ತಮಗೆ ಪರಿಚಿತವಲ್ಲದ—ಬೇರೆ ಯಾರಿಗೋ ಸೇರಿದ ಪ್ರಪಂಚವೊಂದನ್ನು ಹೇಗೆ ವರ್ಣಿಸಿಯಾರು? ನಮ್ಮ ಕಲ್ಪನೆಗೆಲ್ಲ ನಮ್ಮ ಪ್ರಪಂಚವೇ ತಳಹದಿ. ಅದರ ಮೂಲಕವೇ ಇತರ ಪ್ರಪಂಚಗಳ ಸ್ವರೂಪಜ್ಞಾನವಾದರೂ ನಮಗೆ ಆಗಬೇಕಾದರೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಯಾವುದನ್ನು ವರ್ಣಿಸಿದರೂ ನಮ್ಮದನ್ನೇ ಎಲ್ಲೆಲ್ಲಿಯೂ ನಾವು ವರ್ಣಿಸುವುದು ಎಂದು ಕೂಡ ಹೇಳಬಹುದು.

ಹಿಂದಿನ ಕಾವ್ಯಗಳಲ್ಲಿ ಕಾಣುವ ವಸ್ತುವಾವುದು? ಯಾರೋ ರಾಜರು, ಅರಸು ಮನೆತನಗಳು, ಅವರ ಕಷ್ಟಸುಖ, ಅಭಿಸಾರ ವಿರಹ, ಭೋಗ; ಪುರಾಣ, ಇತಿಹಾಸ, ಮತಧರ್ಮಬೋಧೆ; ಋಷಿ ಮುನಿ ಯೋಗಿವರ್ಗಗಳ ವರ್ಣನೆ; ದಿವ್ಯಾತ್ಮರ ಜನ್ಮಕಥೆ, ಪವಾಡಗಳ ವಿಚಾರ; ರಾಜರ ಯುದ್ಧ; ಭಕ್ತಿ, ವೈರಾಗ್ಯ—ಇಷ್ಟರಲ್ಲಿ ಸುಮಾರು ಅದು ಮುಗಿದು ಹೋಗುತ್ತಿತ್ತು.

ಸಾಮಾನ್ಯ ಜನಜೀವನದ ಚಿತ್ರವು ಅಲ್ಲಿ ವಿಶೇಷವಾಗಿರುತ್ತಿರಲಿಲ್ಲ. ಎಲ್ಲ ಕರಣಗಳ ಎಲ್ಲ ಪ್ರವೃತ್ತಿಗಳನ್ನು ಹೂಡಿ ಬಾಳಬೇಕೆಂಬ ಆಸೆಯು ಅಷ್ಟು ತೀವ್ರವಾಗಿ ಜನರ ಲಕ್ಷ್ಯದಲ್ಲಿರುತ್ತಿರಲಿಲ್ಲ. ಆಗಿನವರು ಶಾಂತಿಯನ್ನು ಅರಸುತ್ತಿದ್ದರು ; ವೈರಾಗ್ಯಕ್ಕೆ ಹೆಚ್ಚು ಬೆಲೆ ಕೊಡುತ್ತಿದ್ದರು. ಅವರ ಸುಖ ಭೋಗಾಭಿಲಾಷೆಗಳೂ ಬೇರೆ ಒಂದು ರೀತಿಯವಾಗಿದ್ದವು. ನಮ್ಮ ಕಾಲ ದಲ್ಲಿ ಆ ಬಗೆಯ ರಾಜಕೀಯ ಸಾಮಾಜಿಕ ಆರ್ಥಿಕ ಆವರಣವಿಲ್ಲ. ಉತ್ತಮ ರಾದ ಈಗಿನ ಅನೇಕರಿಗೆ ಪುರಾಣೇತಿಹಾಸ ಮತಪ್ರಕ್ರಿಯೆಗಳಲ್ಲಿ ಹಿಂದಿನವರಿ ಗಿದ್ದಷ್ಟು ಶ್ರದ್ಧೆಯಿಲ್ಲ. ಜೀವನವು ಹಿಂದಿನಷ್ಟು ವಿರಕ್ತಿಮುಖವಾಗಿಲ್ಲ. ಕಡೆಗೆ ಭೋಗದಲ್ಲಿಯೂ ಯಾವುದೋ ಒಂದು ಬಗೆಯ ನವ್ಯತೆಯನ್ನೂ ಸ್ವಾತಂತ್ರ್ಯವನ್ನೂ ಈಗಿನವರು ಬಯಸುತ್ತಿದ್ದಾರೆಂದು ಹೇಳಬಹುದು. ಮನಸ್ಸಿನಲ್ಲಿ ಏಳುವ ಎಲ್ಲ ಪ್ರವೃತ್ತಿಗಳನ್ನೂ ಸಂತತವಾಗಿ ತುಳಿಯುವುದು ಜೀವನದ ಆರೋಗ್ಯಕ್ಕೂ ಕೀರ್ತಿಗೂ ಕ್ಷೇಮವಲ್ಲವೆಂದು ತಿಳಿದಿರುವರು. ಹೊರಗಿನ ಪ್ರಪಂಚದಲ್ಲಿ ಪರಸ್ಪರ ಸೌಹಾರ್ದ, ರಾಜಕೀಯ ಸ್ವಾತಂತ್ರ್ಯ, ಸರ್ವಸಮದೃಷ್ಟಿ, ಐಕಮತ್ಯ, ಸಮತೆ, ಸಹನೆ, ಹೃದಯವೈಶಾಲ್ಯ ಇವು ಗಳನ್ನು ಸಮಾಜದ ಜನರು ಹೇಗೆ ಬಯಸುತ್ತಿರುವರೋ ಅದೇ ಬಗೆಯ ಸ್ವಾತಂತ್ರ್ಯವನ್ನೂ ಸರ್ವಸಮದೃಷ್ಟಿಯನ್ನೂ ಮಾನಸಿಕ ವ್ಯವಹಾರದ ಲ್ಲಿಯೂ ಬಯಸುವರು. ವೇದ, ಧರ್ಮಶಾಸ್ತ್ರ ಮುಂತಾದವುಗಳ ಸಂಬಂಧ ದಲ್ಲಿ ಕೂಡ ತಮಗೆ ತೋರುವ ಸಂಶಯಗಳನ್ನು ಎತ್ತಿ ಹಿಡಿದು ಚರ್ಚೆಗಳನ್ನು ಹೂಡಿ ತತ್ವವನ್ನು ತಿಳಿಯಲು ಪ್ರಯತ್ನಪಡುವರು. ಚಾರ್ವಾಕಾದಿ ಮತ ಗಳಿಂದ ಹಿಡಿದು ವೇದಾನ್ತದ ಹಲವು ಸಿದ್ಧಾನ್ತಗಳನ್ನು ಮಾಡಿದ ಜನರ ವಂಶಜರಿಗೆ, ಯಮನನ್ನು ಹೋಗಿ ಕಾಡಿಸಿ ಸತ್ಯವನ್ನು ತಿಳಿಯಬಯಸಿ ದವರ ಸಂತತಿಗೆ ಇಂತಹ ಯೋಚನೆಯ ಸ್ವಾತಂತ್ರ್ಯವು ತಕ್ಕುದಲ್ಲ ವೆಂದರೆ ಯಾರು ಸುಮ್ಮನಿರಲಾದೀತು ? ಕೇವಲ ಆಚಾರಕ್ಕೆ ಬೆಲೆಕೊಟ್ಟು, ಆಚಾರವೇ ಧರ್ಮವೆಂದು ಹಟಹಿಡಿದು ಕೂತವರಿಗೆ ಈ ನಡವಳಿಕೆಯು ನಾಸ್ತಿಕತೆ, ಅಧಿಕಪ್ರಸಂಗ ಮುಂತಾಗಿ ತೋರಿಬಂದರೂ ಈಗಿನವರು ಕುಂದದ ಶ್ರದ್ಧೆಯಿಂದ ಧರ್ಮದ ಸ್ವರೂಪವನ್ನು ತಮ್ಮ ಬುದ್ಧಿಗೆ ನಿಶ್ಚಯ ತರುವಂತೆ ತಿಳಿದುಕೊಳ್ಳಬೇಕೆಂದು ಪ್ರಯತ್ನಿಸುವರು. ಚಾರಿತ್ರಕ ದೃಷ್ಟಿಯಿಂದ ನೋಡುವರು ; ವಿಮರ್ಶಾದೃಷ್ಟಿಯಿಂದ ನೋಡುವರು ; ವಿಷಯಗಳನ್ನು

ತೂಲನಮಾಡಿ ತತ್ವ ಸಂಪ್ರದಾಯಗಳಿಗೆ ಪರಸ್ಪರ ತಾರತಮ್ಯಗಳನ್ನು ಹೂಡಿ ಪರೀಕ್ಷೆಮಾಡುವರು. ಧರ್ಮಕ್ಕೆ ಧರ್ಮತ್ವವನ್ನು ಕೊಡುವ ಗುಣ ವಾವುದು, ಅದನ್ನು ಏಕೆ ಅನುಸರಿಸಬೇಕು? ಸ್ವರ್ಗನರಕಗಳಿವೆಯೆ? ಶುಚಿ ಜೀವನದ ಲಕ್ಷಣವೇನು? ಬದುಕಿನ ಸಾರವಾವುದು? ಎಂದು ತಿಳಿಯಲು ನಿರಂತರವಾಗಿ ಪ್ರಯತ್ನಿಸುವರು. ಹಿಂದಿನ ತೀರ್ಮಾನಗಳಿಗೇ ಕಡೆಗೆ, ಅವರು ಹಿಂತಿರುಗಬಹುದು. ಆದರೂ ತಮಗೆ ಸರಿಯೆಂದು ತೋರಿದ ದಾರಿಯಲ್ಲಿ ಹೋಗಿ ಸತ್ಯವನ್ನು ಹುಡುಕಿ ಅದನ್ನು ತಮ್ಮ ರಕ್ತಗತವಾಗಿ ಮಾಡಿಕೊಳ್ಳಬೇಕೆನ್ನುವರು. ಅವರು ಒಪ್ಪಿ ಆಚರಿಸುವ ಧರ್ಮವು ಸರ್ವಥಾ ಅವರದಾಗಬೇಕು.

ಈಗ ಅವರ ಸುತ್ತಲೂ ಎಲ್ಲೆಲ್ಲಿ ನೋಡಿದರೂ ಅಗಾಧವಾದ ಸಮಸ್ಯೆಗಳೂ ತೊಡಕುಗಳೂ ಅಸಂಬದ್ಧತೆಗಳೂ ಕಾಣುವುವು. ತೀರದ, ಹರಿಯದ ಸಂದೇಹಗಳು ಉಂಟಾಗಿರುವುವು.

Wandering between two worlds, one dead,
The other powerless to be born,
With nowhere yet to rest my head, —

ಎಂಬಂತೆ, ಎರಡು ನಾಗರಿಕತೆಗಳ ಈ ಸಂಕ್ರಾಂತಿ ಸಮಯದಲ್ಲಿ ಭಾವಗಳಲ್ಲಿಯೂ ಸಂಪ್ರದಾಯಗಳಲ್ಲಿಯೂ, ಸಿದ್ಧಾಂತಗಳಲ್ಲಿಯೂ ಪರಸ್ಪರ ಹೊಂದಿಕೆಯಿಲ್ಲದಿರುವುದನ್ನೂ ವಿರೋಧವನ್ನೂ ನೋಡಿ ಅವರು ಕಾತರರಾಗಿದ್ದಾರೆ. ಅವನ್ನು ಹೇಗೆ ಸಮನ್ವಯಮಾಡುವುದು? ಯಾವುದು ಸರಿ, ಯಾವುದು ತಪ್ಪು? ಈ ಕೋಟಲೆಗಳ ನಡುವೆ ನಮ್ಮ ಧರ್ಮವೇನು? ಲಕ್ಷ್ಯವಾವುದು? ಎಂದು ತಮ್ಮನ್ನು ತಾವೇ ಕೇಳಿಕೊಳ್ಳುತ್ತಿರುವರು. ಆದುದರಿಂದ ಈಗಿನ ಎಲ್ಲ ಕಾರ್ಯರಂಗಗಳಲ್ಲಿಯೂ ಸತ್ಯಶೋಧನೆಯ ಕೆಲಸವು ನಡೆಯುತ್ತಿದೆ. ಇದರ ಸಹಾಯಕ್ಕಾಗಿ ಸ್ವಾತಂತ್ರ್ಯವಲ್ಲದ ಸ್ವಾತಂತ್ರ್ಯವೊಂದು ನೆರೆಯುತ್ತಿದೆ. ಈ ಬುದ್ಧಿಯು ಸಾಹಿತ್ಯಕ್ಕೂ, ಸಾಹಿತ್ಯದ ಅತಿಸುಂದರ ಪುಷ್ಪವಾದ ಕವಿತೆಗೂ ಬರುವುದರಲ್ಲಿ ಆಶ್ಚರ್ಯವಿಲ್ಲ.

ಮುಖ್ಯವಾಗಿ ಇಲ್ಲಿ ಹೇಳಬೇಕೆಂದಿರುವುದು ಇಷ್ಟೇ: ಹಿಂದಿನ ರೀತಿ ನೀತಿ ನಿಯಮ ಕಟ್ಟುಡಗಳು ಈಗಿಗೆ ಸಾಲವು. ಅವುಗಳಲ್ಲಿ ಸಾರವತ್ತಾದುವನ್ನು ವಿಂಗಡಿಸಿಕೊಂಡು ಉಳಿದುದನ್ನು ಗುಡಿಸಿ ಹೊರಗೆ ಹಾಕಬೇಕಾಗಿದೆ.

ಅವನ್ನು ಈಗಿನ ಪ್ರಯೋಜನಕ್ಕೂ ಸುಖಜೀವನಕ್ಕೂ ಸಾಧನಕ್ಕೂ ಹಿಗ್ಗಿಸಿಕೊಳ್ಳಲು ಪ್ರಯತ್ನ ನಡೆಯುತ್ತಿದೆ. ಅಶುಚಿಯೆಂದು ಶವವನ್ನು ಸುಟ್ಟು ಬೂದಿಮಾಡುತ್ತಿದ್ದ ಜನಾಂಗವು ಮನೋರಾಜ್ಯದ ಶವಗಳನ್ನು ಕಾಪಾಡಿಡುವುದು ಶೌಚಸಾಧಕವಲ್ಲವೆಂಬುದನ್ನು ಮರೆಯಲಾಗದು. ಹಿಂದಿಗೂ ಈಗಿಗೂ ಜೀವನದ ಗುರಿಯಲ್ಲಿ ಕೂಡ ಎಷ್ಟು ವ್ಯತ್ಯಾಸ? ಆ ಪ್ರಪಂಚದಲ್ಲಿ ವೈರಾಗ್ಯಕ್ಕೂ ಶಾಂತಿಗೂ ಎಷ್ಟು ಗೌರವವಿತ್ತೆಂಬುದನ್ನು ನೀವೆಲ್ಲರೂ ಬಲ್ಲಿರಿ. ಅವರಿಗೆ ತಿನ್ನಲು ಉಣ್ಣಲು ಬೇಕಾದಷ್ಟಿತ್ತು. ಹೊರಗಿನಿಂದ ಬಂದ ಯಾವ ಆಪತ್ತೂ ಅವರನ್ನು ಅಷ್ಟಾಗಿ ಕೋಟಲೆಗೊಳಿಸುತ್ತಿರಲಿಲ್ಲ. ಅವರ ಜೀವನದ ಕ್ರಮವನ್ನು ಬದಲಾಯಿಸುವಷ್ಟು ಪ್ರಬಲವಾಗುತ್ತಿರಲಿಲ್ಲ. ಇರುವಷ್ಟು ದಿನ ಸುಖವಾಗಿದ್ದು, ಗಾಢವಾಗಿ ಆಲೋಚಿಸಿ ಈ ಸಂಸಾರದಲ್ಲಿ ಬೇಸರ ಬಂದು ಇದರ ಅಸಾರತೆಯನ್ನು ಕಂಡು, ಇದರಿಂದ ಬಿಡುಗಡೆಯನ್ನು ಬಯಸುವುದು ಅವರಿಗೆ ಸಹಜವಾಗಿತ್ತು. ಸಂಸಾರದ ಸಾರತೆ ಅಸಾರತೆಯನ್ನು ಕೇವಲ ಜ್ಞಾನದಿಂದಲೇ ತಿಳಿದು ಅದರ ವಾಸನೆಯನ್ನೇ ಹಚ್ಚಿಕೊಳ್ಳದೆ ಪ್ರಪಂಚವನ್ನು ಬಿಡುತ್ತಿದ್ದವರೂ ಹಲವರಿದ್ದರು. ಅಂತೂ ಆ ಕಾಲದ ಜೀವನದಲ್ಲಿ ಪ್ರತಿಯೊಂದು ಅಂಶವೂ ಒಂದು ಸಂಪೂರ್ಣ ಅವಯವಿಯಲ್ಲಿನಹಾಗೆ ಒಂದಕ್ಕೊಂದು ಹೊಂದಿಕೊಂಡಿತ್ತು; ಹಾಸುಹೊಕ್ಕುಗಳಂತೆ ಎಲ್ಲ ನಡತೆಯೂ ಯೋಚನೆಯೂ ಹೆಣೆದುಕೊಂಡಿದ್ದುವು. ಆದುದರಿಂದ ಆ ಶಾಂತಿಯೂ ವೈರಾಗ್ಯವೂ ಒಂದು ಸಮಗ್ರನಾಗರಿಕತೆಯ ಗುರಿಯಂತೆ, ನೆಲೆಯಂತೆ ಇದ್ದುವು.

ಆ ಬಗೆಯ ಜೀವನವು ಈಗ ಇಲ್ಲವಾಗುತ್ತಿದೆಯೆಂದು ಮೊದಲೇ ಹೇಳಿದ್ದೇನೆ.* ಬಾಳಿನ ಸುಖವೇನು ದುಃಖವೇನು? ಉತ್ಸಾಹವೇನು ಬೇಸರವೇನು? ಸತ್ಯವೇನು ಮಿಥ್ಯವೇನು? ಎಂದು ತಿಳಿಯದ ಹುಡುಗರ ಕಣ್ಣ ಮುಂದೆ ವೈರಾಗ್ಯವನ್ನು ಹಿಡಿಯುವುದು ಯಾವ ನ್ಯಾಯ? ಸುತ್ತಲೂ ನಮ್ಮ ದೇಶವು ಪರಕೀಯರ ಭೋಗಭೂಮಿಯಾಗಿರುವುದನ್ನು ನೋಡಿ ಯಾತನೆಪಡುತ್ತ ಐಶ್ವರ್ಯದಲ್ಲಿಯೂ ಕಾರ್ಯದಕ್ಷತೆಯಲ್ಲಿಯೂ ಯುಕ್ತಿಯಲ್ಲಿಯೂ ಸತ್ವದಲ್ಲಿಯೂ ನಯದಲ್ಲಿಯೂ ಸರ್ವವ್ಯಾಪಕರಾಗಿರುವ

* ಇದು ಸರಿ ಅದು ತಪ್ಪು ಎಂದಾಗಲಿ, ಅದು ಸರಿ ಇದು ತಪ್ಪು ಎಂದಾಗಲಿ ಇಲ್ಲಿ ಹೇಳುತ್ತಿಲ್ಲ. ಸ್ಥಿತಿಚಿತ್ರ ಮಾತ್ರ. ಬೆಲೆ ಕಟ್ಟುವ ಯತ್ನವಲ್ಲ.

ಪಾಶ್ಚಾತ್ಯ ಜನಾಂಗಗಳವರನ್ನೂ, ಅವರ ರೀತಿ ನೀತಿ ಸುಖ ಸೌಕರ್ಯಗಳನ್ನೂ ನೋಡುತ್ತ ತಮ್ಮವರ ಬಂಜೆತನ ತಬ್ಬಲಿತನಗಳನ್ನು ನೋಡುತ್ತಿರುವ ಜನರಿಗೆ ವೈರಾಗ್ಯವನ್ನು ಬೋಧಿಸುವುದು ನ್ಯಾಯವೊ? ಹೋಗಲಿ, — ಅಸಾರವೆಂದು ತಿಳಿಯುವ ವರೆಗಾದರೂ ಈ ಜೀವನವು ಸಾರವತ್ತಾದುದೇ ತಾನೆ? ತಿಳಿಯುವ ಕಾಲವು ಬಂದರೆ ಅವರಿಗೇ ತಿಳಿಯುವುದು. ಅವರು ತಿಳಿದರೆಯೇ ವಿರಕ್ತಿಗೆ ಬೆಲೆ; ಇಲ್ಲವಾದರೆ ಇಲ್ಲ. ವಿರಕ್ತಿಗೆ ತಾನೆ ಒಂದೇ ಮುಖವಿದೆಯೊ? ಜೀವನದ ನಡುವೆ ಇದ್ದುಕೊಂಡು ವಿರಕ್ತನಂತೆ† ಬಾಳುವ ವಿರಕ್ತಿ ಒಂದಿದೆ; ಕಾವಿಯ ಬಟ್ಟೆಯನ್ನುಟ್ಟು ಸಂನ್ಯಾಸವನ್ನು ಆಶ್ರಮವಾಗಿ ಸ್ವೀಕರಿಸಿರುವ ವಿರಕ್ತಿ ಒಂದಿದೆ. ಇವೆರಡರಲ್ಲಿ ಬಹುಜನಕ್ಕೆ ಸಾಧನವಾಗ ಬೇಕಾದುದು ಮೊದಲನೆಯ ಮಾರ್ಗ ಮಾತ್ರ!

ಈಗಿನ ಪ್ರಪಂಚದಲ್ಲಿ ಸುಖವಿಲ್ಲವೆ, ಸೌಂದರ್ಯವಿಲ್ಲವೆ, ತ್ಯಾಗವಿಲ್ಲವೆ, ಸೌಜನ್ಯ ಸೌಹಾರ್ದಗಳಿಲ್ಲವೆ, ಸ್ನೇಹವಿಲ್ಲವೆ, ಭಕ್ತಿ ವಾತ್ಸಲ್ಯಗಳಿಲ್ಲವೆ, ಕರುಣೆ ಔದಾರ್ಯಗಳಿಲ್ಲವೆ? ಇಲ್ಲಿನ ಪ್ರತಿಯೊಂದು ನಡೆನುಡಿ ಕೆಲಸದಿಂದಲೂ ಪರವನ್ನು ಸಾಧಿಸುವುದೂ ಆತ್ಮದ ತಿರುಳನ್ನು ಬಲಿಸುವುದೂ, ಲೋಕಹಿತವನ್ನೂ ಧರ್ಮದ ಸೇವೆಯನ್ನು ಮಾಡುವುದೂ ಸಾಧ್ಯವಾಗಿರುವಾಗ, ಇದನ್ನು ಬಿಡಿರೆಂದು ಬೋಧಿಸುವುದು ಸರಿಯೆಂದು ಹೇಳಲು ಮನಸ್ಸು ಹೇಗೆ ಒಡಂಬಟ್ಟೀತು! ಇನ್ನು ಶಾಂತಿ: ಶಾಂತಿಯು ಸಾಧನದ ಗುರಿಯಾಗಬೇಕಾದುದು ನ್ಯಾಯವೇ. ಪ್ರತಿಯೊಬ್ಬರೂ ಅದರ ಗಳಿಕೆಯಲ್ಲಿ ಮನಸ್ಸನ್ನು ನಟ್ಟರೆ ಪ್ರಪಂಚಕ್ಕೇ ಸುಲಭವಾಗಿ ಮುಕ್ತಿ ಬರುವುದು. ಆದರೆ ಈ ಬಗೆಯ ಶಾಂತಿಗೂ ಪ್ರಪಂಚದ ದಿನಚರಿಯ ಜೀವನಕ್ಕೂ ಬಹು ಅಂತರವಿದೆ. ಇದಕ್ಕೆ ಸೇರಿರಬೇಕು; ಸೇರಿದರೂ ಸೇರದಂತೆ ಇರಬೇಕು. ಸರಿ. ವಿರಕ್ತಿಯು ಶಾಂತಿಗೆ ಮೆಟ್ಟಲು. ವಿರಕ್ತಿಯನ್ನು ಒಪ್ಪದವರು ಶಾಂತಿಯನ್ನು ಹೇಗೆ ಸಾರಿ ಕೊಂಡಾಡಿಯಾರು? ಒಪ್ಪಿದರೂ ಅದನ್ನು ಸಾಧಿಸುವ ರಾಜಮಾರ್ಗ ವಾವುದು? ಅವನವನ ಶಾಂತಿಯನ್ನು ಅವನವನು ಸಾಧಿಸಬೇಕು. ಕಾಡಿನಲ್ಲಿ ಸಾಧಿಸಬಹುದು; ಮನೆಯಲ್ಲಿ ಸಾಧಿಸಬಹುದು. ಸಂಗದಲ್ಲಿ ಸಾಧಿಸಬಹುದು; ನಿಸ್ಸಂಗದಲ್ಲಿ ಸಾಧಿಸಬಹುದು. ಹೊರಗಿನ ನಾಗರಿಕತೆಯೂ ಸಂಕಟ

† 'ಉದಾಸೀನವತ್ ಆಸೀನಃ'– ಹೋಲಿಸಿ.

ಸಂತೋಷಗಳೂ ಹೇಗೆಯೇ ಇರಲಿ ಪ್ರತಿಯೊಬ್ಬನೂ ತನ್ನ ಶಕ್ತಿಗೂ ಸ್ವಭಾವಕ್ಕೂ ತನ್ನ ಜೀವನದಲ್ಲಿ ಬಂದಿರುವ ಅನುಭವಗಳಿಗೂ ತಕ್ಕಂತೆ ಸಾಧಿಸಬೇಕು. ಅಷ್ಟೂ ಆಯಿತು. ಅಲ್ಲಿಗೂ ಶಾಂತಿಯು ಒಂದು ವ್ಯಕ್ತಿಯ ಜೀವನಕ್ಕೆ ಮಾತ್ರ ಕೊನೆಯ ಸಾಧನ; —ಆತ್ಮಶಾಸನದ ದೃಷ್ಟಿಯಿಂದ. ಅದರಿಂದ ಪ್ರಪಂಚಕ್ಕೆ ಉಪಕಾರವಾಗಬೇಕಾದರೆ ಅದು ಸಾಧನವಾಗಿ, ಉಪಾಯವಾಗಿ ಸಹಾಯಕವಾಗಿ ಮಾತ್ರ ನಿಲ್ಲುತ್ತದೆ. ಅದೇ ಗುರಿಯಾಗುವುದಿಲ್ಲ. 'ಶಾಂತಂ ಶಿವಂ ಅದ್ವೈತಂ' ಎಂಬ ತತ್ವದ ನುಡಿಯಲ್ಲಿ ಅದ್ವೈತಿಗಳು ವರ್ಣಿಸುವ ಶಾಂತಿಯಲ್ಲಿ ಪರಮ ಸೌಂದರ್ಯವಿದೆ, ಆನಂದವಿದೆ. ಆದರೆ ಆ ಶಾಂತಿಯನ್ನು ಸಾಧಿಸುವುದು ಎಲ್ಲರ ಭಾಗ್ಯಕ್ಕೂ ಪಾಲಿಗೂ ಬರುವುದಲ್ಲ. ಜನಸಾಮಾನ್ಯಕ್ಕೆಲ್ಲ ಅದನ್ನು ಯುಗಯುಗದಲ್ಲಿಯೂ ಮಹಾತ್ಮರು ಬೋಧಿಸಿದ್ದರೂ ವರ್ತಮಾನವು ಆ ಶಾಂತಿಸ್ವರ್ಗಕ್ಕೆ ಹಿಂದಿನಷ್ಟೇ ದೂರದಲ್ಲಿದೆ.

ಇಂದಿನಂತೆಯೇ ಮುಂದೂ. ಈಗ ನಮ್ಮ ದೇಶದಲ್ಲಿನ ಅನೇಕ ಶ್ರದ್ಧಾಳುಗಳಿಗೆ ಮನಸ್ಸಿನಲ್ಲಿ ಒಂದು ಹೊಸ ಬಗೆಯ ದೃಢವೂ ಸಹನೆಯೂ ಬಂದಿವೆಯೆನ್ನಬಹುದು. ಅವರಿಗೆ ಶಾಂತಿ ಸಮಾಧಾನಗಳು, ಕೇವಲ ಶಾಂತಿ ಸಮಾಧಾನಗಳ ರೂಪದಲ್ಲಿದ್ದರೆ--ದೊರೆತರೆ—ಸಾಲದು; ಅವಷ್ಟೇ ತೃಪ್ತಿಯನ್ನೀಯವು. ಸಂತತವೂ ಪ್ರಪಂಚದ ಕಷ್ಟಸುಖಗಳಲ್ಲಿ ಭಾಗಿಗಳಾಗಿ, ತಮ್ಮ ಜೊತೆಗೂ ತಮ್ಮ ಮಟ್ಟಕ್ಕೂ ತೂಕಕ್ಕೂ ಎಲ್ಲವನ್ನೂ ಎತ್ತಿಕೊಳ್ಳಬೇಕೆಂದು ಅವರು ಇಚ್ಛಿಸುವರು; ಅದಕ್ಕಾಗಿ ತವಕಪಡುವರು; ವಿರಾಮವಿಲ್ಲದೆ ಶ್ರಮಪಡುವೆವೆನ್ನುವರು. ಹೊರಗೆ ಒಂದು ಪ್ರಾಣಿಗೆ ಅನ್ಯಾಯ, ಅಜ್ಞಾನ, ದಾರಿದ್ರ್ಯಗಳ ನೋವಿದ್ದರೂ ಅವರಿಗೆ ಸಹಿಸದು.* ಆ ಕಷ್ಟಗಳನ್ನು ಕಂಡು ಅವರ ಹೃದಯವು ಒಡೆದು ನೀರಾಗುವುದು. ಅವುಗಳನ್ನು ನೀಗಲು ಮುಂಬರಿಯುವುದೇ ಅವರ ಒಂದು ಕ್ರಿಯೆ; ಅವರಿಗೆ ಒಂದು ಸಮಾಧಾನ. ಆ ಕೆಲಸ ಮಾಡದಿದ್ದರೆ ಅವರಿಗೆ ಶಾಂತಿಯಿಲ್ಲ. ಅದು ಸಾಧಿತವಾಗದಿದ್ದರೆ ಬೇರೆ ಬಗೆಯಲ್ಲಿ ಶಾಂತಿ ಬರುವಂತಿದ್ದರೂ ಆ ಶಾಂತಿಯನ್ನು ಅವರು ಒಲ್ಲರು. ಹೀಗೆ ಅವರ ದೃಷ್ಟಿಯಲ್ಲಿ ಶಾಂತಿಯೇ ಒಂದು ಗುರಿಯ ಪರಮಾವಧಿಯಾಗುವುದಿಲ್ಲ.

* ಲೋಕಸಂಗ್ರಹ, ಲೋಕಕಾರುಣ್ಯ ಎಂಬ ಮಾತುಗಳಿಗೆ ಇದೇ ಅರ್ಥವಾದರೂ ಅವನ್ನು ಗ್ರಹಿಸುವರೀತಿ ಘನಿಸಿ ವಿಪರೀತವಾಗುವುದುಂಟು. ಇಲ್ಲಿ ಹಾಗೆಯೇ 'ಸರ್ವಮುಕ್ತಿ' ತತ್ವವನ್ನೂ ನೆನೆಯಬಹುದು.

ಆದರ ಮೂಲಕ ಲೋಕಹಿತವು ಸಂಪಾದಿತವಾಗುವುದಾದರೆ ಮಾತ್ರ ಅವರು ಅದನ್ನು ಸ್ವೀಕರಿಸುವರು; ಅದಕ್ಕೆ ಬೆಲೆಗೊಡುವರು.

ಈ ಸ್ಥಿತಿಯು ಎಲ್ಲರಿಗೂ ಸಿದ್ಧವಾಗಿಲ್ಲ. ಯಾರೊಬ್ಬರಲ್ಲಿಯೇ ಆಗಲಿ ಸಂಪೂರ್ಣವಾಗಿ ಸಿದ್ಧವಾಗಿದೆಯೆಂದೂ ಹೇಳುವುದಿಲ್ಲ. ಸಾಹಿತ್ಯರಂಗದಲ್ಲಿಯೂ ಇತರ ಕಾರ್ಯರಂಗಗಳಲ್ಲಿಯೂ ಕೆಲಸಮಾಡುತ್ತಿರುವ ಕೆಲವರ ಜೀವನವನ್ನೂ ಆಶೆ ಆಶಯಗಳನ್ನೂ ಅರ್ಥಮಾಡಿಕೊಂಡರೆ, ಅವರ ಮನಸ್ಸಿನ ಹಿಂದೆ ನಿಂತು ಪ್ರತ್ಯಕ್ಷ ಪರೋಕ್ಷಗಳಲ್ಲಿ ಅವರ ಬಾಳನ್ನು ಈ ಗುರಿಯು ನಡೆಯಿಸುತ್ತಿದೆ ಎಂದಿಷ್ಟನ್ನು ಮಾತ್ರ ಖಂಡಿತವಾಗಿ ಹೇಳಬಹುದು. ಗುರಿ ಎದುರಿಗೆ ಇದೆ; ಮಾರ್ಗ ತೆರೆದಿದೆ. ಸ್ವಲ್ಪಮಟ್ಟಿಗಾದರೂ ಆ ದರ್ಶನವನ್ನು ಪಡೆದವರು ಆದರಿಂದ ಹೃದಯವುಬ್ಬಿ, ಪುಳಕಿತರಾಗಿ ಆ ಕಡೆ ಸಂಚಾರ ಮಾಡಲು ತೊಡಗಿದ್ದಾರೆ. ಕವಿಗಳು ಜನತೆಯ ಜ್ಯೋತಿಗಳು: ಕವಿಗಳಲ್ಲಿಯೂ ಇದೇ ಸ್ಥಿತಿ. ಆಶಯವೂ ದರ್ಶನವೂ ಇವೆಯೆಂದು ಹೇಳಿದ ಮಾತ್ರಕ್ಕೇ ಈಗ ಬರೆದಿರುವ ಯಾವ ಒಂದು, ಯಾವ ಒಬ್ಬರ ಕೃತಿಯಲ್ಲಿಯೇ ಆಗಲಿ ಇದು ಸಂಪೂರ್ಣವಾಗಿ ಪ್ರತಿಬಿಂಬಿಸಿದೆ ಎಂದೂ ಹೇಳುತ್ತಿಲ್ಲ. ಅದು ಉಚ್ಚವಾದ ಧ್ಯೇಯವೆಂದು ಕಂಡು ನಾಲ್ಕು ಜನ ದೊಡ್ಡವರೂ ಅವರನ್ನು ಅನುಸರಿಸಿ ಹತ್ತು ಜನ ಕಿರಿಯರೂ ಆ ಕಡೆಗೆ ಸಾಗುತ್ತಿರುವಾಗ ಅದಕ್ಕೆ ಸರ್ವರೂ ನೆರವಾಗಬೇಕು.

ನೆರವಾಗದಿದ್ದರೆ ಹೋಗಲಿ, ತಡೆಯಾಗಬಾರದು. ನಿನ್ನೆಗೆ ಮೊನ್ನೆಗೆ, ನಮ್ಮ ಕಣ್ಣುಮುಂದೆ ಹುಟ್ಟಿದ ಈ ಕೋರಿ ಹುಡುಗರು ಕವಿಗಳಂತೆ, ಕಪಿಗಳು! ಹಿಂದಿನವರಿಗಿಂತ ಇವರೇನೊ ಮಾಡಿಬಿಡುವರಂತೆ! ಅವರ ಉಂಗುಷ್ಟಕ್ಕಿದ್ದ ಯೋಗ್ಯತೆ ಇವರ ಆತ್ಮಕ್ಕಿಲ್ಲ ಎಂದು ತೆಗಳುವವರು ಹಲವರುಂಟು. ತಿಳಿದವರಂತೆ ಕಾಣುತ್ತ ತೆಗಳುವವರು ಕೆಲವರು; ತಿಳಿಯದೆಯೊ ಕೇವಲ ಅಂಥವರನ್ನು ಅನುಸರಿಸಿಯೊ ತೆಗಳುವವರು ಹಲವರು. ಈ ನಡವಳಿಕೆ ತಪ್ಪು. ಹಿಂದಿನದನ್ನು ಹೀಯಾಳಿಸಿ, ತಿಳಿದ ಈಗಿನವರು ಯಾರೂ ನಡೆಯುತ್ತಿಲ್ಲ. ಅವರ ಕೈಯಲ್ಲಾದುದನ್ನು ಅವರು ಹೇಗೆ ಮಾಡಿ ಕೃತಾರ್ಥರಾದರೊ ಹಾಗೆ, ತಮಗೆ ಬಲ್ಲಂತೆ ತಾವೂ ತಮ್ಮ ಭಾಗದ ಕೆಲಸವನ್ನು ಮಾಡಬೇಕೆಂದು ಮಾತ್ರ ಇವರು ಕೇಳುತ್ತಿರುವುದು. ಅವರ ಕಾರ್ಯದ ಗೌರವವನ್ನು ಇವರು ಬಲ್ಲರು. ಅದನ್ನು ಕೊಂಡಾಡುವ ಉತ್ಸಾಹದಲ್ಲಿ

ಇವರು ಯಾರಿಗೂ ಹಿಂದಾಗುವವರಲ್ಲ. ಸಾಹಿತ್ಯವನ್ನೂ ನಾಡನ್ನೂ ನುಡಿಯನ್ನೂ ಅವರು ಒಂದು ಮಜಲಿಗೆ ತಂದು ನಿಲ್ಲಿಸಿದರು. ತಮ್ಮ ಕೃತಿಗಳಿಂದ ಜನರ ಮನಸ್ಸನ್ನು ಒಲಿಸಿದರು. ಬದುಕನ್ನು ಕುದುರಿಸಿದರು. ಅವರಿಗೆ ಈಚಿನವರು ನಾವು. ಅವರಿಗೆ ಜೀವವಿತ್ತವರನ್ನು ಅವರು ಹೇಗೆ ತಿರಸ್ಕರಿಸುತ್ತಿರಲಿಲ್ಲವೊ ಹಾಗೇ ನಾವೂ; ನಮಗೆ ಜೀವವಿತ್ತವರನ್ನು ನಾವು ಹೇಗೆ ತಿರಸ್ಕರಿಸಿಯೇವು? ಅವರಿಲ್ಲದಿದ್ದರೆ ನಾವು ಇರುತ್ತಿದ್ದೆವೆ? ನುಡಿಗೆ ಜೀವ, ಕಾಂತಿ, ಓಟ, ಮಾರ್ದವ, ವಿಲಾಸ, ಬನಿ, ವೀರ್ಯಗಳನ್ನು ಇತ್ತು ಅದನ್ನು ಒಪ್ಪವಿಟ್ಟವರು ಅವರು; ಅದಕ್ಕೆ ಒಂದು ವ್ಯಕ್ತಿಗುಣವನ್ನೂ ಮರ್ಯಾದೆಯನ್ನೂ ಕೊಟ್ಟವರು ಅವರು. ಅದನ್ನು ಮೀರಿ ಯಾರು ನಡೆಯಲಾಪರು? ತಂದೆ ತಾತಂದಿರಿಂದ ತಾನೆ ಮಗ ಮೊಮ್ಮಕ್ಕಳು?

ಆದರೆ ಅವರು ಗಳಿಸಿದುದನ್ನು ನಾವು ಉಳಿಸಿಕೊಳ್ಳಬೇಡವೆ? ಅದಕ್ಕೆ ಯೋಗ್ಯರಾಗಬೇಡವೆ? ಅವರು ಗಳಿಸಿಟ್ಟಿರುವುದಕ್ಕೆ ನಮ್ಮದಾಗಿ ಇನ್ನಷ್ಟು ಸಂಪತ್ತನ್ನು ಸೇರಿಸುವುದು ನಮ್ಮ ಕರ್ತವ್ಯವಲ್ಲವೆ? ಅವರು ನಿಂತ ಮಜಲಿನಿಂದ ಮುಂದಕ್ಕೆ ನಾಲ್ಕು ಹೆಜ್ಜೆ ನಾವೂ ಸಾಹಿತ್ಯರಥವನ್ನು ನಡೆಯಿಸಿಕೊಂಡು ಹೋಗಬೇಡವೆ? ಯಾವ ತಂದೆತಾಯಿಗಳಿಗೆ ತಾನೆ ಮಕ್ಕಳು ಅಭಿವೃದ್ಧಿಗೆ ಬರಬೇಕೆಂಬ ಆಸೆಯಿರುವದಿಲ್ಲ? ತಮಗಿಂತ ದೃಢಕಾಯರಾಗಿ, ಸಾತ್ವಿಕರಾಗಿ, ಕಾರ್ಯನಿರ್ವಹಣಪಟುಗಳಾಗಿ, ಹತ್ತು ಜನರಿಂದ ಮಾನಿತರಾಗಿ ಬೇಕಾದಷ್ಟು ಐಶ್ವರ್ಯವನ್ನೂ ಕೀರ್ತಿಯನ್ನೂ ಪಡೆದು ಬಾಳಬೇಕೆಂಬ ಹಾರೈಕೆಯಿರುವುದಿಲ್ಲ? ಅಂತಹ ಹಾರೈಕೆಯಿಲ್ಲದ ತಂದೆತಾಯಿಗಳ ಪ್ರೀತಿಯನ್ನು ಏನೆಂದು ಹೇಳೋಣ! ತಮ್ಮ ಹಾಗೆಯೇ ಒಣಗಿಕೊಂಡು ವಂಶಪಾರಂಪರ್ಯವಾಗಿ ಬಂದ ಜಾಡ್ಯಗಳಿಂದೆಲ್ಲ ನವೆದು, ಕೃಶರಾಗಿ, ತಾವು ಗಳಿಸಿಟ್ಟ ಕುಡಿಕೆ ಹಣವನ್ನು ಕೂತುಂಡು ಕೈ ಬರಿದು ಮಾಡಿಕೊಂಡು ವಂಶವನ್ನು ಮತ್ತಷ್ಟು ನಿರ್ಬಲವಾಗಿ ಮಾಡುವ ಮಕ್ಕಳನ್ನು ಕಂಡರೆ ತಂದೆತಾಯಿಗಳಿಗೆ ಪ್ರೀತಿಯೇನು? ಅಂಥ ಪ್ರೀತಿ ವಂಶಘಾತಕತೆಯಲ್ಲವೆ? ಹಿರಿಯರು ಸಂಪಾದಿಸಿದ ಮನೆಯನ್ನು ಒಂದು ವೇಳೆ ಉರುಳಿಸಿದರೂ ಅದು ಇದ್ದ ಸ್ಥಳದ ಜೊತೆಗೆ ಮತ್ತಷ್ಟು ಸ್ಥಳವನ್ನು ಸೇರಿಸಿ, ಮಣ್ಣಿನಮನೆ ಇದ್ದ ಕಡೆ ಕಲ್ಲುಕಟ್ಟಡವನ್ನು ಕಟ್ಟಿ, ಒಂದಕ್ಕೆ ಹತ್ತು ವಿಸ್ತಾರವಾಗಿ ಸುಂದರವಾಗಿ ಮಾಡಿ, ವಸ್ತುವಾಹನಗಳನ್ನು ಸಂಗ್ರಹಿಸಿ, ಸ್ವಂತ ಸಂಪಾದನೆಯಿಂದ

ಹಿರಿಯರ ಆಸ್ತಿಯನ್ನು ಹೆಚ್ಚಿಸುವ ಮಗನಿಂದ ವಂಶಕ್ಕೇ ಕೀರ್ತಿ. ಕುಸಿದು ಬೀಳುವ ಹಳೆಯ ಮನೆ ಹೋಯಿತಲ್ಲಾ ಎಂದು ಹಿರಿಯರು ಅಳಲಾರರು ಎಂದು ನನ್ನ ಭಾವನೆ.

ಈಗಿನ ಕಾವ್ಯಪ್ರಪಂಚದಲ್ಲಿಯೂ ಹಾಗೆಯೇ. ಕನ್ನಡದ ಜೀವಗುಣ ವೆಲ್ಲಿ ಹೋದೀತು? ಅದನ್ನು ಯಾರು ನಾಶ ಮಾಡಿಯಾರು? ಅಲ್ಲಿನ ಸಂಪತ್ತನ್ನೆಲ್ಲ ರೂಢಿಸಿಕೊಂಡು ನಾವು ಯಾರೂ ಬಾಳುತ್ತಿಲ್ಲವಲ್ಲ ಎಂಬ ಕೊರಗಿರುವವರು ಅದನ್ನು ಕೆಡಿಸಲು ಕೈಹಾಕಯೇವೆ? ಹಿಂದಿನದಕ್ಕೆ ಯಾವ ಬಗೆಯಲ್ಲಿಯೂ ಋಣಿಯಲ್ಲದ ಈಗಿನ ಬರವಣಿಗೆಗಾರನು ಯಾವನು ಇದ್ದಾನೆ? ಇರುವುದು ಸಾಧ್ಯವೊ? ಒಂದು ಸಾವಿರ ವರ್ಷಗಳಿಂದ ಅದು ಕನ್ನಡಿಗರ ರಕ್ತದಲ್ಲಿ ರಕ್ತವಾಗಿದೆ. ಅದರಿಂದ ನಮ್ಮ ಮನಸ್ಸು ಬೆಳೆದಿದೆ. ಒಂದು ವೇಳೆ ಈಗಿನ ಕಾವ್ಯದ ಹೊರರೂಪವೂ ಉಡುಪೂ ಬೇರೆಯಾದಂತೆ ಕಂಡರೆ — ಸತ್ಯದೃಷ್ಟಿಯಿಂದ ನೋಡಿದರೆ ಅದೂ ಬೇರೆಯಾಗಿಲ್ಲ — ಅದರ ಒಳಗಿರುವ ಜೀವದ ವೈಶಿಷ್ಟ್ಯ, ರಕ್ತದ ನಾಳನಾಳದಲ್ಲಿ ಹರಿಯುತ್ತಿರುವ, ಎಲುವಿನ ಸೌಷ್ಠವಕ್ಕೆ ಕಾರಣವಾಗಿರುವ ಜೀವಶಕ್ತಿ, ಇವು ಎಲ್ಲಿ ಹೋದಾವು? ಆದುದರಿಂದ ಹಿರಿಯರು ಯಾರೂ ಈಗಿನ ಪ್ರಯತ್ನಗಳನ್ನು ಕಂಡು ಪಳಿಯಬಾರದು. ಮಗು ದುರ್ಬಲವಾಗಿದ್ದರೆ ತಂದೆಯು ಹೇಗೆ ಔಷಧಿ ಪಥ್ಯ ಮಾಡಿಸುವನೋ, ಹೇಗೆ ಪುಷ್ಟಿಯಾದ ಆಹಾರವನ್ನು ಊಡಿಸುವನೋ, ಅದರ ಒಂದು ಅಂಗವು ಸೊಟ್ಟೆಯಾಗಿದ್ದರೆ ತನ್ನ ಸಂಪಾದನೆಯನ್ನೆಲ್ಲ ವೆಚ್ಚ ಮಾಡಿಯಾದರೂ ಹೇಗೆ ಅದನ್ನು ತಿದ್ದಿಸಿ ಸರಿಮಾಡುವನೋ ಹಾಗೆಯೇ ಕಾವ್ಯ ಪ್ರಪಂಚದ ಹಿರಿಯರೂ ಈಗಿನ ಸಾಹಿತಿಗಳನ್ನೂ ಕವಿಗಳನ್ನೂ ವಾತ್ಸಲ್ಯ ದಿಂದ ಕಾಣಬೇಕು. ಸೌಂದರ್ಯವನ್ನು ಕಾಣುವ ಕಣ್ಣು ತಮ್ಮಿಂದಲೇ ತಮ್ಮಂತಹವರಿಂದಲೇ ಮಕ್ಕಳಿಗೆ ಬಂದುದೆಂದು ಅದಕ್ಕೆ ಹೊಸ ಬೆಳಕನ್ನು ಹಾಯಿಸಿ ಹೊಸ ಶಕ್ತಿಯನ್ನು ಉಂಟುಮಾಡಿಕೊಡಲು ನೆರವಾಗಬೇಕು. ಮರಿಗಳು ಹಾರಲು ಗರಿ ಹರಡಿದರೆ ರೆಕ್ಕೆಯನ್ನು ಕತ್ತರಿಸಹೋಗಬಾರದು; ಹಾಡಲು ಬಾಯಿ ತೆರೆದರೆ ನಾಲಿಗೆಯನ್ನು ಕೀಳಬಾರದು; ಕೊರಲನ್ನು ಹಿಸುಕಬಾರದು.

ಇನ್ನು ಹಲವರು ಬೀದಿಯ ತುಂಬ ಕವಿಗಳೇ — ಕಾಗೆ ಹಾರಿತು ಕಾಗೆ ಕೂಗಿತು ಎಂದು ಹೇಳುವವರೆಲ್ಲರೂ ಕವಿಗಳೇಯೆ ಎಂದು ಕರ್ಕಶವಾಗಿ

ಕೂಗಿ ಎಲ್ಲರ ಮನಸ್ಸನ್ನೂ ನೋಯಿಸುವರು. ಅದನ್ನು ಕೇಳಿ ನೊಂದ ಕಿರಿಯರು ಕೆಲವರು ಅಂತಹವರನ್ನು ಕುರಿತು, ನೀವು ರಾತ್ರಿಯ ಹಕ್ಕಿಗಳು, ಬೆಳಕನ್ನು ನೋಡಿದರೆ ನಿಮಗೆ ಕಣ್ಣುಬೇನೆ ಎಂದು ಪ್ರತಿಕಠಿಣವನ್ನು ನುಡಿಯುವುದು ಸ್ವಾಭಾವಿಕವಾದರೂ ನ್ಯಾಯವಲ್ಲ. ನಾವು ಈ ಕಾಲಕ್ಕೆ ಅತಿ ಹತ್ತಿರದಲ್ಲಿದ್ದೇವೆ. ಆದುದರಿಂದ ಬರವಣಿಗೆಗಾರರು ಅನೇಕ ಮಂದಿ ಯೆಂದು ಜನರಿಗೆ ಕಂಡರೂ ಕಾಣಿಸುತ್ತಿರಬಹುದು. ನಿಜವಾಗಿಯೂ ಬಹಳವಿಲ್ಲ. ಅವರ ಸಂಖ್ಯೆಯು ಇನ್ನೂ ಹತ್ತರಷ್ಟು ನೂರರಷ್ಟು ಆದೀತೇ, ಅವರೆಲ್ಲರ ಬರವಣಿಗೆಯು ಈಗಿಗಿಂತಲೂ ಹತ್ತರಷ್ಟು ನೂರರಷ್ಟು ಚೆನ್ನಾದೀತೇ—ಎಂಬುದೇ ಹಿರಿಯರೆಲ್ಲರ ಹಾರೈಕೆಯಾಗಬೇಕೆಂಬುದು ನಮ್ಮೆಲ್ಲರ ಆಸೆ. ಬರೆಯುತ್ತಿರುವವರಿಗೆಲ್ಲ ಒಂದೇ ವಯಸ್ಸಿಲ್ಲ; ಒಂದೇ ಮನಸ್ಸು, ಶಿಕ್ಷಣ, ಸಂಸ್ಕಾರ ಇಲ್ಲ; ಒಂದೇ ಅನುಭವದ ಆಳವಿಲ್ಲ. ಸಣ್ಣವರಾಗಲಿ ದೊಡ್ಡವರಾಗಲಿ, ಸಾಮಾನ್ಯರಾಗಲಿ ಸಿದ್ಧರಾಗಲಿ ಈ ಗೋಷ್ಠಿಗೆ ಸೇರಬೇಕೆಂದು ಉತ್ಸಾಹದಿಂದ ಅನೇಕರು ಬರುವರು. ಅವರಿಗೆಲ್ಲರಿಗೂ ಉದ್ದಾಮ ಕಾವ್ಯಗಳನ್ನು ಬರೆಯುವ ಯೋಗ್ಯತೆ ಇಲ್ಲದಿದ್ದರೆ ಶ್ರದ್ಧೆ ಇಲ್ಲವೆ? ಸಂತೋಷವಿಲ್ಲವೆ? ಈ ಗೋಷ್ಠಿಗೆ ಸೇರಿದವರೆಲ್ಲರೂ ಕೂಡಿ — ಬರೆಯುವವರೂ ಪ್ರಚಾರಕರೂ ವ್ಯಾಖ್ಯಾನಕಾರರೂ ಸೇರಿ —ಜನತೆಯಲ್ಲಿ ಒಂದು ಉತ್ಸಾಹವನ್ನು ತುಂಬುವರು; ಸಾಹಿತ್ಯಸಾಧನೆಗೆ ತಮಗೆ ತೋರಿದ ಸೇವೆಯನ್ನು ಮಾಡುವರು; ಒಂದು ಉತ್ತೇಜನವನ್ನೂ ಸೌಹಾರ್ದದ ಆವರಣವನ್ನೂ ಕಲ್ಪಿಸಿಕೊಡುವರು. ಸಾಹಿತ್ಯದ ಪಕ್ಷಕ್ಕೆ ಆಸ್ಥೆಯುಳ್ಳ ಇಷ್ಟು ಜನರು ಒದಗುವುದರಿಂದ ನಿರ್ಮಾಣವಾದ ಸಾಹಿತ್ಯಕ್ಕೆ ಆದರದ ಸ್ವಾಗತ ಕೊಡುವ ರಸಜ್ಞರ ಮಂಡಲಿಯು ದೊಡ್ಡದಾಗುವುದು. ಈ ಮಧ್ಯೆ ಉತ್ತಮ ಕವಿಗಳು ಹುಟ್ಟುವುದಕ್ಕೂ ಹುಟ್ಟಿದವರ ಶಕ್ತಿ ಬೆಳೆಯುವುದಕ್ಕೂ ತಕ್ಕಷ್ಟು ಅವಕಾಶ ದೊರೆತಂತಾಗುವುದು. ಯಾವ ಕಾಲದಲ್ಲಿಯೋ ಆಗಲಿ ಇಂತಹ ಜನರು ಹೆಚ್ಚಾಗಿರುವರು. ಬರೆಯುವವರು ಬರೆಯುವರು; ಪ್ರಚಾರಕರು ಪ್ರಚಾರಕಾರ್ಯ ಮಾಡುವರು. ಹಳೆಯದು ಸಿದ್ಧವಾಗಿ ಸ್ಪಷ್ಟವಾಗಿ ಸ್ವಶಕ್ತಿಯಿಂದ ಉಳಿಯಬಲ್ಲುದಾಗಿರುವಾಗ, ಹೊಸದಕ್ಕೆ ಪ್ರಚಾರಕಾರ್ಯ ಮಾಡುವುದು ಆವಶ್ಯಕವೆಂದು ತಿಳಿದು, ಅದರ ಪರವಾಗಿ ಒಂದು ಮಾತು ಹೆಚ್ಚು ಹೇಳಿದರೂ ಅದೇನು ದೊಡ್ಡ ತಪ್ಪಲ್ಲವೆಂದು ಎಣಿಸಿ ಹೊಸದಕ್ಕೆ ಪ್ರೋತ್ಸಾಹ

ಮಾಡುವರು. ಇದು ಎಲ್ಲ ಕಾಲಗಳಿಗೂ ಎಲ್ಲ ದೇಶಗಳಿಗೂ ಅನುಭವದಲ್ಲಿ ಬಂದುದು.

ಯಾವ ಕಾಲದಲ್ಲಿಯೇ ಆಗಲಿ ದೊಡ್ಡ ಕವಿಗಳ ಸಂಖ್ಯೆಗಿಂತ ಚಿಕ್ಕವರ ಮತ್ತು ಸಾಧಾರಣರ ಸಂಖ್ಯೆಯೇ ಹೆಚ್ಚು. ಸಮಷ್ಟಿಯಲ್ಲಿ ಅವರೆಲ್ಲವರನ್ನೂ ಕುರಿತು ಅವರ ಕಾಲದಲ್ಲಿ ಜನರು ಈಗಿನಂತೆಯೇ ಬಹುಮಟ್ಟಿಗೆ ಅಸಡ್ಡೆ ಯಿಂದ ಕಾಣುತ್ತಿದ್ದಿರಬೇಕು. ಹಳಿದಿರಬೇಕು. ಅಥವಾ ಒಂದೆರಡು ಸಣ್ಣ ಕೃತಿಗಳನ್ನು ನೋಡಿ ಬೇಸತ್ತು ದೊಡ್ಡ ಕಾವ್ಯಗಳೇ ಇಲ್ಲವೆಂದಿರಬೇಕು. ಹಾಗೆ ನೋಡಿದರೆ ಕಾವ್ಯಸೃಷ್ಟಿಯಲ್ಲಿ ಮೊದಲ ಮಟ್ಟಕ್ಕೆ ಸೇರಿದವರು ಪ್ರಪಂಚದಲ್ಲಿಯೇ ಎಷ್ಟು ಮಂದಿ ಇದ್ದಾರೆ? ಬೆರಳುಗಳನ್ನು ಮಡಿಸುತ್ತ ಲೆಕ್ಕ ಮಾಡಿದರೆ ಬೆರಳುಗಳ ಸಂಖ್ಯೆಯೇ ಹೆಚ್ಚಾಗುವುದು. ಬರೆಯುವವರಲ್ಲಿ ಉತ್ತಮರು ಮಧ್ಯಮರು ಇನ್ನೂ ಕೆಳಮಟ್ಟದವರು ಇರುವುದಿಲ್ಲವೆ? ಎಲ್ಲ ಕವಿಗಳನ್ನೂ ಹೋಮರ್, ವಾಲ್ಮೀಕಿ, ಕಾಳಿದಾಸ, ವ್ಯಾಸ, ಷೇಕ್ಸ್‌ಪೀಯರ್ ಇವರ ಜೊತೆಗೆ ತೂಗಿ ತೂಕ ಸರಿಬರಲಿಲ್ಲವೆನ್ನುವುದು ಸರಿಯೆ?—ಇವರೆಲ್ಲರ ಮಟ್ಟವೂ ಒಂದೇ ಸಮವೊ?—ಆಯಾ ದೇಶದ ಸಾಹಿತ್ಯಗಳಲ್ಲಿಯೆ ಅಂತಹ ವರು ಇನ್ನೊಬ್ಬೊಬ್ಬರು ಹುಟ್ಟದರೇನು? ಉಳಿದವರು ಕವಿಗಳೇ ಅಲ್ಲವೆ? ತಾವರೆಯಂತಿಲ್ಲದ ಮಾತ್ರಕ್ಕೇ ಜಾಜಿ, ಮಲ್ಲಿಗೆ ಸಂಪಿಗೆಗಳನ್ನು ಬಿಟ್ಟು ಬಿಡುವುದಕ್ಕಾಗುವುದೆ? ಅವು ಹೂಗಳೇ ಅಲ್ಲವೆಂದು ಹೇಳಿ ಮುಡ್ಡ'ತನ ತೋರಿಸುವುದುಂಟೆ? ಅಥವಾ ಎಲ್ಲ ಬಗೆಯ ರೂಪಿಗೂ ಗಾತ್ರಕ್ಕೂ ತಾವರೆಯೂ ಒಪ್ಪೀತೊ? ಪ್ರತಿ ಬಣ್ಣದ ಪ್ರತಿ ಅಂತಸ್ತಿನ ಕಾವ್ಯ ಕುಸು ಮಕ್ಕೂ ಅದರದರ ಸ್ಥಾನವಿದೆ; ಗುಣವಿದೆ; ಪ್ರಯೋಜನವಿದೆ. ಕಡೆಗೆ ದೊಡ್ಡ ಗ್ರಂಥಗಳ ದೊಡ್ಡತನವೆಷ್ಟು ಎಂಬುದನ್ನು ಸಣ್ಣ ಗ್ರಂಥಗಳ ಸಣ್ಣತನವೆಷ್ಟು ಎಂಬುದರಿಂದ ತಿಳಿಯಬಹುದಲ್ಲವೆ? ಯಾರೂ ಸಂತತ ವಾಗಿ ಆಕಾಶದಲ್ಲಿಯೇ ಸಂಚರಿಸಲು ಸಾಧ್ಯವಿರುವುದಿಲ್ಲ. ಒಂದಲ್ಲ ಒಂದು ಸಮಯದಲ್ಲಿ ಎಲ್ಲರೂ ಭೂಮಿಗೆ ಇಳಿದು ಬರಲೇಬೇಕು. ನೆಲದಮೇಲೆ ಬೆಳೆದ ಆಹಾರವನ್ನೇ ತಿನ್ನಬೇಕು. ಇಲ್ಲಿ ಸಾಮಾನ್ಯವಾದುವೇ ಹೆಚ್ಚು ವಸ್ತುಗಳು. ದಿವ್ಯವಾದವು ಕಡಮೆ.

ಇನ್ನೊಂದು ಸಂಗತಿ: ಈಗಿನ ಕಾವ್ಯವನ್ನು ನೋಡುವಾಗಲೂ ಉದ್ಗೀತೆಗಳನ್ನೂ ಕೃತಿಗಳನ್ನೂ ನೋಡುವುದು ಆವಶ್ಯಕ. ಅವುಗಳಲ್ಲಿ ಎಲ್ಲರೂ

ಮೆಚ್ಚಬಹುದಾದ ಗಾಂಭೀರ್ಯ ಸೌಂದರ್ಯಗಳಿವೆ; ಸ್ವಾಭಾವಿಕತೆ ಇದೆ; ಶುಚಿ ಇದೆ. ಆವೇಶ ಸಾಮಗ್ರಿಗೂ ಕಾವ್ಯಕ್ಕೂ ಎಷ್ಟು ಹತ್ತಿರದ ಸಂಬಂಧ ವಿದೆಯೆಂಬುದನ್ನು ಸುಮಾರು ಈಗಿನ ಎಲ್ಲರ ಬರವಣಿಗೆಯಿಂದಲೂ ಉದಾಹರಿಸಬಹುದು. ನೇರವಾಗಿ ದುರ್ದಮನೀಯವಾಗಿ ಮೇಲುಕ್ಕಿ ಬರುವ ಸೌಂದರ್ಯಾನುಭವದ ವ್ಯಂಜನೆಯನ್ನು ಕಾಣಬಹುದು. ಇವರು ವರ್ಣಿಸುವ ಶೃಂಗಾರದಲ್ಲಿ ಹಿಂದೆ ಆ ಹೆಸರಿನಲ್ಲಿ ಮೆರೆಯುತ್ತಿದ್ದ ಎಷ್ಟೋ ಒರಟುತನ ಹಸಿಯತನಗಳು ಕಾಣಿಸುವುದಿಲ್ಲ, ನಿಜ. ಆದರೆ ಸಮಾಜದಲ್ಲಿ ನಮ್ಮ ತಾಯಿ ತಂಗಿಯರು ದಿನವೂ ಅನುಭವಿಸುತ್ತಿರುವ ಅನ್ಯಾಯಗಳನ್ನು ಕಣ್ಣೀರು ತುಂಬಿ ತೋರಿಸುವ ಕೋಮಲ ಹೃದಯವಿದೆ. ಗಂಡಸರು ಹೆಂಗಸರು ಇಬ್ಬರೂ ನೆರೆದಿರುವ ಸಭೆಗಳಲ್ಲಿ ಯಾರೂ ನಾಚದಂತೆ ಹೆಣ್ಣು ಮಕ್ಕಳ ಪರವಾಗಿ ಓದಿ ಹೇಳಬಹುದಾದ ಶುಚಿಶೃಂಗಾರ ಕೃತಿಗಳಿವೆ. ಹೆಂಗಸು ಕೇವಲ ಗಂಡಸಿನ ದಾಸಿಯಲ್ಲ; ಭೋಗದ ವಸ್ತುವಲ್ಲ; ಆಕೆಗೂ ವ್ಯಕ್ತಿತ್ವವಿದೆ; ಮನಸ್ಸು, ಇಚ್ಛೆ, ಸ್ವತಂತ್ರವಾದ ಅಂತಃಕರಣಪ್ರವೃತ್ತಿ ಇವೆ ಎಂಬ ಅಂಶವನ್ನು ಸ್ಪಷ್ಟಪಡಿಸುವ ಉದಾರ ಧರ್ಮಗುಣವಿದೆ. ಈಕೆಯು ಪವಿತ್ರಳಾದ ಸೀತಾದೇವಿಯೆಂದು ಲೆಕ್ಕಿಸದೆ, ಆಕೆ ಲೋಕೈಕವೀರರಾದ ಪಾಂಡವರ ಮನ್ನಣೆಯನ್ನು ಪಡೆದಿದ್ದ ದ್ರೌಪದಿ ಎನ್ನದೆ, ನಾರಿಯರ ಅಂಗಾಂಗಗಳನ್ನು ವರ್ಣನೆ ಮಾಡಿ ವಿಟರಂತೆ ವರ್ಣಿಸುವ ಪದ್ಧತಿ ಹೋಯಿತೆಂದು ಚಿಂತೆಪಡಬೇಕಾದ ಆವಶ್ಯಕತೆ ಇಲ್ಲ. ಈಗಿನ ವೀರದ ವರ್ಣನೆಯಲ್ಲಿ ಪೊಳ್ಳು ಮಾತುಗಳ ಆಡಂಬರ ಘೋರಣೆಗಳಿಗಿಂತಲೂ ವೀರ್ಯವನ್ನು ಕುದಿಸುವ ಪ್ರಚಂಡತೆ ಇದೆ; ಕೈಲಾಸಂ ಅಂತಹವರ ಹಾಸ್ಯದಲ್ಲಿ, ನಾವು ಹೊಟ್ಟೆ ಬಿರಿಯುವಂತೆ ಹೊರಗೆ ನಗುತ್ತಿದ್ದರೂ, ತಾನು ನಕ್ಕು ನಮ್ಮನ್ನು ನಗಿಸಿ ಹೃದಯದಲ್ಲಿ ಯಾತನೆಯುಂಟುಮಾಡಿ, ಮನಸ್ಸನ್ನು ತಿಳಿಮಾಡಿ ಮಂಗಳಕ್ಕೆ ತಿರುಗಿಸುವ ಲೋಕಕಾರುಣ್ಯವಿದೆ. ಹೀಗೆ ಲಂಬಿಸುತ್ತ ಹೋಗಿ ಮಾತಿನ ಪ್ರಮಾಣವನ್ನು ಕೆಡಿಸಬಾರದು. ಒಟ್ಟಿನಲ್ಲಿ, ನಿಷ್ಪಕ್ಷಪಾತವಾಗಿ, ನೋಡಿದರೆ, ಈಗಿನವರೂ ತಮಗೆ ತೋರಿದಂತೆ ಸಾಹಿತ್ಯಕ್ಕೆ ಶುಚಿ ಸೇವೆಯನ್ನು ಮಾಡುತ್ತಿರುವುದು ಎಲ್ಲರಿಗೂ ಕಾಣಬರುವುದು.

ಈಗ ಬರೆಯುತ್ತಿರುವ ಹಲವರಿಗೆ ಹಳಗನ್ನಡ ಸಾಹಿತ್ಯದ ಪರಿಚಯವಿರುವುದರ ಜೊತೆಗೆ ಅದರ ಬಲಾಬಲಗಳ ಅರಿವೂ ಇದೆ. ಆ ಸಾಹಿತ್ಯ

ಸರಸ್ಸು ಉತ್ತಮವಾದುದೆಂದು ಅವರಿಗೆ ಗೊತ್ತು. ಅಲ್ಲಿನ ನೀರು ಬಹಳ ಕಾಲದಿಂದೀಚೆಗೆ ಕಡಮೆಯಾಗಿ ಕೊಳಚೆಯಾಗಿದೆ, ಕೆಸರು ನಾರುತ್ತಿದೆ, ಪ್ರಾಣಿ ಪಕ್ಷಿಗಳಿಗೆ ಜೀವನವನ್ನು ಒದಗಿಸದೆ ಹೋಗಿದೆ ಎಂಬುದೂ ಅವರಿಗೆ ಗೊತ್ತು. ಆದುದರಿಂದ ಆ ಕಡೆಗೆ ನಿಜವಾದ ಪ್ರೀತಿ ಹೋಗಿ ಆ ಸರಸ್ಸನ್ನು ಪುನಃ ಮನೋಹರವಾಗಿ ಮಾಡಬೇಕು; ಹೂಳೆತ್ತಿ ಅದನ್ನು ಶುದ್ಧಿಮಾಡಬೇಕು; ಅಡಿಯನ್ನು ಹೆಚ್ಚು ಆಳವಾಗಿ ತೋಡಿ, ಪಾತ್ರವನ್ನು ವಿಸ್ತಾರವಾಗಿ ಮಾಡಬೇಕು; ಸುತ್ತಲಿರುವ ನೀರಿನ ಕಣ್ಣುಗಳನ್ನು ತೆರೆದು ಹೆಚ್ಚು ನೀರು ಬರುವಂತೆ ಮಾಡಬೇಕು; ವಿಶಾಲವಾಗಿ ನಾಲ್ಕು ಕಡೆಯೂ ಸೋಪಾನ ಕಟ್ಟಿ ಸಂತತವಾಗಿ ಹಸುರು ಹೂ ಹಣ್ಣುಗಳಿಂದ ತುಂಬಿದ ಉದ್ಯಾನಗಳನ್ನು ನಿರ್ಮಾಣ ಮಾಡಬೇಕು; ಜನರು ವಿನೋದಕ್ಕಾಗಿಯೂ ಶಾಂತಿಗಾಗಿಯೂ ವಿಶ್ರಾಂತಿಗಾಗಿಯೂ ಅಲ್ಲಿಗೆ ನೆರೆಯುವಂತೆ ರಮ್ಯವಾಗಿ ಮಾಡಬೇಕು; ದಾಹದಿಂದ ಅಲ್ಲಿಗೆ ಬರುವ ಹಕ್ಕಿ, ಮೃಗ, ಮನುಷ್ಯರಿಗೆ ತಂಪಾದ ದಣಿವು ಹರಿಸುವ ತಿಳಿನೀರು ಒದಗುವಂತೆ ಮಾಡಬೇಕು; ಈ ಕೆಲಸಗಳನ್ನು ಮಾಡಿದ ಹೊರತು ತಮ್ಮ ಸಾಹಿತ್ಯಕ್ಕೆ ತಮ್ಮ ಕಾಲದಲ್ಲಿ ಸೇವೆ ಮಾಡಿದಂತಾಗುವುದಿಲ್ಲ ಎಂದು ಅವರು ತಿಳಿದಿರುವರು. ಅವರ ಕೆಲಸಕ್ಕೆ ಅವಕಾಶ ಕಲ್ಪಿಸಿಕೊಡುವುದೂ ಬೆಂಬಲವಾಗಿ ನಿಲ್ಲುವುದೂ ನಾಡಿನವರೆಲ್ಲರ ಕೆಲಸ.

ಇಷ್ಟೆಲ್ಲ ಇತರರು ಕವಿವೃಂದಕ್ಕೆ ಮಾಡಬೇಕಾದ ಸಹಾಯ. ಆದರೆ ಕವಿಗಳ ಕೆಲಸವೇನು? ಅವರ ಜೀವನವೂ ಪಂಥವೂ ಎಂತಹವಾಗಿರಬೇಕು? ಎಂಬುದನ್ನು ಸ್ವಲ್ಪಮಟ್ಟಿಗೆ ನಿರೂಪಿಸಿ ಈ ದಿನ ತಾವು ನನ್ನ ಮೇಲೆ ಹೊರಿಸಿರುವ ಕಾರ್ಯಭಾರವನ್ನು ಇಳಿಸಿಕೊಳ್ಳುತ್ತೇನೆ.

ಕವಿತೆಯು ಕವಿ ಹೃದಯದಲ್ಲಿ ಹುಟ್ಟಿ ಇತರರ ಹೃದಯಕ್ಕೆ ನೇರವಾಗಿ ಮುಟ್ಟಿ ಅದನ್ನು ತನ್ನ ತಾನಕ್ಕೆ ಮಿಡಿಯಿಸುವ ಕೂಗು. ಎಲ್ಲ ಕಾವ್ಯದ ಅಡಿಯಲ್ಲೂ ಕವಿಯ ಮನಸ್ಸೂ ಹೃದಯವೂ ಇರುತ್ತವೆ. ಆ ಮನಸ್ಸು ಎಷ್ಟು ಉನ್ನತವಾಗಿದ್ದರೆ, ಎಷ್ಟು ವಿಶಾಲವಾಗಿ ಶುಚಿಯಾಗಿದ್ದರೆ ಕವಿತೆಯು ಅಷ್ಟು ಉನ್ನತವಾಗಿಯೂ ವಿಶಾಲವಾಗಿಯೂ ಶುಚಿಯಾಗಿಯೂ ಆಗುತ್ತದೆ. ಕವಿಯ ಕವಿತೆಗೆ ಹೊರಗಿನ* ಪ್ರಪಂಚವು ಆವೇಶ ಸಾಮಗ್ರಿಯನ್ನು ಒದಗಿಸುವು

* ಒಳಗಿನದೂ.

ದಲ್ಲವೆ ! ಆವೇಶ ಸಾಮಗ್ರಿಯು ಎದುರಿಗಿರುವಾಗಲಾಗಲಿ, ಅಥವಾ ನೆನಪಿನ ಸಹಾಯದಿಂದ ಕವಿಯು ತನ್ನ ಮನಸ್ಸಿನ ಮುಂದೆ ನಿಲ್ಲಿಸಿಕೊಂಡು ಅದನ್ನು ಪುನಃ ಅನುಭವ ಮಾಡಿಕೊಳ್ಳುತ್ತಿರುವಾಗ ಆಗಲಿ, ಅನೇಕ ಬಗೆಯ ರಾಗ ಭಾವಗಳು ವಸ್ತುವಿನೊಡನೆ ಸೇರಿಕೊಳ್ಳುತ್ತವೆ. ಮನಸ್ಸಿನಲ್ಲಿ ಒಂದು ಬಗೆಯ ಕಾವು ಉಂಟಾಗುತ್ತದೆ. ಕವಿಯ ಹಿಂದಿನ ಸಂಸ್ಕಾರವೆಲ್ಲ, ಆತ್ಮಶಕ್ತಿಯೆಲ್ಲ, ಆಗಿನ ಸ್ಥಿತಿಯೆಲ್ಲ, ಆಗ ಆತನು ನಿರ್ಮಾಣಮಾಡುವ ಕೃತಿಗೆ ಕಳೆಗೊಟ್ಟು ಕೃತಿಯ ಮೇಲೆ ಕವಿಯ ಆ ಸಮಯದ ಮುದ್ರೆಯೊತ್ತುತ್ತದೆ. ಸಣ್ಣ ಗೀತೆಗಳಲ್ಲಿ ಆವೇಶ ಸಾಮಗ್ರಿಯೂ ಕವಿತೆಯೂ ಒಂದಕ್ಕೊಂದು ಅಂಟಿಕೊಂಡಿರುವುದನ್ನು ಕಾಣುವೆವು. ಅದರ ಕಟ್ಟಡವು ಸಣ್ಣದಾದುದರಿಂದ ಆಗಿನ ಆವೇಶವು ಅದಕ್ಕೆ ಬಹಳ ಸಹಾಯಮಾಡುತ್ತದೆ. ದೊಡ್ಡ ಕಾವ್ಯದಲ್ಲಿ ವಸ್ತುವಿಗೆ ಸಂಬಂಧಿಸಿದ ಆವೇಶವು ಹೆಚ್ಚು ಕಾಲ ನಿಲ್ಲಬೇಕಾಗುವುದು; ಹೆಚ್ಚು ದೂರ ನಡೆಯ ಬೇಕಾಗುವುದು. ಅದಕ್ಕೆ ತಕ್ಕಂತೆ ಪ್ರತಿಭೆಯು ಹೆಚ್ಚುತ್ತಾ ತಗ್ಗುತ್ತಾ ಪ್ರಮಾಣಕ್ಕೆ ಸರಿಯಾಗಿ ಹೊಂದಿಕೊಳ್ಳಬೇಕಾಗುವುದು. ಬಹು ದೂರ ಆಕಾಶದಲ್ಲಿ ಹಾರಿ ಸಂಚರಿಸಬೇಕಾದರೆ ಹಕ್ಕಿಯ ರೆಕ್ಕೆಯಲ್ಲಿ ಹೇಗೆ ಹೆಚ್ಚು ಬಲವಿರಬೇಕೋ ಹಾಗೆಯೇ ಪ್ರತಿಭೆಯ ಸಂಚಾರಶಕ್ತಿಯು ಕವಿಯು ರಚಿಸುವ ದೊಡ್ಡ ಕಾವ್ಯದಲ್ಲಿ ಬಹು ದೂರ ಆತನನ್ನು ನಡೆಯಿಸಬೇಕಾಗುವುದು. ಆದುದರಿಂದ ಬಂದ ಆವೇಶವು ತನ್ನಲ್ಲಿ ದೀರ್ಘಕಾಲ ನಿಲ್ಲುವಂತೆ ಮಾಡಿಕೊಳ್ಳ ಬೇಕಾದುದು ಕವಿಗೆ ಅಗತ್ಯ. ಹುಟ್ಟುಕವಿಯಾದವನು ಕೂಡ, ತನ್ನ ಸ್ವಭಾವವನ್ನೂ, ಕವಿತಾಶಕ್ತಿಯನ್ನೂ, ಅನ್ತಃಸಾರವನ್ನೂ, ಅಭ್ಯಾಸದಿಂದಲೂ ನಿರಂತರ ಪ್ರಯೋಗದಿಂದಲೂ ಬಲಿಸಿಕೊಳ್ಳುತ್ತ ಉತ್ತಮಗೊಳಿಸಿಕೊಳ್ಳುತ್ತ ಹೋದ ಹೊರತು ಇದು ದುಸ್ಸಾಧ್ಯವಾದೀತು. ಅದೊಂದು ತಪಶ್ಚರ್ಯೆ. ದೊಡ್ಡ ಕವಿತೆಯಲ್ಲಿ ದೊಡ್ಡ ಹೃದಯದ ಗುಣವೂ ಬುದ್ಧಿಯೂ ಧರ್ಮವೂ ಸೇರಿಕೊಳ್ಳುವುವು. ಬರೆಯುವವನ ಜೀವನವು ಅವನ ಕವಿತೆಯಿಂದ ಸಭ್ಯ ವಾಗಿ ಸಂಸ್ಕೃತವಾಗುವುದು. ಹಾಗೆಯೇ ಅದು ಓದುವವನ ಹೃದಯವನ್ನು ಸಂಸ್ಕರಿಸುವುದು. ಮುಖ್ಯವಾಗಿ ಎಲ್ಲ* ಕವಿಗಳಿಗೂ ಬೇಕಾದುದು ಸೌಂದ

---

* ಉತ್ತಮ ಕವಿಗಳಿಗೆ. ಇಲ್ಲಿ 'ಉತ್ತಮ' ಎಂಬುದಕ್ಕೆ ಬೆಲೆ ಕೊಡುತ್ತೇವೊ ಕೇವಲ 'ಕವಿ' ಎಂಬುದಕ್ಕೊ ನಾವು ನಿರ್ಣಯಿಸಿಕೊಳ್ಳಬೇಕು. ಕವಿಗೆ ಕವಿತ್ವ ಸಿದ್ಧಿ

ರ್ಯವನ್ನು ಕಾಣುವ ಕಣ್ಣು; ಸ್ಪಷ್ಟ ಆವೇಶ; ಅಂತಃಕರಣ ಶುದ್ಧಿ; ಅದನ್ನು ಕೃತಿಯಲ್ಲಿ ಕಟ್ಟಿಹಾಕಿ ಶಾಶ್ವತವಾಗಿ ನಿಲ್ಲಿಸಬಲ್ಲ ಜಾಣ್ಮೆ; ತನ್ನ ಅನುಭವದ ಸಾರವನ್ನು ಅದಕ್ಕೆ ಎರೆದು, ಜನರಿಗೆ ಆದರಿಂದ ಹೊಸ ಸ್ಥೈರ್ಯವೂ ಆನಂದವೂ ಬರುವಂತೆ ಮಾಡುವ ಆತ್ಮಶಕ್ತಿ.

ಕವಿತೆಯು ಎಷ್ಟು ಸ್ಫೂರ್ತಿಯನ್ನು ಒಳಗೊಂಡಿದ್ದರೆ ಅಷ್ಟು ತೀವ್ರವಾಗಿ ನಮ್ಮ ಅಂತರಂಗವನ್ನು ಅದು ಸೆರೆಹಿಡಿಯುವುದು. ಎಷ್ಟು ಪೂರ್ಣವಾಗಿ ಪ್ರಪಂಚದ ಅನುಭವವನ್ನು ಒಳಗೊಂಡಿದ್ದರೆ ಅಷ್ಟೂ ಅಷ್ಟು ಜೀವಗಳ ಚಾಲನೆಗೆ ಶಕ್ತಿಯನ್ನು ಕೊಡುವುದು; ವಿಶಾಲವಾಗುವುದು. ಆದುದರಿಂದ ಕವಿಯ ಸಾಧನೆಯೂ ತಪಸ್ಸೂ ನಿರಂತರವಾದವು,—ಉಗ್ರವಾದವು. ಎಷ್ಟು ಗಂಭೀರವಾದರೂ ಧೀರವಾದರೂ ಅರಳಿಯ ಎಳೆಯ ಚಿಗುರಂತೆ ಕವಿಹೃದಯವು ಸಂತತವಾಗಿ ಮಿಡಿಯುವ ಶಕ್ತಿಯುಳ್ಳದ್ದಾಗಿರುತ್ತದೆ. ಮೆಲ್ಲಗೆ ಗಾಳಿಯು ಊದಿ ಬಂದರೆ ಸಾಕು. ಆ ಸೂಕ್ಷ್ಮಪ್ರಭಾವಕ್ಕೇ ಪಟಪಟ ಬಡಿದುಕೊಳ್ಳುವುದು; ಒದ್ದಾಡಿ ಹೋಗುವುದು. ಸೂರ್ಯನ ಬೆಳಕು ಹೇಗೆ ಬಿದ್ದರೆ ಹಾಗೆ ತಿರುಗಿ ಅದನ್ನು ಧಾರಣೆಮಾಡುವ ಎಲೆಗಳಂತೆ, ಹೂಗಳಂತೆ ಸತ್ಯಸೌಂದರ್ಯಗಳ ಬೆಳಕು ಹೇಗೆ ಬಿದ್ದರೆ ಹಾಗೆಲ್ಲ ತೂಗಿ ತೊನೆದು, ಕಣ್ಣು ತೆರೆದು, ಪ್ರೀತಿಯ ಆನಂದದಿಂದ ಅದನ್ನು ಹೃದಯದಲ್ಲಿ ಧಾರಣೆ ಮಾಡಿ, ತನ್ನ ಮನಸ್ಸಿನಲ್ಲಿ ಪೋಷಿಸಿ ಕವಿಯು ಅದನ್ನು ಕಾವ್ಯದಲ್ಲಿ ಪ್ರತಿಫಲಿಸುವಂತೆ ಮಾಡುತ್ತಾನೆ. ತನ್ನ ಜ್ಞಾನೇಂದ್ರಿಯಗಳನ್ನು ಯಾವಾಗಲೂ ಜಾಗೃತವಾಗಿಟ್ಟುಕೊಂಡು ಸರಸ್ವತಿಯ ದರ್ಶನಕ್ಕೆ ಸಿದ್ಧನಾಗಿರುತ್ತಾನೆ.

ಪ್ರತಿಭೆಯ ಜೊತೆಗೆ ಕವಿಗೆ ವಿಮರ್ಶಾಬುದ್ಧಿ ಬೇಕು. ಕವಿತೆಯು ಸಲಸಲಕ್ಕೂ ಹೊಸತಾಗುವಂತೆ ಮಾಡಬಲ್ಲ ವಸ್ತುವೈವಿಧ್ಯವೂ ಕಲ್ಪನಾ ವಿಲಾಸವೂ ಬರವಣಿಗೆಯಲ್ಲಿ ಚಾತುರಿಯೂ ಬೇಕು. ಆಯಾ ವಸ್ತುವಿಗೂ ಭಾವಕ್ಕೂ ಹೊಂದುವ ಪದ್ಯರಚನಾಶಕ್ತಿಯು ಬರಬೇಕು. ಎಂತಹ ನೈಜವಾದ ಕಾವ್ಯಸ್ಫೂರ್ತಿಯೂ ಪ್ರತಿಭೆಯೂ ಉಳ್ಳ ಕವಿಗಾಗಲಿ ಹತ್ತು ಬಗೆಯ ಬಂಧಗಳ ತಿಳಿವಳಿಕೆಯೂ ರಚನೆಯಲ್ಲಿ ಅಭ್ಯಾಸ ನೈಪುಣ್ಯಗಳೂ ಇಲ್ಲವಾದರೆ

---

ಸಿದರೆ ಸಾಕು. ಆದರಿಂದ ಆವನು ಮಾಡಿಸುವ ಕೆಲಸ, ಆದು ಮೂಡುವ ಮನಸ್ಸಿನ ದೊಡ್ಡತನ ಇವು ಎರಡನೆಯ ಎಣಿಕೆಯಾವಾವು.

ಕೃತಿಯ ಶ್ರೇಷ್ಠತೆಗೆ ಕುಂದು ಬಂದೀತು. ಆತನು ಒಂದೇ ಬಗೆಯ ವಿಷಯವನ್ನೊ ಒಂದೇಬಗೆಯ ಬಂಧವನ್ನೊ ಏಕನಾದದಂತೆ ಮಾಟುತ್ತಿರಬೇಕಾದೀತು. ಆದುದರಿಂದ ಮನಸ್ಸು ರೀತಿಗಳನ್ನು ಒಂದೇ ಜಾಡಿಗೆ ಬೀಳುಗೊಡಬಾರದು. ಅಲ್ಲದೆ ಸ್ಫೂರ್ತಿಯ ಆವೇಗದಲ್ಲಿ ಬಂದುದನ್ನು ಬಂದ ಹಾಗೆ ಕವಿಯು ಬರೆಯಲಿ. ಆಮೇಲೆ ನಿಧಾನದಲ್ಲಿ ಶಾಂತಿಯ ಸಮಾಧಾನದಲ್ಲಿ ಕುಳಿತು ಅದನ್ನು ತಿದ್ದಲಿ. ತಪ್ಪು ಸರಿಯಾಗುವಂತೆ ತಿದ್ದಲಿ; ಆಕೃತಿ ನಯವಾಗಿ ಸ್ಫುಟವಾಗುವಂತೆ ತಿದ್ದಲಿ. ನಿಜವಾದ ಕವಿಗೆ ಬರುವ ಉನ್ನತಾವೇಶದಲ್ಲಿ ಹೊರಹೊಮ್ಮುವ ಕೃತಿಯೊಳಗೆ ಹೊರತು ಉಳಿದ ಸಮಯಗಳಲ್ಲಿ ಬರೆದ ಕೃತಿಯನ್ನು ಅಲ್ಲಿ ಇಲ್ಲಿ ತಿದ್ದಿ ನಯಮಾಡಿದರೆ ಅದು ಮೇಲಾಗುವುದು ಖಂಡಿತ.

ಹಿಂದಿನ ಕಾಲದ ವೃತ್ತಬಂಧಗಳು ಒಂದು ನಿಲವಿಗೂ ಒಂದು ತೂಕಕ್ಕೂ ಬಂದು ನಿಂತಿವೆ. ಅವುಗಳನ್ನು ಅದೇ ರೀತಿ ಪ್ರಯೋಗಿಸಿ ವಿಷಯಪ್ರತಿಪಾದನೆ ಸಂಪ್ರದಾಯಾನುಸರಣೆ ಮಾಡಿ ಹೊಸ ಬಗೆಯ ಕೆಲಸಕ್ಕೂ ರುಚಿಗೂ ಹೊಂದಿಸುವುದು ಕಷ್ಟವಾದೀತು. ಈಗ ಸಂಕೀರ್ಣಜಾತಿಯ ದೊಡ್ಡ ಪದ್ಯಖಂಡಗಳನ್ನೂ ಪದಗಳನ್ನೂ ನಡೆಯಿಸಿಕೊಂಡು, ಎಂಟು, ಹತ್ತು, ಹನ್ನೆರಡು, ಹದಿನಾರು ಪಾದಗಳುಳ್ಳ ಮಿಶ್ರಬಂಧದ ಪದ್ಯಗಳನ್ನು (Composite Stanza structures) ಒಂದಾದ ಮೇಲೊಂದು ಹತ್ತಾರು ಬರೆಯುವಾಗ ಪ್ರತಿಭೆಗೆಸಮನಾದ ಅಭ್ಯಾಸವೂ ಶಿಕ್ಷಣವೂ; ನಾದಗಳ ಸ್ವರಸಾಮರಸ್ಯವನ್ನು ಹಿಡಿದು ಜೋಡಿಸುವ, ರೂಢಿಸುವ, ಇಂದ್ರಜಾಲ ತೋರಿಸುವ, ಮೋಹಿಸುವ, ನಿಲ್ಲಬೇಕಾದಾಗ ನಿಲ್ಲಿಸಿ ತಾಂಡವವಾಡಬೇಕಾದಾಗ ಆಡಿಸಿ ಆದರೂ ಪಾದದ ಪ್ರಮಾಣವನ್ನಾಗಲಿ ಸಮತೆಯನ್ನಾಗಲಿ ಧಾರಾಳವನ್ನಾಗಲಿ ಬಿಗುವುಬನಿಗಳನ್ನಾಗಲಿ ಕೆಡಿಸದಂತೆ ಕಾಪಾಡುವ ಜಾಣ್ಮೆಯೂ ಅಗತ್ಯವಾಗುವುವು. ಪ್ರತಿಭೆಯ ಜೊತೆಗೆ ವಿಮರ್ಶೆಯೂ ಶಿಕ್ಷಣವೂ ಬೆರೆತರೆ ಕಾವ್ಯದ ಚಂದವು ಹೆಚ್ಚುವುದು. ಸುಶಿಕ್ಷಿತವಲ್ಲದ ಪ್ರತಿಭೆಯ ಓಟದಲ್ಲಿ ಅಸಮತೆಗಳು ತಲೆಹಾಕುವುವು; ಪಾದಗಳು ಕುಂಟಬೇಕಾದೀತು—ನಡಿಗೆಯು ದಾರಿಯಲ್ಲಿ ಸೊರಗಿ ಕುಸಿಯಬೇಕಾದೀತು; ಬಂಧದಲ್ಲಿ ಶೈಥಿಲ್ಯವು ಪ್ರಬಲಿಸೀತು. ಸರಿಯಾದ ಸಂತತವಾದ ವಿವಿಧವಾದ ವಿಸ್ತಾರವಾದ ಪ್ರಯೋಗವಿಲ್ಲದಾದರೆ ಎಂಥ ಶಕ್ತಿಯೂ ಕ್ಷೀಣಿಸುವುದು. ಬಂಧದಲ್ಲಿ ಅಲಕ್ಷ್ಯವನ್ನೂ ಅಸಡ್ಡೆಯನ್ನೂ ತೋರಿದರೆ ಲಾಭವೇನೂ ಇಲ್ಲ; ನಷ್ಟ ಬಹಳವುಂಟು. ಅದೂ ಅಲ್ಲದೆ

ಕವಿಯು ಪ್ರಯತ್ನವನ್ನು ಯಾವಾಗಲೂ ಜಾಗ್ರತವಾಗಿಟ್ಟು, ಕೀಳು ಕೆಲಸವನ್ನು ಮಾಡುವುದು ಅಯೋಗ್ಯವೆಂದರಿತು, ಇಂದಿಗಿಂತ ನಾಳೆ, ನಾಳೆಗಿಂತ ಮುಂದೆ ದೊಡ್ಡ ಕೃತಿಗಳನ್ನು ಕಟ್ಟಿ ಸಾಹಸಿಗನಾಗಿ ಬೆಳೆಯಬೇಕಾದುದು ಅವಶ್ಯಕ. ತಾನು ಬರೆದುದೆಲ್ಲ ಸರಿ ಎಂಬ ಮೋಹವನ್ನೂ ಅವಿವೇಕವನ್ನೂ ಸುತರಾಂ ಬಿಟ್ಟಹೊರತು ಮೋಕ್ಷವಿಲ್ಲ.

ಅಲ್ಲದೆ ತನ್ನ ಆತ್ಮತೃಪ್ತಿಗಾಗಿ ಬರೆಯುವವನಾದರೂ ಅದರ ಸಂತೋಷವು ಇತರರಿಗೂ ಆಗಲೆಂದೇ ಅವರೂ ಅದನ್ನು ಮೆಚ್ಚಲೆಂದೇ ಅದನ್ನು ಇತರರ ಕಿವಿಗೆ ಹಾಕಲೆಳಸುವುದು; ಪ್ರಕಟನೆಗೆ ಕಳುಹಿಸುವುದು. ಆಗ ಅದರ ಗುರಿಯು ಹೊರಮುಖವಾಯಿತು. ಅವರನ್ನು ಒಲಿಸಿಕೊಳ್ಳದಿದ್ದರೆ ಅಥವಾ ಗೆಲ್ಲದಿದ್ದರೆ ತೀರದು. ಕವಿಗೆ ಎಲ್ಲರ ಪ್ರೀತಿಯೂ ಬೇಕು; ಯಾರನ್ನೂ ಆತನು ಬಿಡುವಹಾಗಿಲ್ಲ. ಆದುದರಿಂದ ಹೊರಗಿನವರು ಯಾರು ಎಲ್ಲಿನವರು ಆ ಬರವಣಿಗೆಯನ್ನು ಓದಿದರೂ ಅದನ್ನು ತಾವೇ ಹೇಳಿ ಹಾಡಿಕೊಂಡಾಗ, ಓದಿ ಸವಿಯುವ ಶಕ್ತಿ ಬರುವಂತೆ ಆತನು ಬರೆಯಬೇಕಾಗುವುದು. ತಾನು ಅನುಸರಿಸಿರುವ ಮಾರ್ಗವು ಇದೇ ಎಂದು — ವಿಶ್ವಾಸದಿಂದ ಓದುವವರು ಯಾರೇ ಆಗಲಿ ಅವರಿಗೆ ಸ್ಪಷ್ಟವಾಗುವಂತೆ, ಅದರಲ್ಲಿಯೇ ಅಡಗಿರುವ ಯಾವುದೋ ಒಂದು ಕ್ರಮದಿಂದ ಕೃತಿಯ ಓಟ ಹೀಗೆ, ಅದರ ಜೀವಸ್ಥಾನಗಳು ಇಂಥವು ಎಂದು ಗುರುತಾಗುವಂತೆ, ಭಾವದ ಒತ್ತು, ಜಾರು, ಏರು, ಸೊರಗು, ಕುಣಿತ, ವಿಜೃಂಭಣಗಳು ತಮ್ಮಷ್ಟಕ್ಕೆ ತಾವೇ ಮನಗಾಣುವಂತೆ ಬರೆಯಬೇಕಾಗುವುದು. ಹೀಗೆ ಆವೇಶಸಾಧನೆಯಂತೆಯೇ ಕೃತಿಸಾಧನೆಯೂ ದೊಡ್ಡ ತಪಶ್ಚರ್ಯೆಯಾಗುವುದು.

ಕವಿಯು ಸರಸ್ವತಿಯ ಉಪಾಸಕ. ಉಪಾಸಕನಂತೆ ಸಂಪೂರ್ಣ ಭಕ್ತಿಯಿಂದ ದೇವಿಯ ಅರ್ಚನೆಗೆ ನೆರೆಯುತ್ತಾನೆ. ತನ್ನ ಅಂತಃಕರಣಗಳನ್ನು ಪರಿಶುದ್ಧವಾಗಿ ಇಟ್ಟುಕೊಳ್ಳುವುದರ ಜೊತೆಗೆ, ಪುಷ್ಟಿಗೊಳಿಸಿಕೊಳ್ಳುವುದರ ಜೊತೆಗೆ ಅವಕ್ಕೆ ವಿಶಾಲ ವ್ಯಾಪ್ತಿಯನ್ನು ಕೊಡುತ್ತ ಹೋಗುತ್ತಾನೆ. ಉಪಾಸನೆಯ ಜೊತೆಗೆ ಆತನಿಗೆ ಅರ್ಚಕನ ಕೆಲಸವೂ ಸೇರುತ್ತದೆ. ಸರಸ್ವತಿಯ ಗುಣಗಾನವೇ ಅವನ ಸಂತತ ಪ್ರಯತ್ನ. ಇತರ ಅರ್ಚಕರಂತೆ ಅವನು ತನ್ನ ದೇವಿಯ ಮಂದಿರದಲ್ಲಿ ಸ್ವಾಧಿಕಾರವನ್ನು ಸ್ಥಾಪಿಸಿ ಅಲ್ಲಿಗೆ ಇತರರಾರೂ ಪ್ರವೇಶಿಸದಂತೆ ಅಡ್ಡಿ ಒಡ್ಡುವುದಿಲ್ಲ. ಆತನು ಜೀವನಕ್ಕಾಗಿ

ದಕ್ಷಿಣೆಗಾಗಿ ಕೆಲಸ ಮಾಡುವವನಲ್ಲ.* ತನ್ನ ದೇವರನ್ನು ದಿನದಿನಕ್ಕೂ ಹೊಸಹೊಸದಾಗಿ ಶೃಂಗಾರ ಮಾಡುವನು. ಸಮಗ್ರ ಪ್ರಪಂಚದಿಂದ ಭಾಗ್ಯ ವನ್ನು ಹೊತ್ತು ತಂದು ಅಲ್ಲಿ ಕಾಣಿಕೆ ಅರ್ಪಿಸುವನು. ಬಣ್ಣ ಚಿತ್ರ ನಾದ ಗಳಿಂದಲೂ, ಅರ್ಥ ಧ್ವನಿ ರಸಗಳಿಂದಲೂ ದೇವರ ಸುತ್ತಲೂ ಪ್ರಭಾವಳಿ ಯನ್ನು ನಿರ್ಮಿಸುವನು. ಎದುರಿಗೆ ಕುಳಿತು ದಣಿವಿಲ್ಲದೆ ಹೃದಯವನ್ನು ಬಿಚ್ಚಿ ಹಾಡುವನು. ಬಂದವರೆಲ್ಲರಿಗೂ ಉತ್ಸಾಹದಿಂದ ಸಂಭ್ರಮದಿಂದ ತನ್ನ ದೇವರ ದಿವ್ಯ ಶೃಂಗಾರವನ್ನು ತೋರಿಸುವನು. ನೋಡಬನ್ನಿರೆಂದು ಎಲ್ಲರನ್ನೂ ಕೂಗಿ ಕರೆಯುವನು. ತನ್ನ ಭಕ್ತಿಯೂ ಪ್ರೀತಿಯೂ ಆವೇಶವೂ ಎಲ್ಲರಿಗೂ ಉಂಟಾಗುವಂತೆ ಮಾಡಿಕೊಡುವನು. ಪೂಜೆಗೂ ಸಂತೋಷಕ್ಕೂ ಹೆಚ್ಚು ಹೆಚ್ಚು ಜನರು ಜೊತೆಸೇರಿದಂತೆಲ್ಲ ಆತನ ಸಂತೋಷ ಹೆಚ್ಚು ವುದು. ಆತನ ಹಾಡು ಇಂಪಾಗುವುದು. ಅವನ ಹೃದಯದ ಕಾವೂ ತುಂಬೂ ಸವಿಯೂ ಇವರಿಗೂ ಬರುವುವು.

ಕಾವ್ಯವು ಜನರನ್ನು ಕೇವಲ ತಕ್ಷಣಕ್ಕೆ ಸಂತೋಷಪಡಿಸಿಬಿಟ್ಟರೆ ಕೃತಾರ್ಥ ವಾಗುವುದಿಲ್ಲ. ಆ ಸಂತೋಷವು ಆನಂದವಾಗಬೇಕು. ಆನಂದವು ಆಳವಾದ ಹರುಷ. ದೇಹ ಮನಸ್ಸುಗಳೆರಡಕ್ಕೂ ಚೈತನ್ಯವನ್ನು ಕೊಡುವ ಆತ್ಮದ ತುಂಬು ಹರುಷಕ್ಕೆ ಸಂಬಂಧಪಟ್ಟದ್ದು. ಆದುದರಿಂದ ಒಳಗೆ ಅನುಭವಿಸ ಬೇಕಾದ್ದು. ಸುಖದ ಮೂಲಕ, ಶಾಂತಿಯ ಮೂಲಕ, ಕರುಣೆ ಶೋಕಗಳ ಮೂಲಕ, ವೀರ ಹಾಸ್ಯಗಳ ಮೂಲಕ ಒಳಗೆ ಕರಣಗಳನ್ನೆಲ್ಲ ತೊಳೆದು ಆ ಹರುಷವು ಶುಚಿಗೊಳಿಸುವುದು. ಭಾವೋನ್ನತಿಯನ್ನೂ ಸತ್ವದ ಉದ್ರೇಕ ವನ್ನೂ ತಂದುಕೊಡುವುದು. ಎಷ್ಟೇ ಸ್ವಸಂಪೂರ್ಣವಾದರೂ ಸಾಹಿತ್ಯವು ಉತ್ತಮ ಜೀವನಕ್ಕೆ ಸಾಧನ; ಬಾಳಿಗೆ ಬೆಳಕು; ಆತ್ಮಶಕ್ತಿಯನ್ನು ಪೋಷಿಸುವ ಸಾರವಸ್ತು. ಕೇವಲ ವಿನೋದದಲ್ಲಿ ಪರ್ಯವಸಾನವಾಗತಕ್ಕ ದ್ದಲ್ಲ. ಕಾಲ ದೇಶ ಪರಿಸ್ಥಿತಿಗಳಿಗೆ ತಕ್ಕಂತೆ ಮೃದುವಾಗಿಯೋ ಶಾಂತ ವಾಗಿಯೋ ಭೀಷಣವಾಗಿಯೋ ಪ್ರಚಂಡವಾಗಿಯೋ ಆಗುವುದು; ಆಗ ಬೇಕಾಗುವುದು. ಹೇಗೆಯೇ ಆಗಲಿ ಅದರ ತಳದಲ್ಲಿ ಒಂದು ಆತ್ಮದ ಸತ್ವ

* ಅದೇ ಜೀವನಮಾರ್ಗವಾಗಿರುವವರ ಪರವಾಗಿ ಇಲ್ಲಿ ಯಾವ ಆಕ್ರೋಶವೂ ಇಲ್ಲ. ಅಂಥವರೂ ಅನೇಕರು ಭಕ್ತಿಯಿಂದ ತಮ್ಮ ದೇವರನ್ನು ಸಿಂಗರಿಸಿ ಪೂಜಿಸಬಲ್ಲ ರೆಂದೂ ಪೂಜಿಸುತ್ತಿರುವರೆಂದೂ ಬಲ್ಲೆ.

ವಿದ್ದ ಹೊರತು ಅದಕ್ಕೆ ಜೀವಕಳೆ ಬರುವುದಿಲ್ಲ. ಆ ಆತ್ಮದ ಗುಣವು ದೊಡ್ಡದಾದಷ್ಟೂ ಮಾನವ ವರ್ಗಕ್ಕೆ ಅದರ ಅರ್ಥವೂ ಆವಶ್ಯಕತೆಯೂ ಸಹಾಯವೂ ಹೆಚ್ಚಾಗುವುವು.

ಪ್ರಕೃತಿಯಲ್ಲಿನ ಸಾಮಗ್ರಿಗಳೆಲ್ಲವೂ ಕವಿಯ ಚಿತ್ತವೇಧಕವಾಗಿ ಅವನ ಹೃದಯವನ್ನು ಕೆರಳಿಸುತ್ತಿರುತ್ತವೆ; ಮೋಹಿಸುತ್ತಿರುತ್ತವೆ; ಸಹಾಯ ಸಹಾನುಭೂತಿಗಳನ್ನೋ ವಿಷ ವಿರೋಧಾದಿಗಳನ್ನೋ ಸೂಚಿಸುತ್ತಿರುತ್ತವೆ. ಅವುಗಳ ಹೊರ ರೂಪದಲ್ಲಿನ ಚಿತ್ರಸೌಂದರ್ಯ, ಸೌಕುಮಾರ್ಯ, ವೈಭವ, ಕಠಿಣತೆ, ಕ್ರೌರ್ಯ ಇವುಗಳನ್ನು ಕುರಿತೇ ಮನಸ್ಸು ಅನಂತವಾಗಿ ಹಾಡಿ ಬಾಹ್ಯಪ್ರಪಂಚದ ಅರಿವನ್ನೇ ಮಾಡಿಕೊಡುತ್ತಿರುವಾಗಲೂ ಅವನ್ನು ಕಾಣುವ ಕಣ್ಣು ಎಷ್ಟು ಹರಿತವಾಗಿ ಸೂಕ್ಷ್ಮಗ್ರಾಹಿಯಾದರೆ ತೋರುವ ನೋಟವು ಅಷ್ಟು ನಿಶ್ಚಯವಾಗುವುದು, ಸೂಕ್ಷ್ಮವಾಗುವುದು. ಯಾವ ವಿಧದಲ್ಲಿ ಇಂದ್ರಿಯಗೋಚರವಾದರೂ ಕವಿಯ ಮನಸ್ಸಿನಿಂದ ವಸ್ತು ಮಾರ್ಪುಗೊಳ್ಳುವುದು. ಅವನ ಆಗಿನ ಸ್ಥಿತಿಯಿಂದ ವಿಪರೀತವಾಗಿ ಕಾಣು ವುದು ; ಅನುನಯದಿಂದ ವರ್ತಿಸುವಂತೆ ತೋರುವುದು ; ಕಳೆಗೊಂಡು ದಿವ್ಯ ರೂಪವನ್ನು ತಳೆದಂತೆ ಇರುವುದು. ಆಗಿನ ಭಾವ, ಬುದ್ಧಿ, ದೃಷ್ಟಿ, ಉದ್ದೇಶ ಇವುಗಳಿಗೆ ಅಧೀನವಾಗಿ ಅವನ ನುಡಿಯನ್ನು ನಡೆಯಿಸುವುದು. ಎಂದರೆ ವ್ಯಕ್ತಿಗುಣದ ಬಣ್ಣ ಕಳೆ ತೂಕಗಳಿಂದ ಬಣ್ಣಗೊಂಡು ರಂಜಿಸುವುದು. ಹೊರಗಿನ ವಸ್ತುಪ್ರಪಂಚಕ್ಕಿಂತ ಅವನು ಕಾಣಿಸುವ ನೋಟವು ಸತ್ಯಕ್ಕಿಂತ ಸತ್ಯವಾದ, ಚೆಲುವಿಗಿಂತ ಚೆಲುವಾದ ಒಂದು ಹೊಸ ಪ್ರಪಂಚವನ್ನು ನಿರ್ಮಾಣ ಮಾಡುವುದು. ಈ ಪ್ರಪಂಚದ ಸೌಂದರ್ಯವು ಇತರ ಹೃದಯ ಗಳನ್ನು ಹೊಕ್ಕು ಅಲ್ಲಿ ಅಡಗಿರುವ ರಾಗ ಭಾವಗಳನ್ನು ಎಚ್ಚರಗೊಳಿಸಿ ಆಧಿಪತ್ಯ ಮಾಡುವುದು. ಕವಿ ಹೃದಯದ ಪರಿಚಯವನ್ನೂ ಸ್ನೇಹವನ್ನೂ ಮಾಡಿಕೊಟ್ಟು ಇಬ್ಬರನ್ನೂ ಅಲ್ಲಿನ ಕಾವಿನಿಂದ ಬೆಸೆಯುವುದು. ಕವಿ ನಿರ್ಮಿತವಾದ ಪ್ರಪಂಚವು ಎಷ್ಟು ಶುದ್ಧವಾಗಿ ಮೃದುವಾಗಿ, ಸ್ವತಂತ್ರವಾಗಿ, ವಿವಿಧಸಂಪದ್ಯುಕ್ತವಾಗಿ ಪ್ರತಿಫಲಿಸುವುದೋ ಅಷ್ಟು ಸೌಖ್ಯದಿಂದ ಅದು ಇತರರ ಮನಸ್ಸನ್ನು ಕೊಂಡು, ಅವರ ಬಾಳಿಗೆ ಅನ್ವಯಿಸಿ, ಬದುಕನ್ನು ತಿದ್ದಿ, ಅವರ ಅಂತಃಕರಣಪ್ರವೃತ್ತಿಗಳಲ್ಲಿ ಅಡಗಿರುವ ನಯ, ಹರುಷ, ಧೈರ್ಯ, ಸ್ಥೈರ್ಯಗಳನ್ನು ಹೊರಕ್ಕೆ ತರುವುದು. ಕಣ್ಣೀರಿಂದ ಅಲ್ಲಿನ

ಕಠಿಣವನ್ನು ಕರಗಿಸಿ ಕರುಣೆಯನ್ನು ಹೊರಕ್ಕೆ ತರುವುದು.

ಮುಖ್ಯವಾಗಿ ಕಾವ್ಯದಲ್ಲಿ ದೊರಕುವುದು ಕವಿಯ ಸಹವಾಸ. ಅದರ ಆಳದಲ್ಲಿ ಅಡಗಿರುವುದು ಆತನ ಜೀವ. ಆದುದರಿಂದ ಕವಿ ಕಾಣಿಸುವ ಸತ್ಯ ದರ್ಶನವು ಯಾವ ಬಗೆಯದಾಗಿರಬೇಕೆಂಬ ವಿಷಯದಲ್ಲಿ ಆತನು ಬಹಳ ಜವಾಬ್ದಾರಿಯನ್ನು ವಹಿಸಿದವನಾಗಿರಬೇಕು. ಯಾವ ಕೃತಿಯೇ ಆಗಲಿ ಆತನ ಮನಸ್ಸಿನ ಮಟ್ಟಕ್ಕೆ ತಾನೇ ಏರಬಲ್ಲದು? ತನ್ನಲ್ಲಿಲ್ಲದ ಗುಣವನ್ನೂ ಸ್ಫೂರ್ತಿಯನ್ನೂ ಕವಿ ತನ್ನ ಕಾವ್ಯಕ್ಕೆ ಹೇಗೆ ಬರಿಸಿಯಾನು? ಕಾವ್ಯದ ಮಟ್ಟವು ಎಷ್ಟು ಎತ್ತರಕ್ಕೆ ಏರಬಹುದು ಎಂಬುದನ್ನು ಹೀಗೆ, ಕವಿಯ ಆತ್ಮದ ಉನ್ನತಿಯೂ ಚಿತ್ತವಿಶೇಷವೂ ನಿರ್ಧರಿಸುವುವು. ಎಂತಹ ದೊಡ್ಡ ಕವಿಯೇ ಆಗಲಿ,—ತನ್ನ ಕವಿತೆ ವರ್ಣನೆಯಲ್ಲಿ ಪರಿಸಮಾಪ್ತಿ ಹೊಂದಲಿ, ಕೇವಲ ಕಥಾರಚನೆಯಾಗಲಿ, ಜೀವನದ ವ್ಯಾಖ್ಯಾನವಾಗಿರಲಿ ನೀತಿ ಬೋಧಕವಾಗಿರಲಿ ಅಥವಾ ಹಾಸ್ಯಪಂಥವನ್ನು ಅನುಸರಿಸಿರಲಿ — ಅದರಲ್ಲಿ ಆತನು ಉತ್ತಮವಾದ ಭಾವರಸಗಳನ್ನು ತುಂಬಬೇಕು. ಅಮೃತವನ್ನು ಕರೆಯಬೇಕು. ಅದಿಲ್ಲದೆ ಆಕ್ರೋಶ, ಬೇಸರ, ನೀರಸತೆ, ಕಾಠಿಣ್ಯಗಳನ್ನು ತುಂಬಿದರೆ ದಾಹದಿಂದ ನೀರು ಬೇಡಲು ಬಂದವರಿಗೆ ವಿಷಪಾನವನ್ನೊದಗಿಸಿದಂತಾಗುವುದು. ಸಾಹಿತ್ಯಕ್ಕೆ ದ್ರೋಹಮಾಡಿದಂತಾಗುವುದು. ಎಲ್ಲಕ್ಕೂ ಹೆಚ್ಚಾಗಿ ಆತ್ಮದ್ರೋಹಮಾಡಿಕೊಂಡ ಹಾಗಾಗುವುದು.

ಕವಿಯು ಪ್ರಪಂಚವನ್ನು ಕಣ್ಣುತುಂಬ ನೋಡಲಿ; ತನ್ನ ಆವೇಶಗಳು ಒಂದು ಹದಕ್ಕೂ ಪಾಕಕ್ಕೂ ಬರುವಂತೆ ಮನಸ್ಸನ್ನು ನಿರಂತರವಾಗಿ ಒಂದು ಶಾಖದಲ್ಲಿಟ್ಟುಕೊಳ್ಳಲಿ; ತನ್ನ ವ್ಯಕ್ತಿತ್ವದ ಮುದ್ರೆಯನ್ನು ಕವಿತೆಯ ಮೇಲೆ ಹಾಕಲಿ;* ಪ್ರಪಂಚಕ್ಕೆ ಒಂದು ಹೊಸ ದೃಷ್ಟಿಯನ್ನೂ ಸಾತ್ವಿಕದಿಂದ ಮಿಡಿಯುವ ಒಂದು ಮೃದುಜೀವನವನ್ನೂ ಕಾಣಿಕೆಯಾಗಿ ಅರ್ಪಿಸಲಿ; ಅದರಿಂದ ಪ್ರಪಂಚದ ಸತ್ವವು ಬೆಳೆಯುವಂತಾಗಲಿ. ಎಲ್ಲಿ ಎಲ್ಲವೂ ತಿಳಿದಿದೆ, ಕಂಡಿದೆ, ಕೇಳಿದೆ, ತಿಳಿಯಬೇಕಾದುದು ಇನ್ನಾವುದೂ ಉಳಿದಿಲ್ಲ, ಎಂದು ಜಗತ್ತೇ ತೃಪ್ತಿ ಪಟ್ಟುಕೊಂಡಿದೆಯೋ ಅಲ್ಲಿಗೆ ಒಂದು ಹೊಸ ನೋಟವನ್ನೂ, ಭಾವವನ್ನೂ, ಚೆಲುವಿನ ಅನುಭವವನ್ನೂ ಉದಾತ್ತತೆಯನ್ನೂ ತಂದು ಅಚ್ಚರಿಗೊಳಿಸಲಿ;

* ಅವನು ನಿಜವಾಗಿ ವ್ಯಕ್ತಿಯಾದರೆ ಆ ಮುದ್ರೆ ಬಿದ್ದೇ ಅವನ ವಾಣಿ ಕೇಳುವುದು.

ಎಲ್ಲೆಡೆಗೂ ಸಂತೋಷವನ್ನೂ ಶ್ರದ್ಧೆಯನ್ನೂ ಧೈರ್ಯವನ್ನೂ ವೀರ್ಯವನ್ನೂ ಎರೆಯಲಿ; ವಿಶ್ವವಿಶಾಲವಾದ ಕನಿಕರವನ್ನೂ ಸಹನೆಯನ್ನೂ ಮಾನವ ಪ್ರೀತಿಯನ್ನೂ ನಟ್ಟು ಬೆಳೆಯಿಸಲಿ. ಇಹವು ಸ್ವರ್ಗದ ಬೀಡಿನಂತೆ ಆಗುವ ಸೌಮನಸ್ಯವನ್ನು ಬಿತ್ತಿ ಬೆಳಸಲಿ. — ಇದೇ ಕವಿಯ ಮುಖ್ಯ ಕೆಲಸ.

ಉತ್ತಮ ಕಾವ್ಯದಲ್ಲಿ ಯಾವ ಅಪ್ರಾಮಾಣಿಕತೆಗೂ ಎಡೆಯಿಲ್ಲ; ಯಾವ ಭಾವದಾಸ್ಯಕ್ಕೂ ಅವಕಾಶವಿಲ್ಲ; ಯಾವ ಕೃತಕ ಸೌಂದರ್ಯಗಳಿಗೂ ಬೆಲೆಯಿಲ್ಲ; ಯಾವ ಸದ್ಯಃಫಲದಾಸೆಗೂ ಗೌರವವಿಲ್ಲ; ಯಾವ ಧರ್ಮ ದೌರ್ಬಲ್ಯಕ್ಕೂ ದಾಕ್ಷಿಣ್ಯಕ್ಕೂ ಸ್ಥಾನವಿಲ್ಲ. ಕಡೆಗೆ ಕೇವಲ ನಯ, ನಾಜೂಕು, ಮೃದು, ಬೆಡಗು, ಚೆಲುವು, ಸೌಂದರ್ಯಗಳು ಕೂಡ ಇಂತಹದರೊಡನೆ ತೂಕಕ್ಕೆ ನಿಂತಾಗ ಕಡಮೆಯ ಮಟ್ಟದಲ್ಲಿ ನಿಲ್ಲುವುವು. ಸ್ವತಂತ್ರವಾದ, ಅಪರಾಜಿತವಾದ ಮನಸ್ಸು, ಉದ್ದಾಮಗುಣ, ಗಾಂಭೀರ್ಯ, ಭವ್ಯತೆ, ಮಂಗಳದೃಷ್ಟಿ ಇವುಗಳು ಮೇಲೆ ನಿಂತು ಆಧಿಪತ್ಯಮಾಡುವುವು. ಸನ್ನಿವೇಶವು ಎಂತಹುದೇ ಆಗಲಿ ಕೀಳು ಕಲ್ಪನೆ, ಅನ್ಯಾಯ, ವಿಕಾರ, ಅಸತ್ಯ, ದೌಷ್ಟ್ಯ, ಅರಸಿಕತೆ, ಔದ್ಧತ್ಯ ಇವುಗಳಿಗೂ ಕವಿಜೀವನಕ್ಕೂ ಎಂದಿಗೂ ಒಡಂಬಡಿಕೆಯಿಲ್ಲ. ಅವು ಕವಿಗಳ ಹುಟ್ಟು ವೈರಿಗಳು; ಅವುಗಳನ್ನು ನಾಶಮಾಡುವುದಕ್ಕೇ ಕವಿತೆಯು ಹುಟ್ಟುವುದು. ಆ ಕೆಲಸವೇ ಎಲ್ಲ ಕಾವ್ಯದ ಕಲೆಯ, ಶಾಸ್ತ್ರದ, ಧರ್ಮದ, ಮತದ — ಅಷ್ಟೇ ಏನು ಎಲ್ಲ ಮಾನವೋದ್ಯಮದ ಪರಮೋದ್ದೇಶ, ಪರಮ ಕರ್ತವ್ಯ.

ಎಲ್ಲಿನವರೆಗೆ ಈ ಬಗೆಯ ವಿಷದ ಬಿತ್ತಗಳು ಬದುಕನ್ನು ಹೊಲೆಗೆಡಿಸುವುವೋ ಸಂಕಟಗಳನ್ನು ಹೆಚ್ಚಿಸುತ್ತವೆಯೋ ಅಲ್ಲಿನವರೆಗೂ ಕವಿಯ ಮನಸ್ಸಿಗೆ ಶಾಂತಿಯಿಲ್ಲ; ಅವನ ನಾಲಿಗೆಗೆ ವಿರಾಮವಿಲ್ಲ; ಅವನ ಲೇಖನಿಗೆ ಬಿಡುವಿಲ್ಲ. ಆಗಲೂ ಕವಿ ಮಾತ್ರ ಕಠಿಣಕ್ಕೆ ಪ್ರತಿಯಾಗಿ ಕಠಿಣವನ್ನಾಗಲಿ ಅನ್ಯಾಯಕ್ಕೆ ಪ್ರತಿಯಾಗಿ ಅನ್ಯಾಯವನ್ನಾಗಲಿ ಎದುರು ನಿಲ್ಲಿಸಲು ತೊಡಗಬಾರದು. ಕರುಣೆ, ಪ್ರೀತಿ, ತಿಳಿವಳಿಕೆ, ಸಹನೆ, ವಿಶಾಲಬುದ್ಧಿ, ಕ್ಷಮೆ, ಔದಾರ್ಯಗಳೇ ಕವಿಯ ಆಯುಧಗಳು. ಅವುಗಳ ಮೂಲಕವೇ ಎಲ್ಲ ಬಗೆಯ ತಾಮಸವನ್ನೂ ಆತನು ನಿವಾರಿಸಬೇಕು. ಕೆಟ್ಟುದರ ಕೆಟ್ಟತನವು ಅದಕ್ಕೇ ಅಸಹ್ಯವಾಗುವಂತೆ ಮಾಡಿ ಅದರ ಹೃದಯವನ್ನು ತೆರೆಯಿಸಬೇಕು. ಮೃದು ರೀತಿಯಲ್ಲಿ ಎಲ್ಲಿಗೂ ಸಾಧ್ಯವಾಗದೆ, ಧರ್ಮದ ಹೊರರೂಪದಲ್ಲಿ ಅಡಗಿ

ವಂಚಿಸುತ್ತ, ಅತಿ ವ್ಯಾಪಕವಾಗಿರುವ ದೌಷ್ಟ್ಯಕ್ಕೆ ಪ್ರತಿಯಾಗಿ ಜನರ ಮನಸ್ಸನ್ನು ಸೆಳೆಯಬೇಕಾದಾಗ ಮಾತ್ರ ಅದು ನಿಷ್ಠುರದೀಕ್ಷೆಯನ್ನು ವಹಿಸಿ ಇತರ ಎಲ್ಲ ದನಿಗಳನ್ನೂ ಮುಳುಗಿಸಿ ತುತೂರಿಯಂತೆ ತನ್ನ ಕರೆಯನ್ನು ತಾರಕ್ಕೆ ಎತ್ತಬೇಕಾಗುವುದು. ಅಲ್ಲಿಯೂ ತನ್ನ ಉದ್ದೇಶದ ಶ್ರೇಷ್ಠತೆಗೆ ಕುಂದು ಬಾರದಂತೆ ತನ್ನ ಪ್ರಭಾವವು ಅಮೃತವಾಗುವಂತೆ ಜಾಗೃತವಾಗಿರಬೇಕಾಗಿರುವುದು. ಸತ್ಯ, ನ್ಯಾಯ, ಆರ್ಜವಗಳ ಸೇವೆಗೂ ಪ್ರಚಾರಕ್ಕೂ ನಿಂತು, ಅವುಗಳ ದಿವ್ಯದರ್ಶನಗಳನ್ನು ಮಾಡಿಕೊಟ್ಟು, ಜನರ ಮನಸ್ಸಿನ ಕಿಲುಬುಗಳನ್ನೆಲ್ಲ ಹರಿಸಿ, ಬಾಳಿಗೆ ಹೊಸ ರಕ್ತವನ್ನೂ ಚೈತನ್ಯವನ್ನೂ ತುಂಬುತ್ತ, ಶುಚಿ ಸತ್ಯ ಸೌಂದರ್ಯಗಳಲ್ಲಿ ಪಕ್ಷಪಾತವನ್ನೂ ಶ್ರದ್ಧೆಯನ್ನೂ ತುಂಬುವ ಕಾವ್ಯದಿಂದ ಇತರ ಯಾವ ವಿಧಾನದಿಂದಲೂ ಸಾಧ್ಯವಾಗದ ಶುಭ ಪರಿಣಾಮವು ಸಾಧಿತವಾಗುವುದು. ಅಂತಹ ಕಾರ್ಯಕ್ಕೆ ಲಾಭದ ದೃಷ್ಟಿಯಿಲ್ಲ. ಅದಕ್ಕೆ ಅದೇ ಪ್ರಮಾಣ. ಅದೇ ಫಲ. ಸ್ವರಸಬಲದಿಂದ ಅದು ಎಲ್ಲವನ್ನೂ ಒಲಿಸಿ ಸವಿ ಮಾಡುವುದು. ಇಂತಹ ಕವಿ ಹೃದಯವು ಕಾವ್ಯದಲ್ಲಿ ಅಭಿವ್ಯಕ್ತಿ ಹೊಂದಿದಂತೆಲ್ಲ ಮನುಷ್ಯನ ಮೂರ್ತಿ ಬೆಳೆಯುವುದು; ಕಾವ್ಯವು ಮನುಷ್ಯನ ಅತ್ಯುದಾತ್ತ ಕಲ್ಪನೆಗಳ ನೆಲೆಬೀಡಾಗುವುದು.

ಈ ಸ್ಥಿತಿಯು ಇಂದಿನ ಜೀವನಕ್ಕೆ ಇನ್ನೂ ಬಹು ದೂರದಲ್ಲಿದೆ; ನಮ್ಮ ಕೈಗೆ ಎಟುಕದಷ್ಟು ಎತ್ತರದಲ್ಲಿದೆ. ಅದರ ಬಳಿಗೆ ಪ್ರತಿ ಹೆಜ್ಜೆಗೂ ಸಾರುವುದು ನಮ್ಮ ಕೆಲಸ; ಅದಕ್ಕೆ ಕೈಚಾಚಿ ಕರೆಯುವುದು ನಮ್ಮ ಕೆಲಸ. ಈ ಭವ್ಯ ಧ್ಯೇಯವೇ ಸಾಹಿತ್ಯದಲ್ಲಿ ಕೆಲಸಮಾಡುವವರಿಗೆಲ್ಲ ದೇವರು; ಅದರ ಸಾಧನೆಯೊಂದೇ ಪೂಜೆ; ಅದರ ಸೇವೆ ಪ್ರಚಾರಗಳೇ ದೇವರ ಸೇವೆ.

ಇಂತಹ ಕವಿಜೀವನವನ್ನು ಕೈಕೊಳ್ಳುವುದು ಎಲ್ಲರ ಪಾಲಿಗೂ ಬರುವ ಭಾಗ್ಯವಲ್ಲ. ಅದನ್ನು ತಿಳಿದು ತಮ್ಮ ಶಕ್ತಿಯ ಮಟ್ಟಿಗೆ ಸೇವೆಮಾಡುವುದು ಮಾತ್ರ ಎಲ್ಲ ಕವಿಗಳ ಪಾಲಿಗೂ ಬರಬಹುದಾದ ಕೆಲಸ. ಇಂತಹ ಉದ್ಯಮ ಸಮಾರಂಭಗಳಲ್ಲಿ ಭಾಗಿಗಳಾಗಿ, ಬೇಕಾಗುವ ಎಲ್ಲ ಅನುಕೂಲಗಳನ್ನೂ ಅವಕಾಶಗಳನ್ನೂ ಕಲ್ಪಿಸಿಕೊಡುವುದು ಮಾತ್ರ ಎಲ್ಲರಿಗೂ ಎಲ್ಲ ಕಾಲಗಳಲ್ಲಿಯೂ ಸುಲಭವಾಗಿ ದೊರೆಯಬಲ್ಲ ಪುಣ್ಯ. ಅಂತಹ ಪುಣ್ಯವನ್ನು ನಮ್ಮ ಕಾಲದಲ್ಲಿ ಕಟ್ಟಿಕೊಳ್ಳಬೇಕೆಂದು ನಾನು ತಮ್ಮನ್ನು ಪ್ರಾರ್ಥಿಸುತ್ತಿದ್ದೇನೆ.

---

# ಕಲೆಯ ಪ್ರಪಂಚ

ಸಂಗೀತ, ಸಾಹಿತ್ಯ, ಚಿತ್ರ, ಶಿಲ್ಪ, ನಾಟ್ಯ ಇವನ್ನು ನಯಕಲೆಗಳೆನ್ನುವುದು ವಾಡಿಕೆ. ಇವೆಲ್ಲಕ್ಕೂ ಸಾಮಾನ್ಯವಾದ ಒಂದು ಧರ್ಮವಿದೆ; ಒಂದೊಂದಕ್ಕೂ ವಿಶೇಷ ಲಕ್ಷಣಗಳಿವೆ. ಸಾಮಾನ್ಯ ಧರ್ಮವೇ ಕಲೆಯ ಮೂಲಸ್ವರೂಪಕ್ಕೆ ಸಂಬಂಧಿಸಿದ್ದು. ಕಲೆಯ ಉತ್ಪತ್ತಿ ಹೇಗೆ? ಗುರಿಯೇನು? — ಎಂಬುದು ಒಟ್ಟನಲ್ಲಿ ಈ ಸಣ್ಣ ಲೇಖನದ ವಿಷಯ.

ಚೆನ್ನಾಗಿ ಮಾಡಿದ ಯಾವ ಪದಾರ್ಥವನ್ನು ಕಂಡರೂ ಅಲ್ಲಿ ಕಲೆಗಾರಿಕೆ ಕಾಣುತ್ತೇವೆ. ಪ್ರಯೋಜನದ ಎಣಿಕೆಯ ಜೊತೆಗೆ ಒಂದಕ್ಕಿಂತ ಇನ್ನೊಂದು ಮನೋಹರವಾಗಿದೆ ಎನ್ನುತ್ತೇವೆ. ಗುಣಗಾನ ಮಾಡಿ ಪಕ್ಷಪಾತ ತೋರಿಸುತ್ತೇವೆ. ಇದು ಏಕೆ ಎಂಬುದು ನಮ್ಮ ವಿಷಯಕ್ಕೆ ಒಳಪಡುವ ಸಂಗತಿ. ಆದರೂ ಅಲ್ಲಿ ವಿಮರ್ಶೆಯ ಭಾಗಹೆಚ್ಚಾಗಿರುವುದರಿಂದ ಈ ಪ್ರಸಂಗದಲ್ಲಿ ಅದಕ್ಕೆ ಎರಡನೆಯ ಸ್ಥಾನ. ಕಲೆಯಲ್ಲಿ ಚೆನ್ನವೆಂದರೇನು? ಅದರ ಜೀವ ಎಲ್ಲಿದೆ ಎಂಬುದೇ ಇಲ್ಲಿ ಪರ್ಯಾಲೋಚ್ಯ.

ಪ್ರತಿ ಕಲೆಗೂ ಸಾಧನಗಳು ಬೇರೆ ಬೇರೆ: ಚಿತ್ರದಲ್ಲಿ ಬಣ್ಣ, ಕುಂಚಿ, ಹಲಗೆ, ಕಾಗದ, ಬಟ್ಟೆ ಸಾಧನಗಳು; ಸಂಗೀತದಲ್ಲಿ ಕಂಠಗುಣ, ವಾದ್ಯಗಳು ಹಾಗೆ; ನಾಟ್ಯಕ್ಕೆ ತಾಳಗತಿ, ಅಂಗಭಂಗಿ, ಚಲನೆ ಸಾಧನಗಳು; ಶಿಲ್ಪಕ್ಕೆ ಮಣ್ಣು, ಕಲ್ಲು, ಗಾರೆ, ಮರ, ಲೋಹ, ಬಟ್ಟೆ, ಅರಗು, ಬೆಂಡು ಮುಂತಾದ ವಸ್ತುಗಳ ಜೊತೆಗೆ ಕಾಣೆ ಕಡೆಗೋಲು, ಗಜಗಡ್ಡಿ ಉಳಿ, ಸುತ್ತಿಗೆ ಸಾಧನಗಳು; ಸಾಹಿತ್ಯಕ್ಕೆ ಮಾತುಗಳ ಶಬ್ದಾರ್ಥ ಧ್ವನಿ ಅವು. ಕಲೆಗಳಲ್ಲಿ ಉಪಜಾತಿಗಳುಂಟು. ಚಿತ್ರದಲ್ಲಿ ರೇಖಾಚಿತ್ರವೂ ವರ್ಣಚಿತ್ರವೂ ಬೇರೆ ಬೇರೆ ರೀತಿ ಕೆಲಸ ಮಾಡುತ್ತವೆ; ನಾಟ್ಯದಲ್ಲಿ ಅಭಿನಯ ಭಾಗ, ನರ್ತನ ಭಾಗ ಬೇರೆ ಬೇರೆ; ಶಿಲ್ಪದಲ್ಲಿ ಮಂದಿರಶಿಲ್ಪ, ಮೂರ್ತಿಶಿಲ್ಪ ಬೇರೆ ಬೇರೆ.*

* ಮೂರ್ತಿಶಿಲ್ಪದ ಭಂಗಿಯಲ್ಲಿ ನೃತ್ಯಘನಿಸಿ (Frozen Dance) ಕಾಣುವುದೆನ್ನುವರು. ನೃತ್ಯವನ್ನು ದ್ರವಶಿಲ್ಪವೆನ್ನಬಹುದು (Liquid Sculpture). ವಾಸ್ತು ಘನಿಸಿದ ಸಂಗೀತದಂತೆ; ಸಂಗೀತ ದ್ರವವಾಸ್ತುವಿನಂತೆ.

ಒಂದಕ್ಕೆ ಇನ್ನೊಂದು ಸಹಾಯ ಕೊಡಬಹುದು; ಕಳೆತುಂಬು ಹೆಚ್ಚಿಸ ಬಹುದು. ಸಂತೋಷ ಪ್ರಯೋಜನಗಳು ಕೂಡಿ ಎರಡು ಅಥವಾ ಹಲವು ಕಲೆಗಳ ಮೇಳದಿಂದ† ಕಾಂತಿಪ್ರಭಾವಗಳ ಅತಿಶಯತೆಯೂ ರಂಜನಾ ಶಕ್ತಿಯೂ ಹೆಚ್ಚಬಹುದು. ಒಂದು ಕಲೆ ಕಣ್ಣಿಗೊ ಕಿವಿಗೊ ಯಾವವೊಂದು ಅನುಭವಾಂಗಕ್ಕೊ ಹೆಚ್ಚು ತೃಪ್ತಿ ಕೊಡಬಹುದು. ಚಿತ್ರ, ಶಿಲ್ಪ, ನಾಟ್ಯ, ಅಭಿನಯ — ಇವು ಮೊದಲು ಕಣ್ಣಿಗೆ ಗೋಚರ. ಸಂಗೀತ,‡ ಮೊದಲು ಕಿವಿಗೆ; ಶಿಲ್ಪ, ಸ್ಪರ್ಶಕ್ಕೆ, ಕಣ್ಣಿಗೆ. ಕೆಲವುಗಳ ಅನುಭವ ಏಕಾಂತದಲ್ಲಿ ಸುಖ; ಕೆಲವಕ್ಕೆ ಜನಸಂಗತಿ ಕಳೆ ಕೊಡುವುದು. ಚಿತ್ರಗಾನಗಳಲ್ಲಿ ನೇರ ವಾದ ಹೊರ ಪ್ರಯೋಜನ ಇದ್ದರೆ ಇರಬಹುದು, ಇಲ್ಲವಾದರೆ ಬೇಡ. ಮಂದಿರ ಶಿಲ್ಪ ಹಾಗಲ್ಲ; — ಜನದ ವಾಸಕ್ಕೊ ನೆರೆತಕ್ಕೊ ಪೂಜಾ ಅಥವಾ ಸಭಾ ಕಾರ್ಯಕ್ಕೊ ಆದುದು. ಕೆಲವು ಅರ್ಥಶಕ್ತಿಯಿಂದಲೇ ಪೂರ್ಣವಾಗಬೇಕು, ಸಾಹಿತ್ಯದಂತೆ; ಕೆಲವಕ್ಕೆ ಸಂಪೂರ್ಣ ಅರ್ಥಸ್ಪಷ್ಟತೆ ಇಲ್ಲ, ಸಂಗೀತ ನರ್ತನಗಳಂತೆ. ಹಾಗೆ ಇಲ್ಲದಿರುವುದೇ ಅವುಗಳ ಹಿರಿಮೆ.* ಪ್ರಯೋಜನವೂ ಅಭಿಪ್ರಾಯಪ್ರಕಾಶನವೂ ಕಾರ್ಯಪ್ರಚೋದನೆಯೂ ಎಲ್ಲಿ ಮುಖ್ಯವೋ ಅಲ್ಲಿ ಸಮಾಜಸಂಬಂಧವೂ ವ್ಯವಹಾರದ ಬೆಲೆಗಳೂ ಮುಂದಾಗುವುವು.

ಈ ಸಾಧನಗಳನ್ನು ಹೇಗೆ ಸಂಗ್ರಹಿಸಬೇಕು? ಅವುಗಳ ಗುಣವೇನು, ಬಲವೇನು? ಅವುಗಳ ಸಮ್ಮೇಳನ ಯಾವ ರೀತಿ ಆದರೆ ಕೆಲಸ ಚೆನ್ನಾಗು ವುದು ಎಂಬುದು ಕೃತಿಕಾರನ ಅವಧಾನದಲ್ಲಿರತಕ್ಕದ್ದು: ಅವನ್ನು ಉಪ ಯೋಗಿಸುವ ಆತನ ವಸ್ತು ಪರಿಜ್ಞಾನ, ಲೋಕಾನುಭವ, ಸಂಪ್ರದಾಯದ ತಿಳಿವಳಿಕೆ, ಕಾರ್ಯಾಭ್ಯಾಸ ಮುಂತಾದವೂ ಅಗತ್ಯವೂ ಹಾಗೆಯೇ. ಕವಿಯ

† ಉದಾ. ಗಮಕದಲ್ಲಿ ಕಾವ್ಯ, ಸಂಗೀತ; ವಾಸ್ತುರಚನೆಯಲ್ಲಿ ಆಕೃತಿಶಿಲ್ಪ, ಚಿತ್ರ; ನಾಟಕ ಪ್ರದರ್ಶನದಲ್ಲಿ ಸಂಗೀತ, ವೇಷಭೂಷ, ಸಾಹಿತ್ಯ, ನೃತ್ಯ, ಚಿತ್ರ ಇತ್ಯಾದಿ ಗಳ ಮೇಳದಂತೆ.

‡ ಬರೆದಿಟ್ಟ ಸಂಗೀತವೂ ಅಚ್ಚಾದ ಕವಿತೆಯೂ ಕಣ್ಣಿಗೆ ಮೊದಲು ಗೋಚರವಾದರೂ ಒಂದು ನಾದಮೇಳವಾದ ಹೊರತು ಅಪೂರ್ಣ; ಇನ್ನೊಂದು ಶಬ್ದಾರ್ಥಗತಿ ಯಾಗಿಯೇ ಪೂರ್ಣಗೊಳ್ಳಬೇಕು.

* ಎಲ್ಲ ಕಲೆಗಳೂ ಶುದ್ಧ ಸಂಗೀತದ (ಉದಾ. ರಾಗಾಲಾಪನೆಯ) ಮಟ್ಟಕ್ಕೆ ಏರಿ ಸಿದ್ಧಿಪಡೆಯಲು ಬಯಸುತ್ತವೆ ಎನ್ನುವುದುಂಟು.

ಕೃತಿ ಕಾವ್ಯ ಎನ್ನುವುದು ಕವಿಯು ಕವಿತನದ ಅಗತ್ಯವನ್ನು ಹೇಗೆ ಒತ್ತಿ ಹೇಳುವುದೋ ಹಾಗೆಯೆ ಎಲ್ಲ ಕಲೆಯಲ್ಲಿಯೂ ಕೃತಿಕಾರನು ಕಲೆಗಾರನಾಗಿರುವುದು ಮೊದಲ ಅಗತ್ಯ. ತನ್ನ ಮನಸ್ಸಿನಂತೆ ಉಪಕರಣಗಳನ್ನು ಹೊಂದಿಸಿಕೊಳ್ಳಬೇಕಾದ ನಯದ ಅಥವಾ ವ್ಯಂಜನೆಯ ಕೆಲಸ ಆತನಿಗೆ ಸೇರಿದ್ದು. ಈ ಸಂಬಂಧದಲ್ಲಿ ಕಾರ್ಯದ ಕುಶಲತೆ, ನಾಜೂಕು, ನುಣುಪು, ಸಮ್ಮಿಶ್ರಣ ಅಥವಾ ವಿನ್ಯಾಸ ಚಾತುರ್ಯ, ಕಲಾವಸ್ತುವನ್ನು ಸ್ಥಿರವಾಗಿ ಉಳಿಸಲು ಕೈಕೊಳ್ಳಬೇಕಾದ ಹದಗಳು ಮುಖ್ಯವಾಗುತ್ತವೆ. ಇದೆಲ್ಲ ಕಸಬುದಾರಿಕೆಗೆ ಸಂಬಂಧಿಸಿದ್ದು: ಒಂದು ಕಾರ್ಯಾಗಮ, ತಂತ್ರಲೋಕ, ವಿಧಾನಪ್ರಪಂಚ. ಯಾವ ಕಲೆಗಾರನಿಗೆ ವಸ್ತುಪರಿಜ್ಞಾನವೂ ಸಾಧನದ ಪರಿಚಯವೂ ನಿಪುಣತೆ ಕೈಚಳಕಗಳೂ ಮೇಲೊ ಅಂಥವನ ಕೃತಿ ಮೇಲಾಗಬಲ್ಲದೆಂಬುದನ್ನು ಹೇಳುವ ಸಂಗತಿ .ಇವುಗಳದು ಉಪಕರಣಯೋಗ;— ಕಲೆಯ ಸತ್ವಕ್ಕೆ ಮುಖ್ಯವಾಗಿ ಸಂಬಂಧಿಸಿದ್ದಲ್ಲ. ಸಂಪ್ರದಾಯವಾಗಿ ಬಂದ ಸಮಯಗಳೂ ಸಂಕೇತಗಳೂ ರೀತಿನಿಯಮಗಳೂ ಹಾಗೆಯೇ. ಅವನ್ನು ಕಲಿತಿದ್ದು ಎಂದಿನಂತೆ, ಎಲ್ಲರಂತೆ ಚೆನ್ನಾಗಿಯೊ ಮೇಲಾಗಿಯೊ ಬೀಳಾಗಿಯೊ ಕೆಲಸ ತೂಗಿಸುವ ಶಕ್ತಿ ಕೂಡ ಅಂತೆಯೇ. ಇಲ್ಲಿ ಕೇವಲ ನೆನಪು, ಅಭ್ಯಾಸ ಕೈಪಳಕೆ ಮುಂದಾಗುವುವು. ಕಲೆಗಾರನಿಗೆ ಇವೆಲ್ಲ ಹೊರಗಿನ ನೆರವು. ಇದು ಕುಶಲಕರ್ಮಪ್ರಪಂಚ. ಹಲವೇಳೆ ಬರಿಯ ಕಲಿತ ಪಾಠ ಒಪ್ಪಿಸುವ, ʻಅನುಕರಣದ ಅಥವಾ ಅನುವಾದದ ಕೆಲಸ. ಜೊತೆಗೆ ಕಲೆಗಾರನು ಪಡೆದುಕೊಂಡಿರುವ ವಿದ್ಯೆ, ವಿವೇಚನೆ, ಸಂಸ್ಕಾರ, ಲೋಕಾನುಭವಗಳು ಮನಸ್ಸಿನಲ್ಲಿ ಇದ್ದುಕೊಂಡು ಕೈನೆರವಾಗಬಲ್ಲ ಸಾಮಗ್ರಿಮಾತ್ರ ಆಗುವುವು. ಎಲ್ಲಿ ಅನುಭವ ಮತ್ತು ದರ್ಶನಭಾಗಕ್ಕಿಂತ ಕರ್ಮಕುಶಲತೆ ಹೆಚ್ಚೋ ಅಲ್ಲಿ ಕಲೆಯ ದರ್ಜೆ ಎರಡನೆಯದು. ಇಲ್ಲಿ ಕಲೆಯನ್ನು ಭಾವಾವೇಶದಿಂದ ಕೂಡಿದ ಅನುಭವದ ಅಥವಾ ದರ್ಶನದ ಮೋಹಕರೂಪಣ, ಅಭಿವ್ಯಂಜನೆ ಎಂದು ಎಣಿಸಲಾಗಿದೆ.*

* ಒಂದು ಕಡೆ ಕಲೆಗೂ ಇನ್ನೊಂದುಕಡೆ ಜಗತ್ತಿನ ಕ್ಷೇಮಕ್ಕೂ ಸಮಾಜಕ್ಕೂ ಧರ್ಮಕ್ಕೂ ಯಾವ ಬಗೆಯ ಸಂಬಂಧವಿರಬೇಕು? ಕಲೆಯ ಕಾರ್ಯ ಹೇಗಿದ್ದರೆ ಮಾತ್ರ ಆದೇಯ? ಮುಂತಾದ್ದನ್ನು ಮುಂದುಮಾಡುತ್ತಿಲ್ಲ. ಆ ಎಣಿಕೆ ಬೇರೆ. ಅವಕ್ಕೆ ಸಂಬಂಧಿಸಿದಂತೆ ವಿರಸಗಳುಂಟಾದಾಗ ಕೇವಲ ಕಲಾ ದೃಷ್ಟಿಯಿಂದಲ್ಲ ಅದನ್ನು ವಿಮರ್ಶೆ ಮಾಡಬೇಕಾದುದು.

ಕಲೆಯ ಸ್ವರೂಪವೇನು? ಗುರಿಯೇನು? ಎಂಬವು ಎರಡು ಪ್ರಶ್ನೆಗಳಂತೆ ಕಂಡರೂ ಮೂಲತಃ ಒಂದನ್ನರಿತರೆ ಇನ್ನೊಂದನ್ನು ಅರಿತಂತೆಯೇ. ಆದರೂ ಜನ ಒಂದನ್ನು ಲೆಕ್ಕಿಸದೆ ಇನ್ನೊಂದಕ್ಕೆ ಹಟ ಹಿಡಿಯುವುದುಂಟು. ಕಲೆಯ ಗುರಿ ಇದು ಎಂದು ಒಬ್ಬರೆಂದರೆ ಇನ್ನೊಬ್ಬರು ಕಲೆ ಅದನ್ನು ಮಾಡಬೇಕು ಮತ್ತೊಂದನ್ನು ಬಿಡಬೇಕು ಎಂದು ವಿಧಿಸಬರುವರು. ಆ ವಿಧಿಗಳೋ — ನಾನಾ ಬಗೆಯವು. ಕಲಾಸ್ವರೂಪವನ್ನು ಕುರಿತ ಮಾತುಗಳಲ್ಲಿಯೂ ಎಷ್ಟೋ ಮತ, ವಾದ, ವಿಧಿ, ಶಾಸನಗಳು.

ಕಲೆ ಸುಂದರವಾಗಿರಬೇಕು; ಜೀವನದ ಪ್ರಮಾಣಗಳನ್ನು, ಉಳ್ಳಂತೆ, ಸತ್ಯವಾದ ಅಂಗರಚನೆಯನ್ನೇ ಕಾಣಿಸಬೇಕು; ಬದುಕಿನ ಪ್ರತಿಬಿಂಬದಂತಿರಬೇಕು; ಸಂತೋಷವನ್ನೂ ವಿನೋದವನ್ನೂ ಉಂಟುಮಾಡಬೇಕು; ದಿನಚರಿಯಿಂದ ಮನಸ್ಸನ್ನು ತಿರುಗಿಸಿ ಮರಸಬೇಕು, ಹಗುರಗೊಳಿಸಬೇಕು; ತಿಳಿವನ್ನೂ ಧರ್ಮಬುದ್ಧಿಯನ್ನೂ ಹುಟ್ಟಿಸಿ ಬಲಿಸಬೇಕು; ಬದುಕಿನ ವಿಮರ್ಶೆಯಾಗಬೇಕು; ದೇಶಭಕ್ತಿ ಹುಟ್ಟಿಸಬೇಕು; ಜನರಿಂದ ಕೆಲಸ ಮಾಡಿಸುವಂಥದಾಗಬೇಕು; ಮನಸ್ಸಿನ ಗಾಯಗಳನ್ನು ಮಾಯಿಸಿ ಸಂತಯಿಸಬೇಕು, ಅಶಾಂತಿಗೆಳೆಯಬಾರದು; ಹಿಂದಿನ, ದೂರದ, ಕನಸಿನ ಪ್ರಪಂಚಗಳನ್ನು ಬಿಟ್ಟು ಇಂದಿನ ವಸ್ತುಜೀನಕ್ಕೆ ನೇರವಾಗಿ ಹೊಂದಬೇಕು; ಮಾನುಷವನ್ನು ಅತಿಮಾನುಷವಾಗಿಯೂ, ಅತಿಮಾನುಷವನ್ನು ಮಾನುಷದಂತೆಯೂ ಕಾಣಿಸಬೇಕು; ಪರಮಾರ್ಥಸಾಧನೆಗೆ ನೆರವಾಗಬೇಕು; ರಾಜಕೀಯ, ಸಾಮಾಜಿಕ, ಆರ್ಥಿಕ ಸಮತಾವಾದಗಳ ವಾಹಕವಾಗಬೇಕು, — ಹೀಗೇ ನೂರಾರು ಬಯಕೆ ಜನಕ್ಕೆ. 'ಕಲೆ' ಈ ವರೆಗೆ ಈ ಎಲ್ಲ ಬಗೆಯ ಕೆಲಸಕ್ಕೂ ನೆರವಾಗಿದೆ. ಸಮಾಜದ ನಡುವೆ ಬದುಕಬೇಕಾಗಿರುವ ಕಲೆಗಾರನಿಗೆ ಇದು ಅನಿವಾರ್ಯ; ಸಹಜ. ಅವನ ಸ್ಫೂರ್ತಿ ಉದ್ದೇಶಗಳಲ್ಲಿ ಆ ಈ ದೃಷ್ಟಿರೀತಿ ಸೇರಿಕೊಳ್ಳುವುವು; ಏಕೆಂದರೆ ಅವು ಆತನ ಮನುಷ್ಯತ್ವಕ್ಕೇ ಅಂಟಿಕೊಂಡವು. ಕಲೆಗಾರನ ರೀತಿಯನ್ನು ಹೇಳುವಾಗಲೂ ನಾಲ್ಕಾರು ಬಗೆಗಳುಂಟು. ಮೃದುಮಾರ್ಗ, ಕಟುಮಾರ್ಗ, 'ನವೋನವ' ಕಲ್ಪನಾಮಾರ್ಗ, ಧ್ಯೇಯಮಾರ್ಗ, ಸಂಕೇತಮಾರ್ಗ, ವ್ಯಂಗ್ಯ ಅಥವಾ ವಿಡಂಬನಮಾರ್ಗ, ಕ್ರಾಂತಿಮಾರ್ಗ ಮುಂತಾದ ಮಾತುಗಳನ್ನು ಉಪಯೋಗಿಸುವುದುಂಟು. ಇದರ ಜೊತೆಗೆ, ಇಂಥ ವಿಷಯ ಮಾತ್ರ ಕಲೆಗೆ ಒಪ್ಪು;

ಇನ್ನು ಕೆಲವನ್ನು—ಚೆಲುವಲ್ಲದ್ದನ್ನು, ಸೊಬಗಲ್ಲದ್ದನ್ನು—ಮುಟ್ಟಲೇಕೂಡದು; ಇಂತಹವು ಹೊಂದುವುದೇ ಇಲ್ಲ; ಇಂಥ ಮಾತು, ರಾಗ, ಬಣ್ಣ ಈ ಕೆಲಸಕ್ಕೆ ಮಾತ್ರ ಸರಿ, ಮತ್ತೊಂದಕ್ಕೆ ಸಲ್ಲದು ಎಂಬ ಮಾತು ಬೇರೆ. ಅಳತೆ, ಪ್ರಮಾಣ ಹೀಗಿದ್ದರೆಯೇ ಗುಣ, ಚೆಲುವು; ಇದು ಶುದ್ಧವಲ್ಲ, ಮಿಶ್ರ, ಸಂಕೀರ್ಣ ಆದುದರಿಂದ ಚೆನ್ನವಲ್ಲ, ಮೇಲಲ್ಲ; ಇದು ಸಂಪ್ರದಾಯವಲ್ಲ, ವಿದೇಶೀಯ, ಅತಿನವೀನ—ಆದುದರಿಂದ ಪ್ರಯೋಜನವಿಲ್ಲ ಎಂಬ ತರ್ಕ ಬೇರೆ.

ಮೇಲಿನವು ಹೊರಗಿನವರ ವಾದಗಳಾದರೆ ಕಲೆಗಾರರೇ ನುಡಿಯುವರು: ಕಲೆ 'ನಿಯತಿ ಕೃತ ನಿಯಮ ರಹಿತ'ವಾದ್ದು; 'ಅನನ್ಯ ಪರತಂತ್ರ'ವಾದ್ದು; ಕಲೆಗೆ ಬೇರೆ ಸಿದ್ಧಿ ಬೇಕಾಗಿಲ್ಲ; ಕಲೆಯ ಉತ್ಪತ್ತಿ, ರೀತಿ ಕಲೆಗಾಗಿಯೇ; ಅದಕ್ಕೆ ಅದೇ ಪ್ರಮಾಣ; ಹೊರಗಿನ ಯಾವುದಕ್ಕೂ ಅದು ಜೀತಮಾಡಬೇಕಾಗಿಲ್ಲ; ಪರಿಸ್ಥಿತಿಗೆ ಕೂಡ ಕಲೆ ಶರಣಲ್ಲ; ಪ್ರತ್ಯಕ್ಷ ಪ್ರಯೋಜನವನ್ನೂ ಅದು ಎಣಿಸಬೇಕಾದ್ದಿಲ್ಲ. ಶುದ್ಧ ವಿಜ್ಞಾನವಿರಬಹುದಂತೆ, ಶುದ್ಧಕಲೆ ಏಕೆ ಕೂಡದು?—ಹೀಗೆ ಈ ಕಡೆಯ ವಾದ. ಈ ಎಲ್ಲ ವಾದಗಳಲ್ಲಿಯೂ ಸತ್ಯಾಂಶವಿದೆ. ಅತಿ ಮಾಡಿದರೆ ಮಾತ್ರ ಎಲ್ಲ ಕಡೆಯೂ ಹದಕೆಡುವುದು. ಆ ಒಂದೊಂದೂ ಕಲೆಯ ಒಂದೊಂದು ಲಕ್ಷಣವನ್ನೂ ಮುಖವನ್ನೂ ಮಾತ್ರ ಕಾಣಿಸುವುದು; ಯಾವುದೂ ಏಕೈಕವಾದ ಜೀವ ಸೂತ್ರವಲ್ಲ ಕಲೆಗೆ. ಎಲ್ಲವೂ (ಇನ್ನುಮುಂದೆ ಹುಟ್ಟಲಿರುವವೂ ಸೇರಿ) ಕಲೆಯ ವ್ಯಾಪ್ತಿಯನ್ನೂ ಕಾರ್ಯರಂಗವನ್ನೂ ಸೂಚಿಸಬಲ್ಲವಾಗಿರುವಾಗ ಯಾವ ಒಂದಕ್ಕೇ ಆಗಲಿ ಸರ್ವಪ್ರಾಧಾನ್ಯ ಕೊಟ್ಟು ಇಲ್ಲಿಗೆ ಕಲೆ ಮುಗಿಯಿತೆನ್ನುವುದು ಸರಿಯಾಗದು. ಸರಸ್ವತಿಯ ಕಳೆಕಾಂತಿಗಳಿಗೆ ಮಿತಿಯೆಲ್ಲಿ?

ಕಲಾಕೃತಿ ಹುಟ್ಟುವ ಸಂದರ್ಭವನ್ನು ತಿಳಿದರೆ ಈ ವಾದಗಳಲ್ಲಿ ಬಹುಶಃ ಯಾವುದರ ಹಸರ ಎಷ್ಟು ಎಂಬುದು ತಿಳಿದೀತು.* ಆವೇಶ ಸಾಮಗ್ರಿ; ಕಲೆಗಾರ, ಆತನ ಮನಸ್ಸು, ಸಾಧನಗಳು; ಕಲಾಕೃತಿ, ಅದರ ಸ್ವರೂಪ, ಪ್ರಯೋಜನ, ಪರಿಣಾಮಗಳು; ಕಲಾವಿಮರ್ಶೆ-ಎಂದಾದರೂ ವಿಷಯದ ನೆಲಸು ಇದೆ. ಹೀಗೆ, ಒಂದುಭಾಗ ಸೃಷ್ಟಿಮಾಡುವ ಕಲೆಗಾರನದು; ಇನ್ನೊಂದು ನಿರ್ಮಾಣವಾಗಿ ಪ್ರಪಂಚದಲ್ಲಿ ನಿಲ್ಲುವ ಕೃತಿಯದು; ಮೂರನೆಯದು ಅವರ

---

* ಇಲ್ಲಿ ಈ ದೃಷ್ಟಿಯಿಂದಲೇ ವಿಷಯವನ್ನು ಪರಿಶೀಲಿಸುತ್ತಿರುವುದು.

ಸ್ವೀಕಾರ, ವಿಮರ್ಶೆ. ಜೊತೆಗೆ ಇನ್ನೊಂದು ಸಂಗತಿ: ಹುಟ್ಟಿಬರುವ ಕಲಾಕೃತಿ ಹೊಮ್ಮುವ ಲಕ್ಷಣಗಳು ಮಾತ್ರ ಅದರ ಸ್ವರೂಪವನ್ನು ತಿಳಿಸುವುವು. ಉಳಿದ ವಿಮರ್ಶೆ ಅವರ ಇವರ ಅಭಿಪ್ರಾಯಪ್ರಪಂಚ; ಅವರು ಇವರು ಮಾಡುವ ಚರ್ಚೆ, ಸಿದ್ಧಾಂತ; ಈ ದೃಷ್ಟಿಯಿಂದ ಆ ದೃಷ್ಟಿಯಿಂದ ನಿರೀಕ್ಷಿಸುವ, ಪಡೆಯುವ, ಪಡೆಯದ ಫಲಪರಿಣಾಮಗಳು; ಇಲ್ಲವೇ, ಕೃತಿಗಳ ಹೃದಯದಲ್ಲಿ ಅಡಗಿ ಅದನ್ನು ನಡಸಿ ಕಾರ್ಯಮಾಡುವ ರೂಪಣಶಕ್ತಿಯನ್ನು ಕುರಿತು ಸಾಮಾನ್ಯತತ್ತ್ವವನ್ನು ಅನುಮಾನಿಸುವ, ಗ್ರಹಿಸಿ ಕೂಡಿಸುವ ಪ್ರಯತ್ನಗಳು. ಕಲೆಯೆಂಬ ಪ್ರತ್ಯೇಕವಾದ ಯಾವುದೂ ವಸ್ತುವಿಲ್ಲ—ವಿವರಿಸುವುದಕೆ, ವಿಭಜನೆ ಮಾಡುವುದಕ್ಕೆ, ಪರೀಕ್ಷಿಸುವುದಕ್ಕೆ. ಈ ವರೆಗೆ ಕಲೆಗಾರರು ನಿರ್ಮಾಣಮಾಡಿರುವ, ಈಗ ಮಾಡುತ್ತಿರುವ ಕೃತಿಗಳು; ಅವುಗಳಲ್ಲಿ ಅಡಗಿ ರೂಪುಗೊಂಡು ಇರುವ ಭಾವಭೂಮಿಕೆ; ಪ್ರಬಲ ಜೀವಶಕ್ತಿಯ ವಿಲಾಸ. ಕಲಾಶಾಸ್ತ್ರವೆಂದೊ ಕಲೆಯ ತತ್ತ್ವವೆಂದೊ ಮಾತನಾಡುವಾಗ ಕಲೆಗಾರರೂ ಇತರರೂ ಆಕೃತಿಯ ಮತ್ತು ರೂಪಣದ (Form and Representation) ಸಂಬಂಧದಲ್ಲಿ ಸಾಮಾನ್ಯವಾಗಿ ಆಡುವ ಮಾತು, ಮಾಡುವ ಸಿದ್ಧಾಂತ, ನಟ್ಟು ಬೆಳಸುವ ಶಾಸ್ತ್ರ—ಎಂದರಿಯಬೇಕು.

ಕಲೆಗೂ ಸಾಧನಸಾಮಗ್ರಿಗೂ ಇರುವುದು ಹೊರಸಂಬಂಧ ಮಾತ್ರ. ಆಗಮ ಭಾಗಕ್ಕೆ ಹೆಚ್ಚು ಬೆಲೆಯಾಗಲಿ, ಗೌರವವಾಗಲಿ, ಕಾರ್ಯವಾಗಲಿ ಇಲ್ಲ—ಎನ್ನಲಾಗದು. ಮನಸ್ಸಿನಲ್ಲಿ ತೋರಿದುದನ್ನು ಅಂತೆಯೇ ರೂಪಿಸುವ ಕೈಕೆಲಸ, ಕುಶಲತೆ, ಶಕ್ತಿ ಇಲ್ಲವಾದರೆ ಕಲೆಯ ಕಾಂತಿ ಕುಂದುವುದು. ಕಂಡೀತು ತಾನೇ ಏನು? ಕೌಶಲ ಮೇಲಾದಂತೆಲ್ಲ ರೂಪಣಶಕ್ತಿ ಮೇಲಾಗುವುವು. ತಕ್ಕ ವ್ಯಂಜಕ ಶಕ್ತಿಯೂ ಕೈಹದವೂ ಇಲ್ಲದಿದ್ದರೆ ದರ್ಶನಸಂಪತ್ತೂ ರೂಪ್ಯದ ಒತ್ತಡವೂ (the Vision and the Impulse to Form) ಎಂಥನೇ ಇದ್ದರೂ ರೂಪಣ ಊನವಾಗುವುದು. ಕಾರ್ಯಕುಶಲತೆ ಅತ್ಯುತ್ತಮವಾದರೆ ಕೂಡ ಕೃತಿ ಸಂಪೂರ್ಣ ಕಲಾಪದವಿಗೆ ಏರದೆ ಇರಬಹುದು,† ಕೇವಲ ಕುಶಲ ಕರ್ಮಕ್ಕೆ ಮೀರಿ, ಕೈಗೆ ಸಿಕ್ಕದ, ಅನಂತ

† ಲಕ್ಷಣಸೂತ್ರಗಳನ್ನು ಮುಂದಿಟ್ಟುಕೊಂಡು ಕಾವ್ಯ ಬರೆದಾಗ ಕೃತಿ ಎಷ್ಟು ಬರಹಾಗುವುದೆಂಬುದನ್ನು ಯಾರರಿಯರು? ಮಾತ್ರೆ ಗಣ ಸರಿಯಾಗಿಟ್ಟು ಪಂಕ್ತಿ ಪದ್ಯ ಕಟ್ಟಿದ ಮಾತ್ರಕ್ಕೆ ವೃತ್ತಗಳಿಗೆ ಜೀವ ಬಂದೀತೆ? ರಸಪುಷ್ಟಿ ದೊರೆತೀತೆ?

ವಾದ ಸಂಕೇತ-ನುಡಿತ-ಇರುವ ಯಾವುದೋ ಜೀವಶಕ್ತಿ ಇಲ್ಲವಾದರೆ ಕೇವಲ ನಿಪುಣತೆಯಲ್ಲಿ, ಮಾಟದ ಚೆನ್ನದಲ್ಲಿ ಕೃತಿ ಕೊನೆಗೊಳ್ಳಬೇಕಾದೀತು. ಆದರೂ ಕರ್ಮಕೌಶಲ ಎಲ್ಲಿಗೆ ಮುಗಿಯಿತು ಕಲೆಯ ಜೀವಾಳ ಎಲ್ಲಿ ಮೊದಲಾಯಿತು ಎಂದು ಹೇಳುವುದು ಸುಲಭವಲ್ಲ. ಸಾಮಗ್ರಿಗೂ ಕಲೆಗೂ ಇರುವ ಸಂಬಂಧ, ಮೈ ಉಸಿರುಗಳ ಸಂಬಂಧ, ವಸ್ತುರೂಪ, ಶಬ್ದ ಅರ್ಥ, ಹೂ ಪರಿಮಳಗಳ ಸಂಬಂಧ; ಅವನ್ನು ಬೇರೆ ಮಾಡಲು ಶಕ್ಯವಿಲ್ಲ. ಕಂಡಾಗ ಮತ್ತು ಸತ್ಯದರ್ಶನವಾದಾಗ ಇದರಲ್ಲಿ ಈ ಈ ಭಾಗ ಇದು ಎಂದು ವಿವೇಚಿಸಿ ತೋರಿಸಬಹುದು. ಲಕ್ಷಣಾಂಶಗಳನ್ನು ಸುಮ್ಮನೆ ಒಟ್ಟು ಕೂಡಿಸಿಬಿಟ್ಟರೂ ಕಲೆ ಆಗದು. ಕಲಾಕೃತಿ ಒಂದು ಜೀವಂತ ಅವಯವಿ. ಆ ಜೀವಗುಣ ಅಂಗಗಳಲ್ಲೆಲ್ಲ ಹರಿದು ಸಂಚರಿಸುತ್ತ ಒಂದು ಹದಕ್ಕೆ ಎಲ್ಲವನ್ನೂ ನಿಯಾಮಿಸುತ್ತ, ಭಾವಾವೇಗದಿಂದ ಕಲ್ಪನೆಯ ವಿಷಯವನ್ನು ನಡಸುತ್ತ, ಪದಾರ್ಥವನ್ನೊ ಧ್ವನಿಯನ್ನೊ ನಡಗೆಯನ್ನೊ ಕಟ್ಟುತ್ತ, ದೀಪ್ತರಸವುಳ್ಳದ್ದನ್ನಾಗಿ ಮಾಡುತ್ತದೆ. ಈ ಕಾಂತಿಯಿಲ್ಲದ ಅಂಗರಚನೆ ಜಡ. ಒಂದು ವಿಶೇಷ ಬಗೆಯ ರಾಗಸಂಸ್ಕಾರ, ಕಲ್ಪನಾಶಕ್ತಿ ಇರುವ; ಸಂತತವಾಗಿ ಜಾಗ್ರತವಾದ; ಯಾವುದೋ ಒಂದು ಸಂದರ್ಭದಲ್ಲಿ ಕೆರಳಿದ ಬಗೆಯಲ್ಲಿ ಆವೇಗವಾಗಿ ಹುಟ್ಟಿ, ಒಂದು ವಿಶೇಷ ರೂಪಣವಾಗಿ, ಒರದಿಯಾಗಿ ಹೊಮ್ಮಿ ಅನುಭವದಲ್ಲಿರುವುದರಲ್ಲಿ ತನಗೆ ಬೇಕಾದ್ದನ್ನು ಆರಿಸಿಕೊಳ್ಳುತ್ತ ಬೇಡದ್ದನ್ನು ಬಿಡುತ್ತ ಒಂದು ಧಾತುವಿಗೆ ಎಲ್ಲವನ್ನೂ ಹೊಂದಿಸಿ ತೋರಿಸುತ್ತ ಇನ್ನೊಬ್ಬರ ಮನಸ್ಸಿನಮೇಲೆ ಅಖಂಡವಾಗಿ ಬಂದು ಕವಿದು ಆಧಿಪತ್ಯ ಮಾಡಬಲ್ಲ ಪರಿಣಾಮಕರ ಶಕ್ತಿ ಅದಕ್ಕೆ ಇರುತ್ತದೆ. ರೂಪಣಕ್ಕಿಂತ ಭಾವಾವೇಗ ಹೆಚ್ಚಾದರೆ ಕೃತಿಯ ಏಕತೆ ಕೆಡುವುದು; ರೂಪಣ ಭಾಗ ಮೀರಿದರೆ ರಸದ ಮಿಡಿತ ಕಡಮೆಯಾಗುವುದು.

ಒಂದು ವಿಶೇಷ ಆಕಾರ, ರೀತಿ, ಗತಿಗಳ ವ್ಯಂಜನೆ ಎಂದಿತು. ಶಾಸ್ತ್ರದಲ್ಲಿಯೂ ವಿಜ್ಞಾನದಲ್ಲಿಯೂ ಹಾಗಲ್ಲ. ಅಲ್ಲಿ ವಿಷಯ ಮುಖ್ಯ. ಅದರ ಪ್ರತಿಪಾದನ, ಪರಿಷ್ಕರಣ, ಆಳತೆ, ಅನ್ವೇಷಣ, ದರ್ಶನ ಎಲ್ಲ ಬುದ್ಧಿಗೆ ಒಳಪಟ್ಟವು; ತರ್ಕಬದ್ಧವಾದವು; ತಿಳಿವಳಿಕೆಯನ್ನು ತಿದ್ದಿ ವಿಶದಪಡಿಸಿ

---

ಹಾಗೆಯೇ ಪರಿಶುದ್ಧ ಆವೇಶವುಳ್ಳ ಭಾವಕಲ್ಪನೆಯೆಂದು ರೂಪಣ, ಬಂಧ ಸರಿಯಲ್ಲವಾದರೆ ಕೃತಿ ಅತಂತ್ರವೂ ಅಪೂರ್ಣವೂ ಆಗುವುದು.

ಎಲ್ಲರಿಗೂ ಎಲ್ಲೆಲ್ಲಿಯೂ ಎಲ್ಲ ಕಾಲಕ್ಕೂ ಅಸಂದಿಗ್ಧವಾದ ಒಂದೇ ಸ್ಪಷ್ಟಾರ್ಥವನ್ನು ಕೊಡಬೇಕು ಶಾಸ್ತ್ರ. ಹೀಗೆ ಸ್ಪಷ್ಟತೆ, ಖಚಿತತೆ, ನಿಷ್ಕರ್ಷೆ, ಸುಸ್ಥಾಪನೆ, ಸರ್ವಸಾಧಾರಣ್ಯ, ಇವು ಶಾಸ್ತ್ರತತ್ವದ ಲಕ್ಷಣಗಳು. ಕಲೆಯಲ್ಲಿ ಹಾಗಲ್ಲ. ಇಲ್ಲಿ ವಿಷಯವನ್ನು ಕಾಣುವ ರೀತಿಯೇ ಬೇರೆ; ಇಚ್ಛಾ, ಯುಕ್ತಿ, ಕ್ರಿಯಾ ಪ್ರಪಂಚಗಳಿಗೆ ಸಂಬಂಧಿಸಿದಂತೆ ಮನಸ್ಸು ಹೇಗೆ ಬೇರೆ ಬೇರೆಯಾಗಿ ಕೆಲಸಮಾಡುವುದೊ ಇಲ್ಲಿಯೂ ಹಾಗೆಯೇ— ಬೇರೊಂದು ಸ್ವತಂತ್ರ ರೀತಿಯಲ್ಲಿ ಕೆಲಸ ಮಾಡುವುದು. ಒಬ್ಬೊಬ್ಬ ಕಲೆಗಾರನಿಗೂ, ಒಂದೊಂದು ಸಮಯದಲ್ಲಿಯೂ ಬೇರೆ ಬೇರೆ. ನೋಡುವ ನೋಟ ಬೇರೆ; ರುಚಿ ಬೇರೆ. ಅವನವನ ಜೀವನದರ್ಶನದಂತೆ, ರಾಗ ಸಂಸ್ಕಾರದಂತೆ, ಕಲ್ಪನಾವಿಲಾಸದಂತೆ, ಕೃತಿನಿರ್ಮಾಣ ಸಮಯದಲ್ಲಿ ಅವನ ಮನಸ್ಸು ಸತ್ಯವನ್ನು ಹಿಡಿದಂತೆ ರೂಪಣ ನಡೆಯುತ್ತದೆ. ಒಂದು ವ್ಯಕ್ತಿಯ ಸ್ವಂತ ಅಂತಃಕರಣ ಪ್ರಪಂಚ ಹೇಗೆ ಕಾಣುವುದು ಎಂಬುದನ್ನು ಜನಕ್ಕೆ ತೋರಿಸಿಕೊಡುವ ರೀತಿ ಇಲ್ಲಿನದು. ಆತನ ಮನೋಧರ್ಮ ಅಲ್ಲಿ ಮುದ್ರೆ ಒತ್ತಿ ಇದು ಕೇವಲ ಅವನ ದರ್ಶನ, ಆದರೆ ಮನುಷ್ಯರಾದವರೆಲ್ಲ ಒಪ್ಪಬಲ್ಲ ಸಂಪನ್ನವಾದ ಹೊಸನೋಟವೊಂದು ಅದರಲ್ಲಿದೆ ಎಂಬುದನ್ನು ತೋರಿಸುತ್ತದೆ. ಆದ್ದರಿಂದ ಇಲ್ಲಿ ಒಂದು ದಾರಿಯಲ್ಲ. ಕೋಟಿ ದಾರಿ ಶಕ್ಯ, ಸಹಜ, ನ್ಯಾಯ. ಪ್ರತಿಯೊಂದನ್ನೂ ಅದರದರ ಪ್ರಕರಣದಲ್ಲಿ, ಪ್ರಮಾಣದಲ್ಲಿ ಮಾತ್ರ ನೋಡಿ ಅಳೆಯಬೇಕು, ಸವಿಯಬೇಕು. ಇದು ಬುದ್ಧಿಯ–ಜ್ಞಾನದ–ಮಾರ್ಗವಲ್ಲ. ಜನದ ರುಚಿಗೂ ಭೋಗಕ್ಕೂ ಸಿಕ್ಕುವ, ಹುಟ್ಟುವ ಸೃಷ್ಟಿ. ವಸ್ತು ದೃಷ್ಟಿಯಲ್ಲ, ಕಲ್ಪನೆಯ ದೃಷ್ಟಿ; ಸಮಸ್ತರ ದೃಷ್ಟಿಯಲ್ಲ, ವ್ಯಕ್ತಿಯದು. ಒಂದೊಂದು ಮನಸ್ಸಿಗೂ ಒಂದೊಂದು ನಯ, ಯೋಗ್ಯತೆ, ಕಲ್ಯಾಣ ಬುದ್ಧಿ ಇರುವುದರಿಂದ ಅನುಭವ ರುಚಿ ಭೇದಗಳು ಬಂದೇ ಬರುವುವು. ಆದ್ದರಿಂದ, ಇಲ್ಲಿ, ಶಾಸ್ತ್ರತತ್ವಗಳಲ್ಲಿನಂತೆ ನಿಯತವಾದ ಒಂದು ಪ್ರಪಂಚವಲ್ಲ ಸತ್ಯ,— ಲೆಕ್ಕವಿಲ್ಲದಷ್ಟು ಪ್ರಪಂಚಗಳು. ಅಲ್ಲದೆ, ಕಲೆಯನ್ನು ಮೆಚ್ಚಿದರೆ ಉಂಟು; ಇಲ್ಲವಾದರೆ ಇಲ್ಲ.* ಅಳತೆ ತೂಕ, ಬಣ್ಣ, ಎಣಿಕೆ, ನುಡಿ ಹಿಡಿಗಳ ನಿಶ್ಚಯ, ಸಮಂಜಸತೆ ಇರುವ ಶಾಸ್ತ್ರ ಪ್ರಪಂಚದಲ್ಲಿ ಪ್ರಮಾಣಗಳನ್ನೂ ಯುಕ್ತಿಯನ್ನೂ ಒಪ್ಪಿದವರು ತೀರ್ಮಾನ

* ಕಲೆಯೇ ಸೇರದೆ ಕಲೆಬಗೆ ಮುಚ್ಚಿಹೋದ ಮಹನೀಯರುಂಟು. ಬೇರೆ ಸಕಲಾಂಶಗಳಲ್ಲಿಯೂ ಉತ್ತಮರಾದರೂ ಚಿತ್ರ ಸಂಗೀತಾದಿಗಳು ಅವರಿಗೆ ವಿಷ; ಹಿತಶತ್ರು.

ನನ್ನು ಒಪ್ಪಲೇಬೇಕಾದ ಕಡ್ಡಾಯವಿದೆ. ಇಲ್ಲಿ ಯಾವ ಕಡ್ಡಾಯವೂ ಸಲ್ಲದು. ಈ ಸಂಗತಿ ಕಲೆಯ ಬಲವೂ ಹೌದು. ದೌರ್ಬಲ್ಯವೂ ಹೌದು. ಇಲ್ಲಿನ ಬೆಸುಗೆ ಭಾವದ ಬೆಸುಗೆ. ಮಿಡಿಯುತ್ತಿರುವ ಯಾವದೋ ಜೀವ, ಒಂದು ಸ್ಥಿತಿಯ ಕಿರಿದಾದ ಅಥವಾ ವಿಸ್ತಾರವಾದ ದರ್ಶನ-ರಚನೆ-ತನ್ನ ಸಂಸ್ಕಾರಕ್ಕೆ ತಕ್ಕಂತೆ ಜಗತ್ತನ್ನು ನೋಡುತ್ತ, ಸೂಕ್ಷ್ಮವೇದನೆ ಮತ್ತು ಸ್ಫೂರ್ತಿಯ ಕೆರಳಿಕೆಗಳುಳ್ಳ ತನ್ನ ಭಾವಾವೇಶವನ್ನು ತೆರೆದು ತೋರಿಸುತ್ತ, ಸತ್ಯವೆಂಬ ಪ್ರಪಂಚದ ಆಳದಲ್ಲಿ ಅಡಗಿರುವದನ್ನೆಲ್ಲ ಚಿತ್ರವಿಚಿತ್ರವಾಗಿ ರೂಪಿಸುತ್ತ ನಿರ್ಮಿಸುತ್ತಿರುವ, ಅವುಗಳೊಡನಾಡುತ್ತಿರುವ, ಅವುಗಳ ಕಡೆಗೆ ಜನದ ಮನಸ್ಸನ್ನು ಸೆಳೆಯುತ್ತಿರುವ, ಆತ್ಮನಿವೇದನಕ್ಕಾಗಿ ಹಾತೊರೆಯುತ್ತಿರುವ ಒಂದು ಭಾವನಾ ಶಕ್ತಿ ಅದು. ಅದರ ಕಾರ್ಯ ಬುದ್ಧಿಯ ಮೇಲಲ್ಲ; ತಕ್ಷಣ ಕರ್ಮದ ಮೇಲಲ್ಲ;—ಅಂತಃಕರಣದ ಮೇಲೆ; ಅದರ ಸ್ಥಿತಿ ರಾಗ ರಂಜನೆ ಉಳ್ಳ, ಒಂದು ಆವೇಶದ್ದು, ಆವೇಗದ್ದು, ಕಾವಿನದು, ಪಕ್ಷಪಾತದ್ದು. ಈ ಆವೇಗ ಆವೇಶಗಳೇ ವಿಷಯದ ಸುತ್ತಲೂ ಆಡುವುದು, ನೋಡುವುದು, ಅನುಭವದ ರೂಪಣವನ್ನು ನಡಸುವುದು. ಶಾಸ್ತ್ರಾದಿಗಳಲ್ಲಿ ಇವಕ್ಕೆ ಎಡೆಯಿಲ್ಲ.

ಉತ್ತಮ ಕಲೆಯ ಎದುರು ನಾವು ಮೊದಲು ನಿಲ್ಲುವುದು ಚಕಿತರಾಗಿ; ಅಲ್ಲಿನ ಏನನ್ನೋ ಕಂಡು ಅದಕ್ಕೆ ಸೋತು; ಅದಕ್ಕಾಗಿ ಬೇರೆಯದನ್ನು ಬಿಟ್ಟು ಮರೆತು; ಅದರ ಅರ್ಥ ಸಂಕೇತಗಳನ್ನು ಧ್ಯಾನಿಸುತ್ತ; ಇವು ಗ್ರಾಹ್ಯವಾದಂತೆಲ್ಲ ಬಗೆಬಿಚ್ಚಿ, ಕಣ್ಣರಳಿ, ಕಿವಿ ತೆರೆದು, ಬಾಯಿ ಬಿಟ್ಟು, ಸ್ತಬ್ಧರಾಗಿ ನಿಂತು; ಮೆಚ್ಚುತ್ತ, ಕಂಪಿಸುತ್ತ; ಕಾದು, ಕರಗಿ; ಕಣ್ಣೀರು ಸುರಿಸುತ್ತ, ನಡುಗುತ್ತ; ಯಾವುದೋ ರೋಮಾಂಚ, ಬೇರೆ ಜೀವಕ್ಕೆ ಬಂದು; ಬಣ್ಣಕ್ಕೋ ಆಕೃತಿಗೊ ನಾದಕ್ಕೋ ತಾಳಗತಿಗೊ ಭಾವಭಂಗಿಗೊ ಶಬ್ದಾರ್ಥ ಸಂಗತಿಗೊ ನಮ್ಮನ್ನು ಮಾರಿಕೊಂಡು; ಹಸಿವು, ನಿದ್ದೆ, ದಿನಚರಿಯ ಹೊಣೆಗಾರಿಕೆ ಇವುಗಳನ್ನು ಲೆಕ್ಕಿಸದೆ. ಇದು ಕಲಾನುಭವದ ಹೊರ ನೋಟ. ಬಹುತರ ಇದೇ ಬಗೆಯ ಭಾವಪರಿಸ್ಥಿತಿಯಲ್ಲಿಯೇ ಕಲೆ ಹುಟ್ಟುವದು. ಅಲ್ಲಿ ಮುಂಚೆ ಇನ್ನೆಲ್ಲ ಒಂದು ಬಗೆಯ ಅಂತರ್ಮುಖತೆ ಉಳ್ಳವನಾಗಿರುತ್ತಾನೆ.

ಕಲೆಗಾರನ ಮನಸ್ಸು ಎಂದಿತು; ಅದು ಕಾಣುವ ದರ್ಶನ ಎಂದಿತು;

ತಾನನುಭವಿಸಿದ ರಾಗ ಭಾವಗಳನ್ನು ಮತ್ತೊಬ್ಬರಲ್ಲಿಯೂ ಉಂಟುಮಾಡುವ ಶಕ್ತಿಯುಳ್ಳದ್ದು ಎಂದಿತು. ಆದ್ದರಿಂದ ಅನುಭವ ಅಭಿವ್ಯಂಜನೆಗಳು ಎಷ್ಟು ಸೂಕ್ಷ್ಮವಾಗಿ, ನಯವಾಗಿ, ಉದಾರವಾಗಿ, ಮನೋಹರವಾಗಿ, ಸಂಪುಷ್ಟವಾಗಿ ಆದರೆ ಕೃತಿ ಅಷ್ಟು ಉತ್ತಮವಾಗುವುದು. ಹೀಗೆ ಕಲೆ ಹಿರಿದಾಗುವುದು ಕಲೆಗಾರನ ಗುಣದ ಮೇಲೆ ನಿಂತದ್ದು. ಅವೂ ಕೃತಿನಿರ್ಮಾಣ ಸಮಯವೂ ಸಾಮಾನ್ಯವಾದರೆ ಕೃತಿ ಸಾಮಾನ್ಯ; ಉದಾತ್ತವಾದರೆ ಉದಾತ್ತ; ಕರ್ಕಶವಾದರೆ ಕರ್ಕಶ. ಆದ್ದರಿಂದಲೇ ಒಬ್ಬನ ಕೃತಿಗಳೇ ಬೇರೆ ಬೇರೆ ಮಟ್ಟವನ್ನೂ ಸಿಟ್ಟನ್ನೂ ಮನಸ್ಸನ್ನೂ ತೋರಿಸುವುದು. ಹಲವು ವೇಳೆ ಒಂದು ರೀತಿ ಮೊದಲಾದ್ದು ಬರುಬರುತ್ತಾ ಆವೇಶವೇರಿ, ಊರಿ ಅಥವಾ ಬರಡಾಗಿ, ನೀರಸವಾಗಿ ಬೇರೆಗೂ ತಿರುಗುವುದು; ಎಣಿಸದಿದ್ದ ಶಕ್ತಿ ಉಕ್ತಿ ರಂಜನೆ ಕಾಂತಿಗಳಿಂದ ತುಂಬುವುದು; ವಿರಸತೆ ಮರಹು ಆಲಸ್ಯಗಳಿಂದ ಹದ ಕೆಡುವುದು. ಮೈ ತುಂಬಿ ಕಲೆಗಾರನು ಕೈಕೆಲಸದಲ್ಲಿಯೊ ಕಂಠದಲ್ಲಿಯೊ ಬಣ್ಣ ಕುಂಚಗಳಲ್ಲಿಯೊ ರೇಖೆ ಆಕೃತಿಗಳಲ್ಲಿಯೊ ತೊನೆತ ಕುಣಿತಗಳಲ್ಲಿಯೊ ಸುತ್ತಿಗೆಯ ಪೆಟ್ಟಿನಲ್ಲಿ ಆಡುವ ಉಳಿಯ ತರಿಕೆಗಳಲ್ಲಿಯೊ ತನ್ನ ಮನಸ್ಸನ್ನು ನಡಸುತ್ತಿರುವಾಗ ತನಗೇ ಮೊದಲು ಹೊಳೆಯದಿದ್ದ ಅಂದ, ದರ್ಶನ ಹುಟ್ಟಿಕೊಳ್ಳುವುದು; ಏನಾಗುತ್ತಿದೆಯೆಂಬ ಅರಿವಿಲ್ಲದಂತೆ ತನ್ನ ಬಗೆಯನ್ನು ಸುರಿಯುತ್ತಿರುವಾಗ ತನಗೂ ನೋಡುವವರಿಗೂ ಕೇಳುವವರಿಗೂ ಅವನು ಒಂದು ಭಾವಸಮಾಧಿಯನ್ನು ಉಂಟುಮಾಡಲು ಸಾಧ್ಯವಾಗುವುದು. ಆದ್ದರಿಂದಲೇ ಉತ್ತಮಕೃತಿ ಆವೇಶಜನ್ಯ ಎನ್ನುವುದು. ಯಾವ ಕಲೆಯಲ್ಲಿ ಆವೇಶಶುದ್ಧಿ, ನುಡಿತದ ಸಂಪತ್ತಿ, ಎರಡೂ ಜೊತೆಯೊಪ್ಪಿ ಸರಿಸದಲ್ಲಿರುವುದೋ ಅದು ಮೇಲ್ತರದ ಕಲೆ. ಉತ್ತಮ ಕಲೆಯಲ್ಲಿ ವಿಷಯ, ರೀತಿ, ಭಾವ, ಭಣಿತಿ ಸಮಧಾತುವಾಗಿ ಸೇರಿರುತ್ತವೆ. ಅವುಗಳಲ್ಲಿ ಯಾವುದು ಹೆಚ್ಚು ಕಡಮೆಯಾದರೂ ಹದ ಕೆಟ್ಟಿತು. ಮತ್ತು ಕಲೆ ಸಫಲವಾದಾಗ ಕಂಠಿಕೆ ಕಾಂಚನಮಾಲೆಯೊ ಕಾಳಾಯಸದಿಂದಾದುದೊ ಎಂಬ ಎಣಿಕೆ ಬರುವುದಿಲ್ಲ. ಬೇರೆ ಯಾವುದರ ಕಡೆಗೂ ಗಮನ ಹೋಗದು. ಅದರ ಪ್ರಾಬಲ್ಯವೇ ಆಗ ಸತ್ಯ; ಕಲೆಗಾರ, ಕೃತಿ, ನೋಡುವವರು, ಆ ಸಮಯದಲ್ಲಿ ಪ್ರತ್ಯೇಕ ವಸ್ತುಗಳಲ್ಲ. ಕಲಾನುಭವವೊಂದೇ ನಿಜ. ಈ ಹಿಡಿತ ಸಡಿಲ ಮನಸ್ಸು ಇಬ್ಬಗೆಯಾದಾಗ ಕಲೆ ಮೇಲ್ಮಟ್ಟವನ್ನು ಮುಟ್ಟಿಲ್ಲ

ವೆನ್ನಬಹುದು; ಅಥವಾ, ಅನುಭವಿಸುವವನಲ್ಲಿ ಅದು ಗ್ರಹಿಕೆಯಾಗಿಲ್ಲ ಎನ್ನಬೇಕು.

ಕುಂಚಿ ಉಳಿ ಹಿಡಿದವರೆಲ್ಲ, ಪದ್ಯ ಕಟ್ಟುವವರೆಲ್ಲ ಚಿತ್ರ ಶಿಲ್ಪ ನಿರ್ಮಾಣಕರಲ್ಲ, ಕವಿಗಳಲ್ಲ; ಎಗರಿ ಹಾರಾಡುವವರೆಲ್ಲ ನರ್ತಕರಲ್ಲ. ಎಲ್ಲ ಮನೆ ಕಟ್ಟುವವರೂ ವಾಸ್ತು ಶಿಲ್ಪಿಗಳಲ್ಲ. ಯಾರ ಆವೇಶಶುದ್ಧಿ ಮತ್ತು ರೂಪಣ ನಾವೀನ್ಯ ತಮ್ಮ ಕಲ್ಪನೆಯ ಅಥವಾ ರಚನೆಯ ಅತಿಶಯತೆಯಿಂದ ಜನಗಳನ್ನು ಅಚ್ಚರಿಗೊಳಿಸಬಲ್ಲದೋ, ಅವರು ಮಾತ್ರ. ಇತರ ಕಡೆ ಇಲ್ಲದ ಸೌಭಾಗ್ಯದ ಅನುಭವ ಅವರ ಕೃತಿಯಲ್ಲಿರುವುದರಿಂದ. ಉದ್ದೇಶ ಪೂರ್ವಕವಾಗಿ ಅವರು ಕೃತಿನಿರ್ಮಾಣಕ್ಕೆ ಕುಳಿತುಕೊಳ್ಳದಿರಬಹುದು. ಕುಳಿತಾಗಲೆಲ್ಲ ಕೈ, ಬಗೆ ನಡೆಯದೆಯೂ ಹೋಗಬಹುದು. ಕೃತಿಯನ್ನು ಹೇಗೆ ಉಂಟುಮಾಡುವರೋ ಅದು ಅವರಿಗೇ ತಿಳಿಯದ ಅಥವಾ ಮೊದಲೇ ಪೂರ್ತಿಯಾಗಿ ತಿಳಿಯದ ಸಂಗತಿಯಾಗಿರಬಲ್ಲದು. ಬಹುಕಾಲ ಹಿಡಿಯುವ ಶಿಲ್ಪ ಕೃತಿಯನ್ನೂ ಹತ್ತಾರು ಬಗೆಯ ವಾದ್ಯಗಳಿಗೆ ಹಂಚಿ ಕಟ್ಟುವ ಸ್ವರಮೇಳದ ಉತ್ಕೃತಿಗಳನ್ನೂ ವಿಸ್ತಾರವಾದ ಮಹಾಕಾವ್ಯಗಳನ್ನೂ ಮಹಾಮಂದಿರಗಳನ್ನೂ ನಿರ್ಮಿಸಬೇಕಾಗಿರುವಾಗ ಪ್ರತಿಭಾವಂತನಾದ ಕಲೆಗಾರನಿಗೆ ಅವುಗಳ ಧ್ಯಾನಚಿತ್ರ ಒಂದು ಒಟ್ಟಂದದಲ್ಲಿ ಮೊದಲು ಬಹುಶಃ ಒಳಗೆ ಆಕೃತಿಗೊಳ್ಳುವುದು. ಆಮೇಲೆ ಬರೆಯುವದೊ, ಮಣ್ಣು ಕಲ್ಲು ಸ್ವರಗಳಲ್ಲಿ ರೂಪಿಸುವುದೊ ಆಗುವುದು. ರೂಪಣೆ ಮತ್ತು ರಚನೆ ಮಾಡುವಾಗ ಮಾಡುತ್ತ ಮಾಡುತ್ತ ಧ್ಯಾನ ಅಥವಾ ಮೂಲಾವೇಶದಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಮಾರ್ಪಾಟು ಆಗಬಹುದು. ಧ್ಯಾನದರ್ಶನದಲ್ಲಿ ರೂಪುಗೊಂಡು ಅಥವಾ ಕೇಳಿಸಿ ಹುಟ್ಟಿದುದನ್ನು ಒರದಿ ಮಾಡುವ ಶಕ್ತಿ ಕೃತಿಕಾರನಿಗೆ ಎಷ್ಟು ಇರುವುದೊ, ದರ್ಶನಕ್ಕೂ ಕಲಾವಿಧಾನಗಳಲ್ಲಿ ಮೂರ್ತಿಗೊಳಿಸುವುದಕ್ಕೂ ಎಷ್ಟು ಮಟ್ಟಿನ ಈಡು ಜೋಡಿ ಇದೆಯೊ, ಎಂಬುದು ಸಮಗ್ರವಾಗಿ ಕೃತಿ ಮುಗಿಯುವವರೆಗೂ ಪ್ರತಿಭಾಸಂಪತ್ತಿಯೂ ಸಂವಿಧಾನ ಚಾತುರ್ಯವೂ ಒದಗಿ ನಿಲ್ಲುವುದೊ ಇಲ್ಲವೊ ಎಂಬುದೂ ಕೃತಿಯ ಸಂಪೂರ್ಣತೆಗೆ ಕಾರಣವಾಗುವುವು.

ಎಲ್ಲಿನಂತೆಯೇ ಕಲೆಯಲ್ಲಿಯೂ 'ಹಲವರಿಗೆ ಅದರ ಕರೆ ಕೇಳುತ್ತದೆ. ಕಲೆ ಆಯ್ದುಕೊಳ್ಳುವುದು ಒಬ್ಬಿಬ್ಬರನ್ನು.' ಉಳಿದವರು ಕಲೆಯ ಹಂಬಲ

ದವರು, ಪ್ರಾರ್ಥಿಗಳು, ಮರಿಯೂಳಿಗದ ಉತ್ಸಾಹಿಗಳು. ದೇವಾಲಯದ ಹೊರವಲಯ ಮುಖಮಂಟಪಗಳಲ್ಲಿ ನಿಲ್ಲುವ ಮಂದಿಯೇ ಎಂದಿಗೂ ಬಹು ಜನ. ಮೂಲ ವಿಗ್ರಹದ ಶಿಲ್ಪರಚನೆ ಎಲ್ಲರ ಭಾಗ್ಯಕ್ಕೂ ಬರುವುದಲ್ಲ. ಕಲೆಗಾರರೆನಿಸಿಕೊಳ್ಳುವವರಲ್ಲಿ ಬಹುಮಂದಿ ಕೀಳಾಗಿಯೊ ಮೇಲಾಗಿಯೊ ದೇವಾಲಯದ ಸುತ್ತಿನ ಹೊರ ಶೃಂಗಾರಗಳನ್ನು ಕೆತ್ತಬಲ್ಲವರು; ಕಿರಿಬೆರಗು ಗಳನ್ನು ಉಂಟುಮಾಡಬಲ್ಲವರು. ಭವ್ಯಸೌಂದರ್ಯದ ಪ್ರಕಾಶನಕ್ಕೆ ತಲೆಯಾಳುಗಳೇ ಬೇಕು. ಸಾಮಗ್ರಿಯೇನೊ ಎಲ್ಲರ ಎದುರಿಗೂ ಚೆಲ್ಲಿ ಹರಡಿರುತ್ತದೆ. ಎಲ್ಲರಿಗೂ ಪ್ರಪಂಚ ಅದನ್ನು ಸೂರೆಕೊಡುತ್ತದೆ. ಸರ್ವತ್ರ ಸಂಚರಿಸಿ, ಹಣ, ಕಾಲ, ಪ್ರಯತ್ನ ಹೂಡಿ ಶಾಸ್ತ್ರಜ್ಞಾನವನ್ನೂ ನಿಪುಣತೆ ಯನ್ನೂ ಬೇಕಾದವರು ವಶಪಡಿಸಿಕೊಳ್ಳಬಹುದು. ಆದರೆ ಬೆಳಕು ಗಾಳಿ ಗಳಲ್ಲಿ ತೇಲಿ ವಿಶ್ವಸೌಭಾಗ್ಯದ ಆಳಕ್ಕೆ ಮುಳುಗಿ ಮಲೆಯ ಕೋಡುಗಳನ್ನೇರಿ ನಿಂತು ಅವುಗಳ ಎದೆಯಲ್ಲಿ ಅಡಗಿರುವ ರಹಸ್ಯಗಳನ್ನು ಅನುಭವಿಸಿ, ಬಂದೆ ನೆಲ ನೀರು ಬಾನುಗಳಲ್ಲಿಲ್ಲದಿದ್ದ ಮುತ್ತು ರತ್ನಗಳಂಥ ಸೌಭಾಗ್ಯವನ್ನು ಭೂರಿ ಕೊಡಬಲ್ಲ ಪುಣ್ಯ ಏಕೋ ಏನೋ ಎಲ್ಲರ ಪಾಲಿಗೂ ಬರುವುದಿಲ್ಲ.

ವಿಷಯವನ್ನು ಹೀಗೆ ಬೆಳಸಿರುವುದರಿಂದ ಇನ್ನೊಂದು ಸಂಗತಿ ವೇದ್ಯ ವಾಗಿರಬೇಕು. ಕಲೆಗಾರನಿಗೆ ಸ್ವಾತಂತ್ರ್ಯ, ಕಲೆಯಲ್ಲಿ ಧರ್ಮದೃಷ್ಟಿ, ಪ್ರಯೋಜನದೃಷ್ಟಿ, ಅಥವಾ ಕಾಲದ ದೃಷ್ಟಿ ಯಾವ ರೀತಿ ಇರುತ್ತವೆಂಬುದು ಪರ್ಯಾಯವಾಗಿ ಗೋಚರವಾಗಿರಬೇಕು. ಇವೆಲ್ಲ ಮೊದಲೇ ಅವನ ಅನುಭವ ದಲ್ಲಿ ಸೇರಿಕೊಂಡಿರುವ ಅಂಶಗಳು; ಇಲ್ಲವೇ ಹೊರ ಸಂಗತಿಗಳು. ಯಾವೊಂದು ಸಮಯದಲ್ಲಾಗಲಿ ಅವನ ಆವೇಶದಲ್ಲಿಯೂ ರೂಪಣವಲ್ಲಿಯೂ ಇಷ್ಟೇ ಹೀಗೇ ಸೇರಿ ಪುಷ್ಟಿಕೊಡುವುವು ಎಂದು ಮೊದಲು ಹೇಳುವುದಕ್ಕಾಗುವು ದಿಲ್ಲ. ಕೃತಿ ಹುಟ್ಟಿ ಬಂದಮೇಲೆ ಬಹುಶಃ ಅರಿಯಬಹುದೇನೊ ! ಏಕೆಂದರೆ ನಿಜವಾದ ಕಲೆಗಾರನಿಗೆ ಆವೇಶದ ಒತ್ತಡದಲ್ಲಿ ಹಲವೇಳೆ ಹೊರಗಿನ ತಡೆ ಯಿರುವುದಿಲ್ಲ. ಬೇರೆ ತಪಸ್ಸು ಧ್ಯಾನಗಳಲ್ಲಿ ಪ್ರಜ್ಞೆಬಿಗಿದಿರುತ್ತದೆ. ಮನಸ್ಸಿನಲ್ಲಿ ಕೋಟಿ ಬಣ್ಣಗಳೂ ಬೆಳಕುಗಳೂ ತಾನಗತಿಗಳೂ ಆಕೃತಿಗಳೂ ಪಿಶಾಚಿಗಳಂತೆ ಆಡುತ್ತಿರುತ್ತವೆ; ಅಬ್ಬರಿಸುತ್ತಿರುತ್ತವೆ. ಹಿಂದಿನ ಸಂಸ್ಕಾರ ಅನುಭವ ಅಭ್ಯಾಸಗಳೆಲ್ಲ ಒಳಗೆ ಕುದಿದು ಸಿದ್ಧವಾಗಿರುತ್ತವೆ. ಆವೇಶ ಸಾಮಗ್ರಿಯಿಂದ ಕಲ್ಪನೆ ಕೆರಳಿದಾಗ ನರ್ತಕನಾದರೆ ಹೆಜ್ಜೆ ತಾಳ ಬಡಿಯುವುದು, ಅಂಗಭಂಗಿ

ವ್ಯತ್ಯಾಸವಾಗುವುದು ; ನಡಗೆ ನಾಲ್ಕು ಮೂಲೆಗೆ ಆಡುವುದು ; ಕವಿಯಾದರೆ ಪದ್ಯದ ಪಂಕ್ತಿಗಳೊ ದಾಟಿಗಳೊ ಚಿತ್ರಾರ್ಥ ಗತಿಗಳೊ ಹುಟ್ಟಿ ನುಡಿಯುವವು ; ಚಿತ್ರಕಾರನಾದರೆ ಆಕಾರಗಳು ಕುಂಚಿಕೆಯಿಂದ ರೇಖಿನಿಯಿಂದ ಹರಿದು ಸ್ಥಿತಿಯನ್ನೊ ಕಥೆಯನ್ನೊ ನೋಟವನ್ನೊ ರಚಿಸಿ ಕಾಣಿಸುವುವು. ಒಂದು ರಾಗದ ಕೂಗು ಪ್ರಪಂಚವನ್ನು ಮುಳುಗಿಸುವುದು. ಒಂದು ಮಂದಿರದ ಅಖಂಡ ರೂಪ ಕಣ್ತುಂಬಿ ನಿಂತು, ತನ್ನ ಆಕೃತಿವಿಲಾಸ ಅಭಿವ್ಯಕ್ತಿ ಆದ ಹೊರತು ಹಿಂಗದಾಗುವುದು. ಇಲ್ಲವಾದರೆ ಬಿಡುಗಡೆ ದೊರಕದೆ ನರಕಂಪದ ನಿಲ್ಲದೆ ಇರುವುದು. ಇಳಿಯುವವರೆಗೂ ಈ ಭೂತ ತಣಿಕೇಳುತ್ತ ಒತ್ತುತ್ತ ಹೋಗುವುದು. ಅದನ್ನು ಹೊರಗೆ ಹಾಕಿದ ಹೊರತು ಮನೆ ಮಠ, ಹೆಂಡಿರು ಮಕ್ಕಳು, ಸಾಲ ಸೂಲ, ಅಧಿಕಾರ ಹೊಣೆ, ಊಟ ಉಪಚಾರ ನಿದ್ರೆ, ಒಲ್ಲೆ ಯಾವುವೂ ಬೇಕಾಗವು. ಅಷ್ಟೇ ಏಕೆ, ದುರ್ಭರ ಆತಂಕಗಳಾವುವು.* ಕಲಾಸ್ಫೂರ್ತಿಯೂ, ಮಾರ್ಗವು ಹೀಗಿರುವಾಗ ಸ್ವಾತಂತ್ರ್ಯ ಕೇಳುವವರು ಯಾರು ? ಕೊಡುವವರು ಯಾರು ? ಧರ್ಮದೃಷ್ಟಿ ಬೇಕೆ, ಬೇಡವೆ ಎಂಬ ವಿಚಾರ ಎಲ್ಲಿನದು ? ಚೆಲುವು ಅಲಂಕಾರವೆ, ನಿರಾಭರಣತೆಯೆ ? ಸಂಪ್ರದಾಯ ಮಾರ್ಗ ಮೇಲೆ, ಸ್ವಚ್ಛಂದತೆ ಮೇಲೆ ? ಅದು ಬೇಕ ; ಇದು ಸಾಕೆ ಎಂಬುವೆಲ್ಲ ಬದಿಗೆ ಬೀಳುವುವು, ಗೌಣವಾಗುವುವು.

ಕಲ್ಲ ಮೇಲೆ ಪಾಚಿ ಬೆಳೆದಿದೆ :— ಪ್ರಪಂಚದಲ್ಲಿರುವ ಪಾಷಾಣತೆಯ ಜೊತೆಗೆ ಮೃದುತೆ ಕೋಮಲತೆಗಳ ಸಹವಾಸದರ್ಶನ ಚಿತ್ರಕಾರನಿಗೆ ಕಾಣುವುದು. ಶಿಶಿರದಲ್ಲಿ ಕೊರೆಗಾಳಿ ಬೀಸಿತು, ಕೋಗಿಲೆ ಕೂಗಿತು :— ವಸಂತ ಇನ್ನೆಷ್ಟುಕಾಲ ತಡೆದೀತು ಎಂಬ ಕೂಗಿನ ಸಂಕೇತವಾಗುವುದು. ಬಾಗಿಲನ್ನು ಯಾರೋ ಕಠಿನವಾಗಿ ತಟ್ಟಿದರು, ಸುತ್ತಿಗೆಯ ಪೆಟ್ಟು ನಿಷ್ಕರುಣವಾಗಿ ಬೀಳುತ್ತಿದೆ :— ಎಷ್ಟು ಎದುರುಯತ್ನಮಾಡಿದರೂ ಮನುಷ್ಯನ ಬಯಕೆ ಪ್ರಯತ್ನಗಳನ್ನು ಬಡಿದು ವಿಧಿ ಹೇಗೆ ಕುಟ್ಟಿ ಪುಡಿಮಾಡುವುದು ಎಂಬ ಹೃದಯದ ವೇದನೆ ವಾದ್ಯಮೇಳದಲ್ಲಿ — ಒಂದು ಸಲ ಪಿಟೀಲುಗಳಲ್ಲಿ,

---

* ಕಲೆಗಾರರ ಅನೇಕ ವಕ್ರತೆಗಳಿಗೆ ಬಹುಶಃ ಇದೇ ಕಾರಣವಿರಬೇಕು. ಅವರ ಜೊತೆಬದುಕು ಸಾಧಾರಣರಿಗೆ ಕಷ್ಟ ; ಅರ್ಥವಾಗದು. ನಿಜವಾದ ಕಲಾವೇಶವಿಲ್ಲದವರು ಈ ವೇಷ ಹಾಕುವುದೂ ವಿಚಿತ್ರ ವರ್ತನೆಗಳಿಗೆ ಎಡೆಕೊಡುವುದೂ ಇದರ ಆಭಾಸ ರೂಪಗಳು.

ಒಂಮೊಸಲ ಮದ್ದಳೆಗಳಲ್ಲಿ, ಒಂದು ರೀತಿ ಕೊಳಲುಗಳಲ್ಲಿ, ಒಂದು ಬಗೆ ಲೋಹವಾದ್ಯಗಳಲ್ಲಿ, ತೀವ್ರವಾಗಿ ಮೃದುವಾಗಿ ದೀನವಾಗಿ ಭಯಂಕರವಾಗಿ ಹುಟ್ಟಿ ಕೇಳುವುದು. ಕಾಡಿನ ರಸ್ತೆಯಲ್ಲಿ ಹೋಗುವ ಗಾಡಿ ಕುದುರೆಗಳ ತುಳಿತ, ಗಂಟೆ ಕೊಂಬುಗಳ ಮೊಳಗು, ಹಕ್ಕಿ ಹುಳುಗಳ ಉಲಿತ ಕೆಲೆತ, ನದಿಯ ತಿರುವು, ಜಿಲಿಜಿಲಿನಾದ, ಪ್ರಿಯರ ಪ್ರೇಮದಬಗೆ ಸೇರಿಕೊಂಡ ಗಾನಮಂಡಲವಾಗುವುದು. ಅನಂತ ಶ್ರೇಣಿಯಾಗಿ ಉನ್ನತ ಶಿಖರಗಳ ಮುಡಿಯಾಗಿ ನಿಂತ ಹಿಮಾಲಯದ ಕಲ್ಕೋಡು ತಪಸ್ವಿ ಶಿವನಂತೆ ಕಾಣುವುದು. ಉದ್ದಕ್ಕೆ ಹರಡಿ ಬಿದ್ದ ಕಗ್ಗಲ್ಲ ಬಂಡೆ ದಡಿಗ ದಾನವನ ವಿಶ್ರಾಂತಿಯ ಹಾಗೆ ಶಿಲ್ಪಾಕೃತಿಯಾಗುವುದು. ಶ್ರವಣಬೆಳುಗೊಳದ ಬೆಟ್ಟ ಗೊಮ್ಮಟನನ್ನು ಹುಗಿದು ಸೆರೆಯಿಟ್ಟ ಪಾಷಾಣದ ಪುರುಷನಿರ್ಬಂಧದಂತೆ ನಿಲ್ಲುವುದು. ದಾರಿಯ ಮಣ್ಣು ಮುಳ್ಳುಗಳ ನಡುವೆ ಬೆಳೆವ ಕರಿಹೂ ಸೃಷ್ಟಿಯಲ್ಲಿ ನಾನೂ ಒಬ್ಬನಿದ್ದೇನೆ, ನನ್ನನ್ನೂ ನೋಡಿ ಹೋಗಿ ಎಂಬ ಕರೆಯಾಗುವುದು ; ಎಡರು ಕೀಳ್ಕೃಗಳ ನಡುವೆ ' ಬೆಳೆಯಬೇಕಾದ ಮೃದು ಸೌಂದರ್ಯದ ಪಾಡನ್ನು ಕಾಣಿಸುವುದು. ಕುಟುಂಬದ ಬೇಗೆಗೆ ಸಿಕ್ಕಿದ ಒಬ್ಬ ಹೆಣ್ಣು ಅಳಲು ' ಕಡು ಪಾತಕಂಗೈದು ಹೆಣ್ಣಾಗಿ ಹುಟ್ಟಿದುದು ಎನ್ನೊಳಪರಾಧವುಂಟು ' ಎನ್ನಿಸುವ ಮಾನವನ ಅಮಾನವತೆಯ ಸೂಚಿಕೆಯಾಗುವುದು. ಪಾರಿವ ಮಿಂಚುಳ್ಳಿ ಹಾರುವಾಗ ತೋರುವ ಬೆಡಗು ಗರುಡಗಿಡುಗಗಳ ಗಗನಯಾನದಲ್ಲಿ, ಅಥವಾ, ಗಗನದಿಂದೆಂಬಂತೆ ದುಮ್ಮಿಕ್ಕುತ್ತಿರುವ ಜಲಪಾತದಲ್ಲಿ ಅದ್ಭುತ ಶಕ್ತಿವಿಲಾಸವಾಗಿ—ಬಲದ ಸಂಕೇತವಾಗಿ ಕಾಣುವುದು. ಕೊಳವನ್ನು ಅರಳಿಸಿ ಅವರ ಕಣ್ಣಾಗಿ ನಗಿಸುತ್ತಿದ್ದ ಹೂವನ್ನು ಕಿತ್ತು ತಂದು ಅದನ್ನು ಬಾಡಿಸಿ ಹೊಸಕಿಬಿಸುಡುವ ವ್ಯಾಪಾರ, ಸೌಂದರ್ಯವನ್ನು ಆಕ್ರಮಿಸಿ ಕೆಡಿಸುವ ರಾಕ್ಷಸತೆಯ ನಿದರ್ಶನವಾಗಿ ನಾಟ್ಯವಾಗುವುದು. ಒಣಗಿ ಬಟ್ಟಬಯಲಾಗಿದ್ದ ಭೂಮಿ ಒಂದು ಮಳೆ ಕರೆದ ಕೂಡಲೆ ಎಲ್ಲೆಲ್ಲಿಯೂ ಪಸರಿಸುವ ಸಂಭ್ರಮದ ದೃಶ್ಯ ಚಿಗುರಿ ಮೇಲಕ್ಕೆ‡ ಬರಲು ತವಕಪಡುತ್ತಿರುವ ಜೀವದ ಹಸಿರುಬಯಕೆಯನ್ನು ಸಾರುವುದು. ವಸ್ತು ಆದಾಗಿರಲಿ ಇಲ್ಲದಿರಲಿ ಲೋಕವನ್ನು ನೋಡಿ ಒಂದು ಮನಸ್ಸಿಗೆ ಭಾವಪ್ರೇರಣೆ ಉಂಟಾಗುವುದು ಹಾಗೆ. ಆ ದರ್ಶನವಿಶೇಷವೇ ಅಲ್ಲಿ ಜೀವ

‡ ಕವಿತೆಯ ಮಾತಿನ ಮೂಲಕ ವ್ಯಕ್ತವಾದ ಇಂಥ ಭಾವ ಸಾಹಿತ್ಯ. ಆದರೆ ಬೇರೆ

ಕಲೆಗಾರನಿಗೆ ಹಿಡಿತ ನಿಯಮಗಳೇ ಇಲ್ಲವೆ ? ಎಂದರೆ,—ಇವೆ. ಅವನು ಮೇಲ್ತರದವನಾಗಿದ್ದರೆ ಆತನು ಕಂಡು ತೋರಿಸುವುದು ಕೆಟ್ಟದ್ದಲ್ಲ, ಅಹಿತವಲ್ಲ. ಇತರ ಸೂಕ್ಷ್ಮಬುದ್ಧಿಯವರು ಬೆಳೆಯುತ್ತಿರುವಂತೆ ಆತನ ಮನಸ್ಸೂ ದಿನದಿನಕ್ಕೆ ಬೆಳೆಯುತ್ತಿರುತ್ತದೆ. ಆತನ ಜೀವನವಿಮರ್ಶೆ, ವ್ಯಾಖ್ಯಾನ, ದೃಷ್ಟಿಗಳು ಬದುಕಿಗೆ ಸಹಾಯಕ. ಬದುಕಿನ ಪೋಷಣೆಗೂ ಅದರ ಶುಚಿ ಉತ್ಥಾನತೆಗೂ ಧ್ಯಾನಕ್ಕೂ ಕಾರ್ಯಪ್ರವೃತ್ತಿಗಳಿಗೂ ನೆರೆಯುತ್ತದೆ. ಕರ್ಮನಿರ್ಬಂಧವಿಲ್ಲವೆಂದು ವರ್ಣಿಸುವ ಜೀವನ್ಮುಕ್ತನ ಉಸಿರು, ಮಾತು, ನಡೆಗಳನ್ನು ಉಪನಿಷತ್ತು ಹೇಗೆ ವರ್ಣಿಸುವುದೊ ಅದನ್ನು ಇಲ್ಲಿ ಹೋಲಿಸಬಹುದು. ಶರಣರು ' ನುಡಿದುದೇ ಶಿವತತ್ವದಾಗಮ, ನಡೆದುದೇ ಶಿವಮಾರ್ಗ ' ಎಂದು ಅಲ್ಲಮನು ಸಿದ್ಧರಾಮನಿಗೆ ಮಾಡಿದ ಉಪದೇಶದ ಸಾಮ್ಯವನ್ನು ಅಥವಾ ಮದನಿಕೆ ಚಾರುದತ್ತನ ವಿಷಯದಲ್ಲಿ ಆಡಿದ ' ನ ಚಂದ್ರಾದಾತಪೋ ಭವತಿ ' ಎಂಬುದನ್ನೂ ಹೇಳಬಹುದು.

ಕಲೆ ಕಲೆಯಾಗದೆ ಬೇರೆ ಕೆಲಸವನ್ನು ಕಲೆಯಿಂದ ಮಾಡಿಸಬೇಕೆಂದು ಹೊರಟಾಗ ವಿರಸ ಉಂಟಾಗುವುದು ಸಹಜ ಆಗ ವಿಚಿತ್ರ ಪ್ರಶ್ನೆಗಳೂ ಸಮಸ್ಯೆಗಳೂ ವಿವಾದಗಳೂ ಏಳುವುವು. ಕಲೆಯು ನೇಮ ರೀತಿಗಳಿಗೆ ಒಳಪಟ್ಟು ಜೀವನದರ್ಶನವನ್ನು ತೋರಿಸುವ ಬದಲಾಗಿ ಕಲೆಗಾರನು ಅದರಲ್ಲಿ ಕೊಳೆ, ವಿಷ ತುಂಬುವಾಗ, ಅಥವಾ ತನ್ನ ಚಪಲತೆಗಳನು ಪ್ರಪಂಚದಮೇಲೆ ಪರೀಕ್ಷಣೆಗಾಗಿ ಈ ರೀತಿ ಕಳಿಸುವೆನೆಂದರೆ, ಕಲೆಗೆ ಸಲ್ಲದ ಮಾರ್ಗಗಳನ್ನೂ ರಾಕ್ಷಸ ನಿಪುಣತೆಗಳನ್ನೂ ಮೆಚ್ಚಿರೆಂದು ಒತ್ತಾಯಪಡಿಸುವಾಗ, ಅದು ಬರಿಯ ಕಲೆಯಾಗದು. ಅದು ಕಲೆಯ ಹೆಸರಲ್ಲಿ ಮಾಡುವ ಬೇರೆ ಕೆಲಸ ; ತೋರಿಸುವ ಅಸಭ್ಯತೆ ; ಅಸಾಮಾಜಿಕ ಅಹಂಕಾರ, ಅಥವಾ ಬೇರೊಂದು ಮುಖ್ಯಕೆಲಸಕ್ಕೊ ಪ್ರಚಾರಕಾರ್ಯಕ್ಕೊ ಕಲೆಯನ್ನು ಉಪಯೋಗಿಸುವ ವೃತ್ತಿ. ಇದಕ್ಕೆ ಬೇಕಾದಷ್ಟು ಅವಕಾಶವುಂಟು. ಕಲೆಯೊಂದಕ್ಕೇ

---

ಕಲೆಗಳಲ್ಲಿ ಒಂಗೆ ಅರ್ಥಸಂಕೇತವನ್ನು ಸೂಚಿಸುವುದು ಅದರ ಸಾಹಿತ್ಯಕ ( A literary ) ವಿವರಣೆಯಾಗುವುದೇ ಹೊರತು ಆ ಕಲೆಗಾರಿಕೆಯ ಪೂರ್ಣ ಅಥವಾ ಸ್ವರೂಪದ್ಯೋತಕವಾಗುವುದಿಲ್ಲ. ಆಯಾಕಲೆಯ ವಿಮರ್ಶೆಯಲ್ಲಿ ಅಲ್ಲಿನ ದ್ರವ್ಯ, ರಚನೆ, ರೂಪಗಳ ಮಾರ್ಗದಲ್ಲಿಯೇ ವಿವೇಚಿಸಬೇಕು. ಅಲ್ಲವಾದರೆ ಕಲಾವಿಮರ್ಶೆಯಾಗದು.

ಅಲ್ಲ ಈ ಗತಿ—ಶಾಸ್ತ್ರ ವಿಜ್ಞಾನ ಮತ ಕಾರ್ಯಶಕ್ತಿಗಳೆಲ್ಲಕ್ಕೂ ಈ ದೌರ್ಭಾಗ್ಯ ಕಾದಿದೆ. ಅಂಥ ಸಮಯದಲ್ಲಿ ಕಲೆಗೆ ಕಲೆಯಾಗಿ ಸಫಲತೆಯಿಲ್ಲವಾದ್ದರಿಂದ ವಿಮರ್ಶೆಯೂ ಸ್ವೀಕಾರವೂ ಬೇರೆ ಬಗೆಯಾಗುವುವು, ಮಿಶ್ರವಾಗುವುವು.*

ವೇದಾಂತ, ಮತ, ಶಾಸ್ತ್ರ, ವಿಜ್ಞಾನ, ಇವು ಹೇಗೆ ಆತ್ಮಸಾಧನೆಗೆ ಸ್ವತಂತ್ರಮಾರ್ಗಗಳೆಂದು ಹೇಳುವರೊ ಕಲೆಯುದೂ ಅಂಥದೇ ಸ್ವತಂತ್ರ ಮಾರ್ಗ. ಅವುಗಳಿಗೆ ಒದಗುವ ಮನಸ್ಸಿನ ಶಕ್ತಿ ಹೇಗೆ ವಿಶೇಷವೋ ಕಲೆಯ ಜೀವವಾದ ಭಾವಾವೇಶ ಕಲ್ಪನಾಶಕ್ತಿಗಳೂ ಹಾಗೆಯೇ ಸ್ವಾಯತ್ತಸಿದ್ಧಿ ಯುಳ್ಳವು. ಕಲ್ಲನ್ನು ಕರಗಿಸಿ ನಿಷ್ಠುರವನ್ನು ಮೃದುಮಾಡುವ ಶಕ್ತಿಯಲ್ಲಿ, ಪರಮಶಿವದ ಕಡೆಗೆ ನೇರವಾಗಿ ಬದುಕನ್ನು ಒಯ್ಯುವುದರಲ್ಲಿ ಇತರ ಯಾವ ಮಾರ್ಗಕ್ಕೂ ಅದು ಕಡಮೆಯಲ್ಲ. ಒಂದು ಬಗೆಯಲ್ಲಿ ಮೇಲೇ ಎನ್ನಬೇಕು. ಅದರ ಮಾರ್ಗ ಮನಸ್ಸನ್ನು ಮೋಹಿಸಿ ಒಲಿಸಿಕೊಳ್ಳುವ ಮಾರ್ಗ. ಮಾನವನ ಲೋಪದೋಷ ಕಷ್ಟ ದೌರ್ಬಲ್ಯಗಳಿಗೆ ಕರುಣೆಯನ್ನೂ ಕೆಳೆಯ ಸೌಹಾರ್ದ ವನ್ನೂ ಹಾಯಿಸಿ ಕಾಪಾಡುವ ಒಂದೇ ಮಾರ್ಗ. ಸೋತುಬಿದ್ದವರಿಗೆ ಧೈರ್ಯ ಊಡುವ ಮಾರ್ಗ. ಶಾಸ್ತ್ರ ವಿಜ್ಞಾನ ವೇದಾಂತಗಳಲ್ಲಿ ಅನುಕಂಪೆ ಕರುಣೆ ಗಳನ್ನು ಎಲ್ಲಿಂದ ತರಬೇಕು, ಅಲ್ಲಿ ಅವನ್ನು ಕೇಳಬೇಕು ಯಾರು? ಮಾನವತೆ ಅಲ್ಲಿ ಬಹುಭಾಗ ತಬ್ಬಲಿ; ಅಯುಕ್ತ.

ಇದರಿಂದ ತಿಳಿದೀತು,—ಕಲೆ ಅನಗತ್ಯವಲ್ಲವೆಂದು, ನಿಷ್ಪ್ರಯೋಜನವಲ್ಲ ವೆಂದು. ಹಾಗೆ ನೋಡಿದರೆ ಯಾವುದು ತಾನೇ ದಿನಚರಿಯ ಜೀವನಕ್ಕೆ ಆವಶ್ಯಕ? ಕೈಯೆ? ಕಾಲೆ? ಕಿವಿಯೆ? ವಿದ್ಯೆಯೆ? ಬುದ್ಧಿಯೆ? ನಯವೆ? ಧರ್ಮವೆ? ಪೌರುಷವೆ? ಪ್ರೇಮವೆ? ನ್ಯಾಯಗಾಂಭೀರ್ಯಗಳೆ? ಆತ್ಮ ಅನಾತ್ಮ ವಿವೇಕವೆ? ಇವು ಯಾವುವೂ ಇಲ್ಲದಿದ್ದರೂ ಜಗತ್ತಿನ ಬದುಕು ನಿಶ್ಚಿಂತವಾಗಿ ವಿಜೃಂಭಣೆಯಿಂದ ಸಾಗುತ್ತಿಲ್ಲವೆ? ಇವೆಲ್ಲ ಅನಾವಶ್ಯಕ ವಾದರೆ ಕಲೆಯೂ ಅನಗತ್ಯ. ಮನುಷ್ಯರ ಏಳಿಗೆಯ ಕುರುಹಾಗಿ, ಸಂಸ್ಕೃ ತಿಯ ಒರೆಯಾಗಿ, ಅಗ್ರಾಮ್ಯತೆಯ ಸಿದ್ಧಿಯಾಗಿ, ಜೀವನದ ಸಫಲತೆಯಾಗಿ ಕಾಣಿಸುವ ಕರ್ಮಗಳಲ್ಲಿ ಬೆಲೆಗಳಲ್ಲಿ ಕಲೆ ಒಂದು. ಆದರಿಂದ ಮಾನವನ

* ಇಂಗ್ಲಿಷಿನಲ್ಲಿ A pure value, a mixed value, an applied value, a technical value ಎಂದು ಮುಂತಾಗಿ ವ್ಯತ್ಯಾಸಗಳನ್ನು ನಿರೂಪಿಸುವುದುಂಟು.

ಸತ್ವಸಾಹಸವೂ ಸರ್ವಕೀರ್ತಿಗಳೂ ಬದುಕಿ ಉಳಿದಿವೆ. ರಾಜ್ಯ ಸಾಮ್ರಾಜ್ಯಗಳು ಉರುಳುವುವು. ರಾಜರು, ವೀರರು, ಸಾಹುಕಾರರು ದರ್ಪದಿಂದ ಪ್ರಪಂಚವನ್ನು ತುಳಿದು ಆಳುವವರು, ಅಧಿಕಾರದ ಮದದಲ್ಲಿ ಜನರ ಅದೃಷ್ಟಗಳನ್ನು ಅಂಗೈಹಿಡಿಯಲ್ಲಿ ಮುರಿದು ಬೆಳೆಬಾಳನ್ನು ನಾಶಮಾಡಿ ಮೆರೆಯುವ ಧೂರ್ತರು ಹೆಸರಿಲ್ಲದೆ ಅಳಿಯುವರು. ಅವರ ಬದುಕು ಒಂದು ಗಳಿಗೆಯ ಉಸಿರು; ನೀರ್ಗುಳ್ಳೆ. ಉಳಿವುದು ಕಲೆ. ಕಲೆ ಉಳಿಸಿದರೆ ನೆನಪು ಅಮೃತವಾಯಿತು. ಎಲ್ಲ ಕಾಲಗಳ ಸೌಭಾಗ್ಯವಾಗಿ ಸಂತಸವಾಗಿ ನಿಂತಿತು. ಇಲ್ಲವಾದರೆ ಉಳಿಸಬಲ್ಲವರು ಯಾರು? 'ಮುನಿದುಂಬ ಜವಂಗಂ ಮಾಯ್ ಎನಲ್ ಅಣ್ಮುವರಿಲ್ಲ' ಶಾಸ್ತ್ರ ಅಥವಾ ವೇದಾಂತದ ವಿಷಯವನ್ನು ಬಲ್ಲವರು ನಾಲ್ಕು ಮಾತಿನಲ್ಲಿ ತಿಳಿಸಿ ಅವರ ಸಾರವನ್ನು ನಾವು ಗ್ರಹಿಸುವಂತೆ ಮಾಡಿಕೊಡಬಹುದು. ಬಾದಾಮಿಗುಹೆಯ ಅಥವಾ ನಂದಲಾಲ ವಸುಗಳ ಮಹಿಷಾಸುರಮರ್ದಿನಿಯನ್ನೊ ಬ್ಲೇಕನ ಪತಿತ ದೇವತೆಗಳನ್ನೊ ಮೇಘಸಂದೇಶದ ಮಂದಾಕ್ರಾಂತಗಳ ವೈಭವವನ್ನೊ ಬೀತೊವನ್ ಬಾಖ್ ತ್ಯಾಗರಾಜ ಜಯದೇವ ಮುಂತಾದವರ ನಾದಮೇಳಗಳನ್ನೊ ಉದಯಶಂಕರರ ನರ್ತನವನ್ನೊ ಜಕ್ಕಣನ ಶಿಲ್ಪವನ್ನೊ ಎದುರಿಗೆ ನಿಂತೇ ಅನುಭವಿಸಬೇಕು ಆ ವಿಷಯ ತಿಳಿದರೆ, ವರ್ಣನೆ ಕೇಳಿದರೆ ನಾಲದು. ಇನ್ನೊಬ್ಬರ ಪ್ರಶಂಸೆ ಪ್ರತ್ಯಾಮ್ನಾಯವಾಗದು. ಸಾಗರವನ್ನೇ ಕಂಡ ಹೊರತು, ಪರ್ವತ ಶೃಂಗಗಳ ಮಹಾಪಂಗ್ತಿಗಳನ್ನೇ ಕಣ್ಣಾರೆ ನೋಡಿದ ಹೊರತು ಅವುಗಳ ಸ್ವರೂಪ ಹೇಗೆ ಗೊತ್ತಾಗದೋ, ಅನುಭವ ಮನಸ್ಸಿಗೆ ಇಳಿಯದೋ ಹಾಗೆ ಉತ್ತಮ ಕಲೆಯ ಸ್ವರೂಪ. ಮತ್ತು, ಅದರ ಎದುರಿಗೆ ನಿಂತಾಗ ಹೊರಗಿನ ಪ್ರಪಂಚ ಸುಳ್ಳೆ ಗೊತ್ತಿತು. ಅದರ ಮುಂದೆ ವಸ್ತುಜಗತ್ತು ಅಸತ್ತು. ಅದು ಮಾತ್ರ ನಮ್ಮದು. ಅಥವಾ, ನಾವು ಅದಕ್ಕೆ ಸೆರೆ. ಅಲ್ಲಿ ತೋರುವ ಸನ್ನಿವೇಶ, ರೂಪರೇಷೆ, ನಾದನಯ, ಕಥೆ ಧ್ವನಿ, ಕಾವು ನೋವು, ಭಾವಭಂಗಿ, ಧಿಮ್ಮಿತ—ಇವು ನಮ್ಮ ಮೇಲೆ ಏಕಾಧಿಪತ್ಯ ಮಾಡುತ್ತವೆ. ಅಲ್ಲಿನ ದರ್ಶನವೇ ದರ್ಶನ. ಉಳಿದವೆಲ್ಲ ಸಲ್ಲ. ಉತ್ತಮವಾದ ಕಲೆಯೆದುರು ಎಲ್ಲ ಒರಟುತನಗಳೂ ಬಿಗುಮಾನಗಳೂ ಸಂಯಮಗಳೂ ಮುರಿದು ಬೀಳುವುವು. ಅದಕ್ಕೆ ಗಮನ ಕೊಡದೆ ಇರಪಿಲ್ಲ, ಗತಿಯಿಲ್ಲ. ಅದಕ್ಕೆ ಸೋತು ಕರಗಬಲ್ಲೆವಾದರೆಯೇ ಸಂಸ್ಕೃತಿ. ಅಲ್ಲಿ ಕಲೆಗಾರ, ಕಲೆ, ನಾವು ಒಂದೇ ಉಸುರಿನ ವೃತ್ತಿಗಳು.

ಇನ್ನು ಕಲೆಯ ಗುರಿ ಯಾವುದೆಂಬ ಪ್ರಶ್ನೆಗೆ ಬೇರೆ ಉತ್ತರವಾವುದು ? ಎಲೆಯ ಗುರಿ ಉತ್ತಮವಾದ ಎಲೆಯಾಗುವುದು ; ಹಣ್ಣಿನದು ಸವಿಯಾದ ತಿರುಳುಳ್ಳ ಉತ್ತಮ ಹಣ್ಣಾಗುವುದು. ಹೂ ಪಕ್ಷಿ ಹೂಪಕ್ಷಿಗಳಾಗಿ ಉಳಿದು ಭಗವಂತನ ಶ್ರೇಷ್ಠ ಕೃತಿಗಳಲ್ಲಿ ತಮ್ಮ ವ್ಯಕ್ತಿತ್ವವನ್ನು ತೋರಿಸುತ್ತ ಬೆಳಗುವುದು. ವಿಜ್ಞಾನಿಯ ಗುರಿ, ಕಮ್ಮಾರನ ಗುರಿ ಉತ್ತಮ ವಿಜ್ಞಾನಿಯೂ ಕಮ್ಮಾರನೂ ಆಗುವುದು. ಹಾಗೆಯೇ ಕಲೆಯೂ. ಅದರದರ ಧರ್ಮವನ್ನು ಅದು ಕಾಪಾಡಿಕೊಂಡು ಬದುಕಬೇಕು. ತನ್ನ ವಿಶೇಷತೆಯನ್ನು ಉಳಿಸಿಕೊಂಡು ಸೃಷ್ಟಿಯ ವಿವಿಧ ಸಂಪತ್ತಿಯ ಪ್ರಮಾಣವಾಗಿ ಸಫಲವಾಗಬೇಕು. ಕಲೆ ಉತ್ತಮವಾದ ಕಲೆಯಾಗಿರುವವರೆಗೂ ಚಿಂತೆಯಿಲ್ಲ; ಪ್ರಾಮಾಣಿಕವಾಗಿರುವಾಗ ಅದು ಜೀವನದ ಚಿತ್ರವೂ ಆಗುವುದು ; ಆತ್ಮದ ನಿವೇದನವೂ ಆಗುವುದು. ಅದರ ಸಂಪರ್ಕ ಉಂಟಾದವರ ಮನಸ್ಸು ತೆರೆಯುವುದು, ಒಮ್ಮೆಗೇ ಬಿಡುಗಡೆಗೊಳ್ಳುವುದು. ಹೊಸ ತಿಳಿವೊಂದು ಬರುವುದು. ಅದರ ಪ್ರಭಾವಕ್ಕೆ ಒಳಪಡಬಲ್ಲ ಚೇತನಗಳಿಗೆ ಮೃದುತೆ ಔದಾರ್ಯ ಶಕ್ತಿ ಸೌಭಾಗ್ಯಗಳ ಹದ ಉಂಟಾಗಿ ಅದು ಜಗತ್ಕಲ್ಯಾಣಸಾಧನವಾಗುವುದು.



# ಸಾಹಿತ್ಯವಿಮರ್ಶೆ

ಸಾಹಿತ್ಯದೊಡನೆಯೇ ಸಾಹಿತ್ಯವಿಮರ್ಶೆ ಹುಟ್ಟುತ್ತದೆ. ಬಹುಮಟ್ಟಿಗೆ ಕಲಾಕೃತಿ ಎಂಬ ಎಲ್ಲದರಲ್ಲೂ ಹೀಗೇ. ಕೃತಿನಿರ್ಮಾಣ ಮಾಡುವವನ ಮನಸ್ಸೇ ಒಂದು ನಿಲವಿನಲ್ಲಿ ಆ ಕಾರ್ಯ ಮಾಡುವುದು. ಅದರ ಒಂದು ಹಿಡಿತ, ಹದ, ಛಂದ ಇದ್ದಲ್ಲಿ ಮಾತ್ರ ಕೃತಿ ಹುಟ್ಟಿ ಕೃತಿಕಾರನಿಗೆ ತೃಪ್ತಿ ಬಂದೀತು. ಅವನಿಗೆ ಹಾಳತವೂ ತುಷ್ಟಿಯೂ ತೋರವಾದರೆ ಅವನು ಕೃತಿಯನ್ನು ರಚಿಸುವುದಿಲ್ಲ. ರಚಿಸಿದರೆ, ಬಹುತರ, ಪ್ರಕಟಿಸಲು ಇಷ್ಟ ಪಡುವುದಿಲ್ಲ. ಎಂದರೆ, ವಿಷಯುವೂ ರೀತಿಯೂ ತನ್ನ ಬೆಲೆ, ದೃಷ್ಟಿಗಳಿಗೆ ಹೊಂದಿ ತೂಗಿದರೆಯೇ ಅವನು ಕೃತಿರೂಪಣ ಮಾಡುವುದು. ಅವನ ಅವಧಾನ ಹೀಗೆ ಕೃತಿಕ್ರಿಯೆಯಲ್ಲಿ ಎಚ್ಚರವಾಗಿದ್ದು, ಪ್ರಕರಣದ ಎಲ್ಲವನ್ನೂ ಪರೀಕ್ಷಿಸುತ್ತ ಅಳೆಯುತ್ತ ಇದ್ದು ಅದರ ಆಕೃತಿಯಲ್ಲಿ ಸೇರಿಕೊಳ್ಳುತ್ತದೆ.

ಇದು ಕೃತಿವಿಧಾನದಲ್ಲಿ ನಡೆಯುವ ವಿಮರ್ಶನವಾದರೆ ಅವನೇ ಆಮೇಲೆ ಬೇರೆ ಸಮಯಗಳಲ್ಲಿಯೋ ಬೇರೆ ಮನಸ್ಸಿನಲ್ಲಿಯೋ ತನ್ನ ಕೃತಿಯನ್ನು ಅವಲೋಕಿಸಿದಾಗ ಅಲ್ಲಿನ ಕಸಬುದಾರಿಕೆ, ಕ್ರಿಯಾರಚನೆ, ಪದಗುಂಫನ, ಅಂಗಾಂಗಸಾಮರಸ್ಯ, ಭಾವವ್ಯಂಜನಗಳಲ್ಲಿ ಅವನಿಗೇ ತೃಪ್ತಿಯೋ ಅತೃಪ್ತಿಯೋ ಆಗಬಲ್ಲುದು. ಅದೂ ವಿಮರ್ಶೆಯೇ. ಹಾಗೆಯೆ ತನ್ನೆಲ್ಲ ಕೃತಿಗಳಲ್ಲಿ ಇಂಥವು ಉಳಿದರೆ ಸಾಕು, ಬೇರೆ ಯಾವುದು ಇಲ್ಲವಾದರೂ ಚಿಂತೆಯಿಲ್ಲವೆಂದು ಅವನು ಒಪ್ಪುವುದಾದರೆ ಆಗಲೂ ಇದೇ ವ್ಯಾಪಾರದ ಪ್ರಕಾಶವಿರುತ್ತದೆ. ಅವನ ಬೆಲೆ ತೂಕಗಳ ಅರಿವು —ಅವನ್ನು ನಾವು ಒಪ್ಪಬೇಕೆಂದಿಲ್ಲ — ನಮಗೆ ಆಮೂಲಕ ಮುಂದಟ್ಟಾಗುವುದು. 'A thing of Beauty is an eternal joy' — ಎಂದು ಮೊದಲು ಬರೆದ ಕೀಟ್ಸ್‌ಕವಿ 'A thing of Beauty is a joy for ever' ಎಂದು ಮಾರ್ಪಡಿಸಿದಾಗ; ಟೆಸ್ ಕಾದಂಬರಿ ಮುಗಿಸಿ ಸ್ವಲ್ಪ ಕಾಲ ಕಳೆದ ಮೇಲೆ ಕಡೆಯದಾಗಿ, 'Justice was done and the President of the Immortals ended his sport

with Tess!' ಮುಂತಾಗಿ ಒಂದು ಹೊಸ ವಾಕ್ಯವನ್ನು ಕಾದಂಬರೀಕಾರ ಹಾರ್ಡಿ ಸೇರಿಸಿದಾಗ; ಅಥವಾ ಮೊದಲು ಬರೆದಿದ್ದ ಹಲವು ಭಾಗಗಳನ್ನು ಕೃತಿಕಾರನಾವನೇ ಆಗಲಿ ತಾನೇ ಕತ್ತರಿಸಿ ಮೊಟಕು ಮಾಡುವಾಗ, (ಉದಾ— 'The Waste Land' ಎಂಬ ಪ್ರಖ್ಯಾತ ಕೃತಿಯನ್ನು ಎಸಾ ಪೌಂಡ್ ಕತ್ತರಿಸಲು ಟಿ. ಎಸ್. ಎಲಿಯಟ್ಟರು ಒಪ್ಪಿದಾಗ) ಇಂಥದೇ ವಿಮರ್ಶನಕಾರ್ಯ ನಡೆಯುವುದು.

ಇದು ಕೃತಿಕಾರನ ಮಾತಾಯಿತು. ಕೃತಿ ಪ್ರಕಟವಾದ ಕೂಡಲೆ ಅದು ಇತರರ ಕಣ್ಣಿಗೆ, ಕಿವಿಗೆ ಬೀಳುವುದು; ಅವರಿಗೆ ಒಪ್ಪೊ ತಪ್ಪೊ ಆಗುವುದು. ಒಪ್ಪುವವರ ಕಾರಣ ಒಂದಾದರೆ ತಪ್ಪೆನ್ನುವವರ ಕಾರಣ ಬೇರೆ. ಕೃತಿಕಾರನೇ ಓದಿ ಜನತೆಗೆ ಅದರ ಪರಿಚಯ ಮಾಡಿ ಕೊಡುತ್ತಿದ್ದರೆ ಅವನಿಗೇ ತಿಳಿಯದೆ ಮೂಡುವ ಮುಳುಗುವ ಅವನ ಧ್ವನಿವಿನ್ಯಾಸ, ಅಭಿನಯ, ವಿವರಣೆಗಳು ಅದರ ಮೇಲೆ ಹೆಚ್ಚಿನ ಬೆಳಕನ್ನು ಬೀರಬಹುದು.† ತನ್ನ ಕೃತಿಯಲ್ಲಿ ಏನನ್ನು ಪ್ರತಿಫಲಿಸಿದ್ದೇನೆ ಎಂದುಕೊಂಡಿರುವನೋ ಅದನ್ನು ಸೂಚಿಸಿ ಹಾಯಿಸುವ ಅವಕಾಶ ಅಲ್ಲಿ ಸಹಜವಾಗಿ ಉಂಟು. ಆದರೆ ಅವನ ಮನಸ್ಸಿನಲ್ಲಿ ಇದ್ದಿರಬಹುದಾದ್ದು ಕೃತಿಯಲ್ಲಿ ಸಾಕಾದಷ್ಟು ಸ್ಫುಟವಾಗದಿರಲೂ ಬಹುದು. ಇತರರು ಅಲ್ಲಿ ಕಾಣುತ್ತಿದೆಯೆನ್ನುವುದು ಅವನ ಮನಸ್ಸಿಗೆ ಬೇಸರ ತರಬಲ್ಲದು. ಇನ್ನೊಬ್ಬನು ಆ ಕೃತಿಯನ್ನು ಕುರಿತು ವಿವರಣೆ, ವ್ಯಾಖ್ಯಾನ ಮಾಡುವಾಗ ಈ ಎರಡನೆಯುವನ ಅಭಿಮಾನ, ಕಾಣ್ಕೆ, ಅಭಿರುಚಿ, ವಿವೇಕಗಳ ಪ್ರವೇಶವಾಗುತ್ತದೆ. ಕೃತಿಕಾರನಿಗೆ ಒಳಕತೆ ಗೊತ್ತು: ತನ್ನ ಅಂತರಂಗ ವ್ಯಾಪಾರದ ತಿಳಿವಳಿಕೆ ತನಗೇ ಇರುವುದರಿಂದ. ಆ ಜಾಡು ಹಿಡಿದು ಎರಡನೆಯುವನು ಮಿಡಿಯ ಬಲ್ಲನಾದರೆ, ನುಡಿಯ ಬಲ್ಲನಾದರೆ ಸರಿ. ಇಲ್ಲವಾದರೆ ಅದು ಕೇವಲ ಅನ್ಯನ ನುಡಿತವಾಗುತ್ತದೆ. ಇಲ್ಲಿಗೆ ಬೇರೆ ಎಣಿಕೆ, ಬೇರೆ ದೃಷ್ಟಿ ಕಾಲಿಟ್ಟಿತು. ಅನ್ಯನು ಎಷ್ಟಾದರೂ ಹೊರಗಿನವನು. ಕೃತಿ

† ಪದ್ಯ, ನಾಟಕಗಳನ್ನು ಸ್ವಲ್ಪ ಗಟ್ಟಿಯಾಗಿ ಓದಿಕೊಳ್ಳಬೇಕು. ಉಚ್ಚರಿಸುವ ಕೊರಲು, ಕೇಳುವ ಕಿವಿ ಇವಕ್ಕೆ ಬರಿಯ ಕಣ್ಣೋದಿನಿಂದ ಬರುವುದಕ್ಕಿಂತ ಹೆಚ್ಚಿನ ಸುಖ ತೋರುವುದು. ಮೇಲೆ ಹೇಳಿದ ಧ್ವನಿ ಅಭಿನಯಾದಿಗಳು ಇಲ್ಲಿ ಸಹಚರಿಗಳು. ಬರೆದುದನ್ನು ಸಹಜವಾಗಿ ಓದುವಾಗ ಕವಿಯ ಮನೋದ್ಯೋತಕವಾಗಿ ಒಡಹುಟ್ಟುವ ಅಂಗವ್ಯಾಪಾರ.

ಯಿಂದ ಮಾತ್ರ ಇವನ – ನಮ್ಮ – ಅರ್ಥಗ್ರಹಿಕೆ, ಪ್ರೀತಿ ಹುಟ್ಟುತ್ತವೆ. ಇವನಿಗೆ ಇದೇ ಕೃತಿಕಾರನ ಹಿಂದಿನ ಎಲ್ಲ ಕೃತಿಗಳ ಪರಿಚಯವಿದ್ದು ಬೇರೆ ಯಾಗಿಯೂ ಕವಿಮನಸ್ಸಿನ ಆಪ್ತಸಂಪರ್ಕವಿದ್ದ ಪಕ್ಷದಲ್ಲಿ ಇವನ ವ್ಯಾಖ್ಯಾನ ಹೆಚ್ಚು ಸಂಪನ್ನವಾಗಿಯೂ ಅಧಿಕಾರಯುತವಾಗಿಯೂ ಆದೀತು; — ಇವನಲ್ಲಿ ವಿವೇಚನಾಶಕ್ತಿ, ಸಹೃದಯತೆ* ಇದ್ದ ಪಕ್ಷದಲ್ಲಿ. ಇಲ್ಲವಾದರೆ ಇವನು ಏನು ಹೇಳಲಿ, ಹೇಗೆ ಹೇಳಲಿ ಇವನ ಅಭಿಪ್ರಾಯ ಅಷ್ಟು ಗ್ರಾಹ್ಯವಲ್ಲ.

ಕೃತಿಕಾರನಿಂದಲೇ ಕೃತಿ ಎಂಬುದು ನಿಜವಾದರೂ ಅದರ ನಿರ್ಮಿತಿ ಯಾಗುವವರೆಗೆ ಮಾತ್ರ ಆ ಕ್ರಿಯೆ ಅವನಿಗೆ ಒಳಪಟ್ಟದ್ದು: ತಾಯಿ ಹೆರುವ ಮಗುವಿನ ಹಾಗೆ. ಅದು ಬೇರೆಯಾಗಿ ಅಲಂಕಾರಗೊಂಡು ಹೊರಗೆ ಬಂದ ಮೇಲೆ ಅವನ ಕೈಗೆ ಮೀರಿತು. ಆಗ ಅವನ ಮಾತಿನ ಬೆಲೆಗೂ ಮಿತಿ ಯುಂಟು. ಅದನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಇತರರ ನೆರವಿಗೆ ಬರುವುದಾದರೆ ಮಾತ್ರ ಆ ಮಾತಿಗೆ ಬೆಲೆ, — ಅದಕ್ಕೆ ಒಪ್ಪುತ್ತದೆಯೋ ಇಲ್ಲವೋ ಎಂಬುದರಿಂದ. ಒಪ್ಪದಾದರೆ ಆ ಮಾತು ಅನಗತ್ಯ. ಹಿಂದಿನ ಅವನ ಕೃತಿಗಳಿಗಿಂತ ಈ ಹೊಸದು ಮೇಲಾಗಿದ್ದರೆ ಕೀರ್ತಿ ಹೆಚ್ಚುವುದು; ಹಿಂದಿನಂಥದೇ ಇನ್ನೊಂದನ್ನು ರಚಿಸಿದ್ದರೆ ಇದ್ದ ಕೀರ್ತಿ ಮಾಸೀತು, ಹೊಸ ಮೆಚ್ಚಿಕೆ ಬಾರದು; ಹಿಂದಿನ ಕೀರ್ತಿ ಕುಂದಬಹುದು, ಇದು ಕೀಳಾದರೆ ಅಥವಾ ಹೊಸಗುಣ ಮೆರೆಯದಿದ್ದರೆ. ಅವನ ಕಲೆಯಲ್ಲಿ, ಈವರೆಗೂ ಸುಳಿವೇ ಕಾಣ ದಿದ್ದ, ಬೇರೊಂದು ಮುಖ ಕಾಣಿಸಿದರೆ ಕೃತಿಕಾರನ ವ್ಯಕ್ತಿವಿಶೇಷದಲ್ಲಿಯೇ ಹೊಮ್ಮಿದ ಬೇರೆ ಸ್ಪಷ್ಟ್ಯಂಶದ ದರ್ಶನವಾಗುತ್ತಿದೆ ಎನ್ನಬೇಕು. ಇದೆಲ್ಲ ವಿಮರ್ಶೆಗೆ ಗೋಚರವಾಗುವ ಸಂಗತಿ.

ಯಾವುದು ಹೇಗೇ ಆಗಲಿ ಕೃತಿಯಲ್ಲಿ–ಕೃತಿಯಿಂದ–ಕಾಣಿಸುವಷ್ಟು ಮಾತ್ರ ಅವನ ಯೋಗ್ಯತೆ; ಅದರ ಅರ್ಥವಂತಿಕೆ. ಅಲ್ಲಿಲ್ಲದ ಅಂಶ ಸದ್ಯಃ ಇಲ್ಲವೆಂದೇ ಸಂಜ್ಞೆ. 'ಇನ್ನು ಕೃತಿಯನ್ನು ನೋಡುತ್ತಿರುವ ಜನ ಬೇರೆ ಬಗೆ ಯವರೂ ದೂರದವರೂ ಬೇರೆಕಾಲ ಬೇರೆದೇಶದವರೂ ಆದಾರು. ಅವರ

---

* ಯೇಷಾಂ ಕಾವ್ಯ ಅನುಶೀಲನ ಅಭ್ಯಾಸವಶಾತ್ ವಿಶದೀಭೂತೇ ಮನೋ ಮುಕುರೇ ವರ್ಣನೀಯ ತನ್ಮಯೀಭವನ ಯೋಗ್ಯತಾ ತೇ ಸಹೃದಯ ಸಂವಾದ ಭಾಜಃ ಸಹೃದಯಾಃ - ಎಂದು ಸಹೃದಯತ್ವದ ಸ್ವರೂಪವನ್ನು ಅಭಿನವಗುಪ್ತರು ವಿಶದಪಡಿಸಿದ್ದಾರೆ.

ಬುದ್ಧಿಯ ಚುರುಕು, ಸಂಸ್ಕಾರ, ರಸಜ್ಞತೆ ಹೇಗಿದ್ದರೆ ಅವರ ಸ್ವೀಕಾರ ಹಾಗೆ ಮೇಲು, ಬೀಳು ಆಗುತ್ತದೆ. ಉತ್ತಮರೆನಿಸಿಕೊಂಡ ವಿಮರ್ಶಕರಲ್ಲಿ ಕೂಡ ಕೆಲವು ತೆರದ ಕೃತಿಯನ್ನೊ, ದೃಷ್ಟಿಯನ್ನೊ, ರೀತಿಯನ್ನೊ ಕುರಿತು ಬಗೆಗುರುಡು ಇರುವುದು ಅಸಾಮಾನ್ಯವೇನೂ ಅಲ್ಲ. ಎಲ್ಲಿಯೇ ಆಗಲಿ ಮೊದಲು ವಿಮರ್ಶಕನ ಮನಸ್ಸು ಕೃತಿಯ ಕಡೆ ಸುಮುಖವಾಗಿ ಓಲಬೇಕು*; ಆದರ ಶ್ರುತಿಗೆ ತೂಗಬೇಕು. ಇಲ್ಲವಾದರೆ ಕೃತಿಯ ಪ್ರಭಾವ ಅವನ ಮೇಲೆ ಬೀಳದು. ಪೂರ್ವಗ್ರಹಿಕೆಗಳ ಕಾರಣದಿಂದಲೊ ಬೇರೆ ಮೋಹ ಕಾರ್ಪಣ್ಯಗಳ ಕಾರಣದಿಂದಲೊ ಅವನ ತಾಳ್ಮೆ, ತೂಕ ತಪ್ಪಿದರೆ ಗ್ರಹಿಕೆ ಕೆಡುವುದು. ವಿಮರ್ಶೆಗೆ ಆಗತ್ಯವಾದ ಅನುಕೂಲಸನ್ನಿವೇಶ ಇಲ್ಲವಾಗುವದು.

ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ: ಇಂದು ಬಾನುಲಿಯನ್ನು ರೂಪಿಸಿ ಕೇಳಿಸುವ ರೇಡಿಯೊ ಪೆಟ್ಟಿಗೆಗಳಿವೆ. ಪ್ರಪಂಚದ ಎಲ್ಲ ಕಡೆಗಳಿಂದಲೂ ಮಾತು, ಕತೆ, ನಾಟಕ, ಸುದ್ದಿ, ಸಂಗೀತ, ಮೊರೆ ಆ ಮೂಲಕ ಕೇಳುತ್ತಿರುತ್ತವೆ. ಲೋಕದಲ್ಲಿ ಏನೇನು ನಡೆಯುತ್ತಿದೆಯೋ ಅದನ್ನು ನಮ್ಮ ಕಿವಿಗೆ ಹಾಕಲು ದಿನದ ೨೪ ಗಂಟೆಯೂ ಒಂದಲ್ಲದಿದ್ದರೆ ಮತ್ತೊಂದು ಕಡೆಯಿಂದ ಯತ್ನ ನಡೆದಿರುತ್ತದೆ. ಮನಸ್ಸು, ಕಿವಿ ತೆರೆದಿರುವವರೆಲ್ಲ ಅವನ್ನು ಕೇಳಬಹುದು. ಗ್ರಹಿಸಿ ಚರ್ಚೆ ಮಾಡಬಹುದು, ವಿನೋದಪಡಬಹುದು, ಕಾಲಯಾಪನೆ ಮಾಡಬಹುದು. ಎಲ್ಲವನ್ನೂ ಕೇಳುವುದು ಯಾರಿಗೂ ಶಕ್ಯವಿಲ್ಲ. ಆದರೆ ನಾವು ಪ್ರತಿಯೊಬ್ಬರೂ ಕೇಳುವುದು ಯಾವುದನ್ನು? ನಮಗೆ ಬೇಕಾದುದನ್ನು; ನಮಗೆ ಅರ್ಥವಾಗುವಷ್ಟನ್ನು. ಉಳಿದುದು ಇಲ್ಲವೆಂದಲ್ಲ; ಚೆನ್ನವಲ್ಲವೆಂದಲ್ಲ.† ಅದು ನಮಗೆ ತಿಳಿಯದು ನಮಗೆ ಬೇಕಿಲ್ಲ. ಆದ್ದರಿಂದ ಅಲ್ಲಿ ನಮ್ಮ ವಿಮರ್ಶೆಯೂ ಸಲ್ಲದು. ಇದಲ್ಲದೆ ಒಬ್ಬೊಬ್ಬರಿಗೆ ಒಂದೊಂದರಲ್ಲಿ ಪ್ರೀತಿ, ಪಕ್ಷಪಾತ, ಬಯಕೆ ಇರುತ್ತವೆ. ಕ್ರಿಕೆಟ್ ಆಟದ ವಿವರಗಳನ್ನು ಕೇಳುವವರಿಗೆ ಲೋಕದ ಇತರ ಸುದ್ದಿ ಅಸಾರ. ಭಾರತದ ಉತ್ತರಾದಿ ಸಂಗೀತದ ಸುಖಲಯ ಒಪ್ಪಿದವರಿಗೆ

---

* ಮನಸ್ಸಿನ ಒಂದು ಸ್ಥಿತಿಯಲ್ಲಿ ರುಚಿಸದೆ ಇದ್ದ ಕೃತಿಯೂ ಭಾವಗಳೂ ಇನ್ನೊಂದು ಮನಸ್ಸಿನಲ್ಲಿ ಪ್ರಿಯವಾಗಬಹುದು.

† ಒಂದು ಅಸ್ತಿತ್ವದ (Existence) ವಿಚಾರ, ಇನ್ನೊಂದು ಬೆಲೆಗಳ ವಿಚಾರ.

ದಕ್ಷಿಣಾದಿ ಸಂಗೀತ ಒರಟು ಗದ್ದಲದಂತೆ ಕೇಳಿಸುವುದಂತೆ; ಗಾಡಿಯಿಂದ ಇಟ್ಟಿಗೆ ಸುರಿದ ಹಾಗಿರುತ್ತದಂತೆ. ದಕ್ಷಿಣದವರಿಗೆ ಉತ್ತರದವರ ಅಲಸಗತಿ, ಹೆಣ್ಣವಿ ಬೇಸರ ತರುತ್ತವೆಯಂತೆ. ಈ ಇಬ್ಬರಿಗೂ ಪಾಶ್ಚಾತ್ಯರ, ಚೀನಿ ಇರಾನಿಯರ ಗಾನ ಸುತರಾಂ ಸೊಗಸದು; ದುಸ್ಸಹ. ಹಾಗಾದರೆ ಸರ್ವ ಜನವ್ಯಾಪ್ತಿ ( Universal ) ತೃಪ್ತಿ ಎಂದರೇನು? ಇವೆಲ್ಲ ಅಭ್ಯಾಸ, ಅಭಿರುಚಿ, ಪಕ್ಷಪಾತಗಳ ಪ್ರಪಂಚ. ಇಂಥಲ್ಲಿ ವಿಮರ್ಶೆಯ ವ್ಯಾಪ್ತಿ ಸಂಕುಚಿತವಾಗುವುದು. ಇಷ್ಟು ಸರಿ: ಯಾವುದನ್ನು ಕೇಳಬೇಕಾದರೂ ಅದರ ಅಲೆಯಳತೆಗೆ ಬಾನುಲಿಯ ಯಂತ್ರವನ್ನು ತಿದ್ದಿಕೊಳ್ಳಬೇಕು. ಆ ಶ್ರುತಿಗೆ ಮಾತ್ರ ಆ ಗಾನ, ಆ ಸುದ್ದಿ, ಆ ಕೇಂದ್ರ ಕೇಳಿಸೀತು. ಒಳ್ಳೆಯ ಯಂತ್ರವನ್ನು B.B.C. ಗೆ ಶ್ರುತಿ ಮಾಡಿದರೆ ಮೈಸೂರು ಕೇಂದ್ರದ ಸುದ್ದಿ ಹೇಗೆ ದೊರೆತೀತು? ಹೀಗೆ, ಉತ್ಪನ್ನವಾಗುವ ಕಡೆ ಸುದ್ದಿಯೂ ಸಂಗೀತವೂ ಸರಿಯಾಗಿ ಉತ್ಪನ್ನವಾಗಬೇಕು. ನಮ್ಮ ಶ್ರುತಿ ಸರ್ವಾಂಶದಲ್ಲಿಯೂ ಹೊಂದಬೇಕು. ಇಷ್ಟಾದ ಹೊರತು ಪ್ರಯೋಜನವಿಲ್ಲ. ಸ್ಥೂಲವಾಗಿ ಈ ಬಗೆಯ ಪ್ರಸರವುಳ್ಳದ್ದು ಕೃತಿಪ್ರಕಾಶನ ಕೂಡ. ಬಯಸಿ ಕೇಳುವ ಮನಸ್ಸು ಹೊಂದಿದರೆ ಅದರ ಅರ್ಥವೂ ಆ ಬಗ್ಗೆ ವಿವೇಚನೆಯೂ ಶಕ್ಯ; ಇಲ್ಲವಾದರೆ ಇಲ್ಲ. ಬಹುಮಟ್ಟಿಗೆ ಇದು ವಿಮರ್ಶೆಯ ಪೂರ್ವರಂಗ.

ಅಲ್ಲಿ ಉತ್ಪತ್ತಿಯಾಗುವುದೇನು? ಅತ್ತ ಅವರು ಕಳಿಸುತ್ತಿರುವೆವೆನ್ನುವುದು. ಇಲ್ಲಿ ಕೇಳುವುದೇನು? ಪರಿಣಾಮದಲ್ಲಿ ನಮ್ಮ ಯಂತ್ರದ ಮೂಲಕ ನಮಗೆ ಕೇಳಿಸುತ್ತಿರುವ ನಾದದ ಅಲೆಮೊರೆತಗಳು, ಅವುಗಳ Pitch relations. ಅತ್ತ ಹಾಡುವವರ ಮನೋಧರ್ಮವೂ ಕೊರಲೂ ಸರಿಯಾಗಿಲ್ಲದೆ, ಧ್ವನಿಪ್ರಸಾರಣ ಯಂತ್ರದ ಶಿಲ್ಪಿಗಳು ಅದನ್ನು ಸರಿಯಾಗಿ ಪ್ರಸಾರ ಮಾಡದೆ, ದಾರಿಯ ವಾತಾವರಣ ಹದಗೆಟ್ಟು, ಇತ್ತ ನಮ್ಮ ಸ್ವೀಕರಣ ಯಂತ್ರ ಸರಿಯಾಗಿಲ್ಲದಿದ್ದರೆ– ನಮ್ಮ ಶ್ರುತಿ ಅಯುಕ್ತವಾದರೆ ಸಂಗೀತದ ಇಂಪು ಲಭಿಸದು ಎಂಬೆವಲ್ಲವೆ? ಯಾವಾಗ ಅದರ ಪ್ರಭಾವ ನಮ್ಮ ಮೇಲೆ ಬೀಳಲಿಲ್ಲವೊ ಅದರ ಗುಣಾವಗುಣ, ನಯ ಅನಯಗಳ ವಿಚಾರ ನಮಗೆ ಸಲ್ಲದು. ಅದರ ಅರ್ಥವೇನೆಂಬುದೇ ನಮಗೆ ಸರಿಯಾಗಿ ಗೊತ್ತಾಗದ ಮೇಲೆ ಅದಕ್ಕೆ ಬೆಲೆಕಟ್ಟುವ ಯತ್ನ ಹೇಗೆ ಸರಿಯಾದೀತು? ಅರ್ಥ ಮೊದಲು, ಬೆಲೆ ಆಮೇಲೆ.

ಯಾರ ಅರ್ಥ? ಯಾವುದರ ಅರ್ಥ? ಯಾರಿಗೆ ಅರ್ಥ? ಯಾವ ಸನ್ನಿವೇಶದಲ್ಲಿ? ಎಂಬ ಪ್ರಶ್ನೆಗಳು ಮೂಲಭೂತವಾದವು. ಅರ್ಥ ಕೃತಿಕಾರನದೆನ್ನುವುದು; ಕೃತಿಯಲ್ಲಿ ಆಕೃತಿಗೊಂಡಿರುವವನುಟ್ಟಿನ ಅರ್ಥ. ಅದು ಅವನ ಉದ್ದೇಶ, ಅವನು ಬಳಸುವ ಶಬ್ದದ್ರವ್ಯ, ಉಪಕರಣ ಸಾಮಗ್ರಿ, ಅವನ ಕಾವ್ಯಾನುಭವ, ಅಭ್ಯಾಸ, ಕುಶಲತೆ, ಸಂತತ ಅವಧಾನ-ಇವುಗಳಿಗೆ ತಕ್ಕಂತೆ ಕೃತಿಯಲ್ಲಿ ಕಾಣಿಸುವುದು. ಅವನ ಸಮದ ಯೋಗ್ಯತೆಯೂ, ಬುದ್ಧಿ ಅನುಭವಗಳೂ ಉಳ್ಳವನಿಗೆ ಅವು ಕಾಣುವಂತಾದರೆ ಅವನು ಕೃತಕೃತ್ಯ. ಅಲ್ಲಿ ಆ ಅರ್ಥ ಹೊಳೆಯದಿದ್ದರೆ, ಬೇರೆ ಅರ್ಥ ಹೊಳೆದರೆ ಕೃತಾರ್ಥನಲ್ಲ. ಸಾಮಾನ್ಯ ಗದ್ಯದ ವಿಷಯ ಒಂದಾದರೆ, ಪದ್ಯದಲ್ಲಿ ಸಾಹಿತ್ಯ ಬಳಸುವ ಮಾತು ಬೇರೆ ಒನಪು ಛಂದಗಳಲ್ಲಿ ನಡೆಯುವುದು. ಅದರ ಓಟ, ವರ್ಣಗಳ 'ಆನಂತರ್ಯ ಸಂಗತಿ' ಮಾತಿಗೂ ಅರ್ಥಕ್ಕೂ ಬೇರೊಂದು ಲಯಗತಿಯನ್ನೂ ಶಕ್ತಿಯನ್ನೂ ಕೊಡುವುದು. ಪದ್ಯದ ಮಾತುಗಳನ್ನು ಗಮಕಕ್ಕೆ ಬಳಸಿದರೆ, ಅದಕ್ಕೆ ಇನ್ನೊಂದು ಭುಜ ಹುಟ್ಟಿಕೊಳ್ಳುವುದು. ಅಭಿನಯ ಸೇರಿಕೊಂಡರೆ ಇನ್ನೊಂದು ಅವಯವಸಂಪನ್ನತೆ ದೊರೆಯುವುದು†. ಕೃತಿಕಾರನ ಮನಸ್ಸಿನಲ್ಲಿದ್ದದ್ದು ಸ್ವೀಕರಿಸುವವನಲ್ಲಿ ಅದೇ ರೀತಿ ಮೂಡಿ ಅರ್ಥವತ್ತಾದರೆ ಅದು ಸಮಾನಸತ್ವದ ಸ್ವೀಕಾರ; ಆಗದೆ ಹೋದರೆ ಕೃತಿಕಾರನ ಲೋಪದೋಷ, ಕೃತಿಯ ಲೋಪದೋಷ, ಸ್ವೀಕರಿಸುವವನ ಲೋಪದೋಷ — ಈ ನೆಲಸಿನಲ್ಲಿ ಎಲ್ಲಿಯೋ ಹುಟ್ಟಬೇಕು, — ನ್ಯೂನತೆ, ಅತಿರೇಕ. ಆದ ಕ್ರಿಯೆಯ ನುಡಿತಕ್ಕೆ ಸಂಬಂಧಿಸಿದ ಸಂಗತಿ ಅದು; ಮೂಲ ಉದ್ದೇಶವ್ಪು ಕೂಡ ಅಲ್ಲ.

ಅರ್ಥಗ್ರಹಣದಂತೆ ವಿವೇಚನೆ ರೂಪಗೊಳ್ಳುವುದು. ವಿವೇಚನೆಯಲ್ಲಿ ಬುದ್ಧಿಕ್ರಿಯೆಗೆ ಪ್ರಾಧಾನ್ಯ. ಅರ್ಥ ಹಾಯ್ದು ಮೇಲಲ್ಲವೆ‡ ಅದಕ್ಕೆ ಬೆಲೆ

† ಇವುಗಳ ನೆರವು ಸ್ವತಂತ್ರವಾಗಿ ಆದರೆ ಬೇರೆ ಎರಡು ಕಲೆಗಳ ಸಹಾಯ ಅರ್ಥ ವಿವರಣೆಗೆ ದೊರೆತಂತೆ. ಅವು ಸಾಹಿತ್ಯ ರಸವ್ಯಂಜನೆಗೆ ಸರಿಯಾಗಿ ಹೊಂದಬೇಕು ಮಾತ್ರ. ಅವು ಸಹಾಯಕ, ಪೋಷಕ ಮಾತ್ರ. ಅತಿ ಸಂಗೀತ, ಅತಿ ಅಭಿನಯದ ಅಥವಾ ಅಪರಿಣತವಾದ ಅಯುಕ್ತವಾದ ಆ ನೆರವು ವಿಫಲ. ಕೋಟಿನ ಲೈನಿಂಗ್ ಹೇಗೆ ಸುಖಕರವೋ ಹಾಗೆ ಮಾತ್ರ ಆದರೆ ಅವು ಸೊಗಸುವುವು. ಅವಕ್ಕೆ ಪ್ರಾಧಾನ್ಯ ಉಂಟಾಗಿ ಸಾಹಿತ್ಯ ಅಧೀನ ಅಂಗವಾದರೆ ಕಲೆಯೇ ಬೇರೆಯಾಯಿತು. ಇಲ್ಲಿಯೂ 'ಕರ್ಮಸು ಕೌಶಲ'ವೇ ಯೋಗ. ಔಚಿತ್ಯವೇ ಮಿತಿಯಾಗುವುದು.

‡ ಇಲ್ಲಿ ಕಾಲದ ಅಂತರ ಇರಬಹುದು, ಇಲ್ಲದಿರಬಹುದು.

ಕಟ್ಟುವ ಕಾರ್ಯ? ಹಣದಲ್ಲಿ ಅಳೆವ ಬೆಲೆ ಅಲ್ಲ, ಗುಣದ ಎಣಿಕೆ. ಗುಣವೂ ಸಾಹಿತ್ಯದ ಲೆಕ್ಕಕ್ಕೆ ಸಲ್ಲುವ ಗುಣ. ಬೆಲೆ ಕಟ್ಟುವವರು ಯಾರು? ಈ ಬೆಲೆ ಬೆಲೆಯೇಕಾಯಿತು? ಬೆಲೆಗಳು ಯಾವವು? ಇಂಥಿಂಥ ಬೆಲೆ ಇಲ್ಲಿ ಇಲ್ಲಿ ಸರಿಯೆ, ಸಾಧುವೆ? ಎಂಬ ವಿವೇಚನೆ ತಲೆದೋರುವುವು§.? ಯಾರು ಯಾರು ಆ ಕೃತಿಯನ್ನು ಅರ್ಥಮಾಡಿಕೊಂಡು ಅದು ಹೀಗೆ, ಇದು ಹಾಗೆ, ಇದು ರಸವತ್ತಾಗಿದೆ ಅಥವಾ ಆಭಾಸವಾಗಿದೆ ಎನ್ನುವರೋ ಅವರೆಲ್ಲ ಆ ಮಟ್ಟಿಗೆ ವಿಮರ್ಶಕರೇ. ಅವರಿಗಾದ ಅರ್ಥವೆಲ್ಲ ಅರ್ಥವೇ. ಅವರು ಕಟ್ಟುವ ಬೆಲೆಗಳೆಲ್ಲ ಬೆಲೆಗಳೇ; ಕೃತಿಯ ಅರ್ಥದ ಚರಿತ್ರೆಯಂತೆಯೇ ಈ ಬೆಲೆಗಳ ಮತ್ತು ಈ ವಿಮರ್ಶೆಯ ಚರಿತ್ರೆ ಒಂದು ಅಖಂಡ ಪ್ರಸರ.

ಈ ಬೆಲೆ ಈ ವಿಮರ್ಶೆಗಳಲ್ಲಿ ತಾರತಮ್ಯವುಂಟು. ಒಬ್ಬರಿಗೆ ಆಗುವ ಅರ್ಥ ಸ್ವಲ್ಪ; —ಅದಕ್ಕೆ ಅವರ ಎಳೆ ವಯಸ್ಸೊ, ಅಪಕ್ವತೆಯೊ, ಮಡ್ಡಿತನವೊ ಕಾರಣವಿರಬಹುದು ಒಬ್ಬರಿಗೆ ಅತಿಶಯ, ತೋರಬಹುದು — ಅವರ ಮನಸ್ಸು ಸಜಾತೀಯವಾದ್ದರಿಂದ ಅಥವಾ ಲಲಿತವಾದ, ಆರ್ದ್ರವಾದ ಕಾರಣದಿಂದ. ವಿಲಕ್ಷಣವಾಗಬಹುದು, –ಗ್ರಹಿಸುವ ಬುದ್ಧಿಯ ವಕ್ರತೆಯಿಂದಾಗಿ. ಒಬ್ಬರದು ಅವಿಚಾರ ರಮಣೀಯ; ಒಬ್ಬರದು ಆಳ, ಗಂಭೀರ, ಸ್ಫೂರ್ತಿ ತಿಳಿವಳಿಕೆಯಿಂದಾದ್ದು; ಒಬ್ಬರದು ಹೊರ ನೋಟ, ಇನ್ನೊಬ್ಬರದು ಒಳನೋಟ; ಒಬ್ಬರದು ಉಗ್ರ, ವಿರಸ, ವಿರುದ್ಧ; ಮತ್ತೊಬ್ಬರದು ಮೃದು ಸಂಸ್ಕಾರ. ನಯ ಉಳ್ಳದ್ದು. ಒಬ್ಬರ ಮನಸ್ಸಿಗೆ ಇಲ್ಲಿ ಬೇರೆ ಯಾವದೊ ಪ್ರತಿಮೆ ಕಾಣುವುದು. ಪ್ರಕಟವಾಗಿ ವಾಚ್ಯವೊ ವರ್ಣ್ಯವೊ ಆದದ್ದು ಅವರಿಗೆ ಒಂದು ಸಂಕೇತಮಾತ್ರ; ಒಬ್ಬರ ದೃಷ್ಟಿ ಏಕದೇಶವಾದ್ದು; ಇನ್ನೊಬ್ಬರದು ಸಾಕಲ್ಯವುಳ್ಳದ್ದು, ಸಮಗ್ರ, ಪೂರ್ಣ ಎಂದುಕೊಂಡದ್ದು†.

---

§ ಚಾಟುವಿಗೆ ಸರಿಯಾದ ವಿವೇಚನೆ ಭಾವಗೀತೆಗೂ, ಅದರದು ಇತಿಹಾಸಕಾವ್ಯ ನಾಟಕಗಳಿಗೂ, ಅವುಗಳದು ಜಾನಪದಗೀತೆ ಶಿಶುಗೀತೆಗಳಿಗೂ, ಇವೆಲ್ಲ ವಿಡಂಬನ ಅಥವಾ ವಿನೋದಕೃತಿಗಳಿಗೂ ಹೊಂದವು. ಆದ್ದರಿಂದ ವಿವೇಚನೆ ನಾಜೂಕಿಂದ ನಡೆಯಬೇಕು.

† ಯಾರ ದೃಷ್ಟಿ ಪೂರ್ಣ? ಪೂರ್ಣವೆನ್ನುತ್ತಿರುವ ನಾಲ್ಕಕ್ಕೆ ಘರ್ಷಣೆ ಬಂದರೆ ಗತಿ? ಯಾರ ವಿವೇಚನೆ ನಿರ್ಣಾಯಕ? ವಿಮರ್ಶೆಯಲ್ಲಿ ಕೊನೆಯೆಂಬುದುಂಟೆ? ಅಲ್ಲದೆ ಇಲ್ಲಿ ಪ್ರಾಮಾಣಿಕತೆಯ ಪ್ರಶ್ನೆಯೂ ಏಳುವುದು; ಏಳದಿರಬಹುದು. ಪ್ರಾಮಾಣಿ.

ಅಲ್ಲದೆ ತಜ್ಞರು ಉತ್ತಮೋತ್ತಮ, ಇದು ಕಲೆ ಸೌಂದರ್ಯಗಳ ಕೆನೆ, ತಿರುಳು ಎಂದು ಮೆಚ್ಚುತ್ತಿರುವುದು ಸಾಧಾರಣರಿಗೆ ಸಪ್ಪೆಯಾಗಿ ಐಲ್ಶೈಲಾಗಿ ಕಾಣಿಸಬಹುದು; ಅಲ್ಲಿನ ಸಾರಾಂಶವೂ ಅದರ ವೈಭವವೂ ಇವರಿಗೆ ಗೋಚರವಾಗದಿರುವುದುಂಟು. ಕೋಟಿ ಜನ ನೂರು ಕಾಲಗಳಲ್ಲಿ ಮೆಚ್ಚಿ ಕೈಚಪ್ಪಾಳೆ ಮೊಳಗಿಸಿದುದು ವಿದ್ವಾಂಸರಿಗೆ ಬಡ, ಪೇಲವ, 'ಬಾಜ಼ಾರಿ' ಎನ್ನಿಸಬಹುದು. ಹೆಚ್ಚುಕಾಲ ಹೆಚ್ಚು ಜನ ಮೆಚ್ಚಿದ ಕಾರಣದಿಂದ ಕೃತಿ ಹೆಚ್ಚು ಬೆಲೆಯುಳ್ಳದ್ದು ಎಂಬ ಎಣಿಕೆಯೂ ಪೂರ್ತಿ ಸಲ್ಲದು; ಹಾಗೆಯೇ ಮೆಚ್ಚುವವರೆಲ್ಲ ಒಂದೇ ಕಾರಣಕ್ಕಾಗಿ ಮೆಚ್ಚುವರೆಂಬುದೂ ನಿಜವಲ್ಲ. ಅಂಥ ಸಂಗತಿಗಳು ಶ್ರೇಷ್ಠ ಗುಣವಾಚಿಯಾಗಬೇಕಿಲ್ಲ * ಕೆಲವರು ಗುಹ್ಯ (Esoteric), ಸಾರಭೂತ (Quintessential), ನಯದ ನವುರುಳ್ಳದ್ದು (has finesse) ಎಂದಾಗ ಅದರ ಸೂಕ್ಷ್ಮ ವ್ಯಂಜನೆ ಸಾಮಾನ್ಯರಿಗೆ ವೇದ್ಯವಾಗದಿರುವುದು ಸಹಜ.

---

ಕತೆ ಯೆಂದರೆ ನೀತಿಧರ್ಮಕ್ಕೆ ಸಂಬಂಧಿಸಿದ ಎಣಿಕೆ ಅಲ್ಲ. ಮನಸ್ಸಿಗೆ ಸಹಜವಾಗಿ ತಟ್ಟಿದ್ದು. ಭಾವ ಪ್ರಾಮಾಣಿಕತೆ.

* I. A. Richards ಅವರ ಈ ಮಾತನ್ನೂ ಗಮನಿಸಬಹುದು.

There is a common opinion, sometimes very stiongly held, that a work which appeals to all kinds and all degrees of men is, therefore, proved to be greater, more valuable, than one which appeals only to some. There may be a confusion in this opinion. The sum of value yielded, since men are of different degrees the social value that is to say of such work, will naturally be greater. But it does not follow that the maximum value for the reader of the highest level need be greater. The common belief that it is necessarily greater, that the work of wide appeal must be in itself a more admirable thing than work which appeals only to those who discriminate finely is due to the assumption that it appeals everywhere for the same reasons and thus is shown to touch something essential and fundamental in human nature: P. 215. 'Principles...'

ಬೆಲೆಯ ತಾರತಮ್ಯಗ್ರಹಣ ವಿದಗ್ಧರಿಗೆ, ಪ್ರಬುದ್ಧರಿಗೆ ಮಾತ್ರ ಶಕ್ಯ. ಅದಕ್ಕೆ ಹೆಚ್ಚಿನ ಪರಿಪಾಕವೂ, ಶಿಕ್ಷಣವೂ ಆಗತ್ಯ.† ಈ ಎರಡು ವರ್ಗಗಳಲ್ಲಿಯೂ ಅತಿಗೆ ಹೋಗುವುದು ಸುಲಭ. ಇಬ್ಬರಿಗೂ ಉತ್ತಮವಾಗಿ ರುಚಿಸಿ ಜೀವಕಳೆ ಯಿಂದಿರುವ ಭಾಗ್ಯ ಹಲವು ಕೃತಿಗಳಿಗೆ ಬರುವ ಪುಣ್ಯವಲ್ಲ. ಹಾಗೆ ಬಂದವು ಅಮರ.

ಕಿರಿತರಗತಿಗಳ ವಿದ್ಯಾರ್ಥಿಗಳು ರಘುವಂಶವನ್ನೋ, ವರ್ಡ್ಸ್‌ವರ್ತ್ ಕವಿಯ 'ಡಾಫೊಡಿಲ್ಸ್' ಅನ್ನೋ, ಷೆಲ್ಲಿಕವಿಯ 'ಕ್ಲೌಡ್ಸ್' ಎಂಬುದನ್ನೋ ಓದಿದರೆ ಆ ಆ ಮನಸ್ಸಿನ ಮಟ್ಟಕ್ಕೆ ತಕ್ಕಂತೆ ಅರ್ಥವಾಗುತ್ತದೆ. ಹೆಚ್ಚು ಕಾವ್ಯ ಸಂಸ್ಕಾರವುಳ್ಳವರು ಓದಿದರೆ ಹೆಚ್ಚು ಸಾರವತ್ತಾಗುವುದು. ನಾನಾ ಸಾಹಿತ್ಯಗಳ ಪರಿಶ್ರಮವುಳ್ಳವರಿಗೆ ತೂಲನವೂ ತಾರತಮ್ಯಗಳೂ ಸ್ಫುರಿಸು ವುವು. ಕಸಬುದಾರನಿಗೂ, ಸಾಹಿತ್ಯ ಚರಿತ್ರಕಾರನಿಗೂ ಕಾಣುವ ಅಂಶ ಗಳು ಬೇರೆ; ಅಕ್ಷರಶಕ್ತಿ ಶಬ್ದಶಕ್ತಿಗಳನ್ನು ಕವಿ ಹೇಗೆ ಬಳಸಿದ್ದಾನೆ? ಅಲಂಕಾರ, 'ಅರ್ಥೌಚಿತಿ, ರಸಗತಿ, ವ್ಯಂಗ್ಯಚಮತ್ಕೃತಿ'ಗಳನ್ನು ಹೇಗೆ ನೆಯ್ದಿದ್ದಾನೆ? ಎಲ್ಲಿಯಹಾಗಿದೆ ಇಲ್ಲಿಯ ದೇಸಿ, ಮಾರ್ಗನವ್ಯತೆ, ಅರ್ಥ ವ್ಯಕ್ತಿ? ಯಾವುದರಿಂದ ಸ್ಫೂರ್ತಿಗೊಂಡಿದ್ದರೂ ತನ್ನದಾಗಿ ಹೇಗೆ ಸೌಂದ ರ್ಯವನ್ನು ಸಾಧಿಸಿದೆ? ಅಥವಾ ಹೇಗೆ ಯಾವ ಹೊಸದನ್ನೂ ಸಾಧಿಸದೆ ಮಡ್ಡಿ ಯಾಗಿದೆ? ಎಂಬ ಅಂಶಗಳು ಅಂಥವರಿಗೆ ಸ್ಪಷ್ಟವಾಗುವುವು. ಇದರಂತಹ ಬೇರೆ ಪ್ರಕರಣಗಳೂ ಸನ್ನಿವೇಶವೂ, ಇದರ ಸುತ್ತ ಪರಿಮಂಡಲವನ್ನು ಕಟ್ಟಿ ಈ ಪ್ರಕರಣದ ಸ್ನಿಗ್ಧತೆಯನ್ನು ಬೆಳಗುವುವು; ಇಲ್ಲಿನ ರಸಪುಷ್ಟಿಯನ್ನು ಅತಿಶಯಮಾಡುವುವು. ಕಾಲ ದೇಶಗಳ ಅಳತೆ ಅಳಿದು ಆ ಎಲ್ಲ ಸೌಭಾಗ್ಯ ಇಲ್ಲಿನ ಸಂಪದ್ಭೋಗಕ್ಕೆ ಒದಗುವುದು. ದೃಷ್ಟಿಕೋನ ಬೇರೆಯಾದರೆ ಸಂಪ್ರ ದಾಯಸ್ಥರಿಗೊ, ಪ್ರಗತಿಶೀಲರಿಗೊ, ಸಮತಾವಾದಿಗಳಿಗೊ, ಕೀರ್ತಿಸ್ಪರ್ಧಿ ಗಳಾದ ಪ್ರತಿಕಕ್ಷಿಗಳಿಗೊ, ವ್ಯಂಗ್ಯ ಸಂಧಾನದವರಿಗೊ, ಬೇರೆ ಅರ್ಥ, ವಿಲಕ್ಷಣ ಹೊಳೆವುವು.‡

---

† Value is Aristocratic and distinguishes between high and low ಎನ್ನುವುದೂ ಸಹಜ.

‡ "The orchestral and organ music of Milton's Poetry ಎಂದು ಒಬ್ಬರು ಮೆಚ್ಚಿದರೆ The Donkey-eared Milton ಎಂದವರು ಇಲ್ಲದೆ ಇಲ್ಲ.

ಯಾವ ಅರ್ಥ ಸರಿ ಯಾವದಲ್ಲ? ಯಾವ ಬೆಲೆ ಸರಿ ಯಾವದಲ್ಲ? ನಿರ್ಣಯಿಸುವವರು ಯಾರು? ಗೊತ್ತು ಮಾಡುವ ವಿಧಾನವಾವುದು? ಎಂಬ ಪ್ರಶ್ನೆ ಇಲ್ಲಿ ಸಹಜವಾದುದು. ಕೃತಿಯ ಸ್ವರೂಪಕ್ಕೆ ಹೊಂದುವಂತೆ–ವಿಪರೀತವಾಗಿ ಭಾವಿಸದೆ–ಸೌಹಾರ್ದದಿಂದ ಅನುಭವಿಸುತ್ತಿರುವವರಿಗೆ ಯಾವದೆಲ್ಲ ಹೊಳೆದು ಪ್ರಕಟವಾಗುವುದೋ ಯುಕ್ತವೆನಿಸುವುದೋ ಅದೆಲ್ಲ ಅದರ ಅರ್ಥಮಂಡಲ–ಅದೆಲ್ಲ ಬೆಲೆಯ ಕಲ್ಪನೆಯೇ. ಹೊಂದದ್ದು ಅನುಚಿತ, ವಿರಸ, ಅಸಂಗತ.

ಹೀಗೆ ಅರ್ಥವೆಂಬುದು ಕೃತಿಕಾರನ ಭಾವದಲ್ಲಿ ಅಡಗಿದ್ದು ಅದಕ್ಕೆ ಆಕೃತಿ ಕೊಡಲು ಅವನು ಬಳಸುವ ಸಾಮಗ್ರಿ, ಪ್ರತಿಭೆಯ ವಿವಿಧ ಕಲಾವಿಲಾಸ, ಸಂಸ್ಕಾರದ ನಯಸಂಪತ್ತಿ, ಕಲ್ಪನೆಯ ಉನ್ನತಿ, ಆಳ, ವಿಸ್ತಾರ, ಅದರ ಪದರ ಪದರಗಳಲ್ಲಿ ಆಡುತ್ತ ಅರ್ಥದ್ಯೋತನೆಗೆ ಆತುರವಾಗಿರುವ ಒಳ ಭಾವಗಳ ಒತ್ತಡ–ಇವೆಲ್ಲ ಎಂಥವು? ಇಲ್ಲಿನ ದರ್ಶನವಿಶೇಷ ಯಾವ ಸತ್ವದ್ದು? ಎಂಬುದರ ಮೇಲೆ ಹೊಂದಿಕೊಂಡು ಕಾವ್ಯಾನುಭವಕ್ಕೆ ಸಿಕ್ಕುತ್ತದೆ.

ಪರಿಶೀಲನೆ ಮಾಡುವಾಗ ಮೊದಲ ನೋಟಕ್ಕೆ ಕೃತಿ ತನ್ನ ಅಂತರಂಗ ವಿಶೇಷವನ್ನು ಮೆರಸದೆ ಹೋಗಬಹುದು; ಮೆಲುಕಿದಂತೆಲ್ಲ ಸೂಕ್ಷ್ಮಾಂಶಗಳು

---

Max Beerbohm ಅಂಥವರು ಶೆಲ್ಲಿಯನ್ನು 'A Crystal Crank' ಎಂದುದುಂಟು. ವರ್ಡ್ಸ್‌ವರ್ತ್ ಕವಿಯನ್ನು ಕುರಿತು ಈ ಮಾತುಗಳು ಹೊರಟಿವೆ!-"A tired-out old blatherer, a tumble down thinker; a man who made a hiding place of his own life; a shadow parading about as the sun; a poet, sensitive to everything but man; a bladder blown that sometimes gave a note of music; a fool who thought the womb of the world was Wordsworth, a poet who jailed the striving of a man in a moral lullaby; a snail to whom God give the gleam of a glow-worm; a poet singing the Song of Safety First"—ಸಾಲದೆ? ಇಲ್ಲಿ ಗುಣಗಳನ್ನು ಹೇಳಿಲ್ಲ. ಈ ದೋಷಗಳು ಪ್ರತಿಯೊಂದನ್ನೂ ಅವನ ಕಾಲದಿಂದ ಹಿಡಿದು ಈವರೆಗೂ ಇವನೊಂದು ಅವನೊಂದು,-ಕೋಲ್‌ರಿಜ್, ಕೀಟ್ಸ್, ಅರ್ನಲ್ಡ್, ಲೊವೆಲ್ ಮುಂತಾದವರು ಕೂಡ ಹೇಳಿದ್ದಾರೆ. ಯಾವಲ್ಲಿಯೂ ಅಸಮಾಧಾನ ಇಷ್ಟು ಒಟ್ಟಿಗೆ ಸಿಡಿದಿಲ್ಲ. "ಒಂದು ಜಾತಿಗೆ ಮೆಯ್ಯ ಅಂಗವೆಲ್ಲವು ವಿಷವು."

ಒಂದೊಂದಾಗಿ ಆಮೇಲೆ ತೇಲಿಬರುವುವು; ಅಥವಾ ಪರಿಚಿತವಲ್ಲದಿದ್ದ ಸಮಯಗಳೊ ಸಂಕೇತಗಳೊ ಅರಿವಿಗೆ ಬಂದು ಕ್ಲಿಷ್ಟವಾಗಿರುತ್ತಿದ್ದುದು ವಿಶದವಾಗುವುದುಂಟು. ಕಡೆಗೆ ಈ ಕೃತಿಯ ಯೋಗ್ಯತೆ ಎಷ್ಟೆಲ್ಲ ಹೆಚ್ಚು ಎಂದೊ, ಇಷ್ಟೇಯೆ – ಇನ್ನೇನೂ ಇಲ್ಲ – ಎಂದೊ ಅಳತೆ ನಿರ್ಣಯವಾಗುವುದು. ಸಮಗ್ರ ಕಲ್ಪನೆಯ ಅರಿವಾದಾಗ, ದೊಡ್ಡ ಕೃತಿಯ ಗುರುತು ಕಂಡಾಗ ಬಹುಕಾಲ ಬಹುಬಗೆಯ ಜನರಿಗೆ ಮೆಚ್ಚುಗೆ ಊರುತ್ತಲೇ ಉಳಿಯುವ ಸಂಭವವುಂಟು. ಇದರ ಹಿರಿಮೆಯ ಪ್ರಭಾವ ಹೊಸಹೊಸತಾಗಿ ಕಾಣುತ್ತಿರಬಲ್ಲದು. ವಾಲ್ಮೀಕಿ, ಷೇಕ್ಸ್‌ಪಿಯರ್, ಮುಂತಾದವರ ಕೃತಿಗಳಲ್ಲಿನಂತೆ ಅವು ನಿತ್ಯಸಂತೋಷದಾಯಿಗಳು. ಆ ಸಂತೋಷ ಮೆಚ್ಚಿಕೆಗಳು ನಮ್ಮೆಲ್ಲರ ಮಾನವ ಸಾಧಾರಣತೆಯ ಕುರುಹುಗಳು.

ಹೀಗೆಯೇ ನಾಟಕ, ನಾಟ್ಯ, ಪದ್ಯಕಾವ್ಯ, ಸಂಗೀತಗಳಲ್ಲಿ ಮೊದಲ ಹೆಜ್ಜೆಯಿಂದ ತೊಡಗಿ ಅರ್ಥ ಬೆಳೆಯಲಿರುತ್ತದೆ. ಹೆಜ್ಜೆ ಹೆಜ್ಜೆಯ ಛಂದ ಚಿತ್ರಣಗಳು ಎಷ್ಟೇ ರಮ್ಯವಾಗಿರಲಿ ಅವೆಲ್ಲ ಅಂಶ – ಅಂಗ – ಸೌಭಾಗ್ಯ; ಒಟ್ಟರ್ಥಕ್ಕೆ ಅಧೀನ. ಕೃತಿಯು ಕಡೆ ಸೇರಿದಾಗ ಅಲ್ಲಿನ ಒಂದು ಸಂಗತಿಯಿಂದಲೋ ಕಲ್ಪನೆ ಅಥವಾ ಧ್ವನಿ ಘಟನೆಯಿಂದಲೋ ಅರ್ಥಾಂತರ, ರೂಪಾಂತರ ಹೊಂದಬಲ್ಲದು.§ ಇಲ್ಲಿ ತೊಡಗು, ನಡು, ಕಡೆ ಎಂಬ ಮಜಲುಗಳುಂಟು. ಕೃತಿಯ ಅನುಭವ ಪೂರ್ತಿಯಾಗಬೇಕಾದರೆ ಕೊನೆಯವರೆಗೂ ಅದರೊಡನೆ ತಾಳಿ ಬೆಳೆದ ಮನಸ್ಸು ತನ್ನ ಸಮಾಧಿಗೆ ಭಂಗತಂದುಕೊಳ್ಳದೆ ಅದನ್ನು ಸವಿಯಬೇಕು. ಸುತ್ತಮುತ್ತಲಿನ ದೈನಿಕ ಪರಿಸ್ಥಿತಿಯನ್ನು – 'ವೇದ್ಯಾಂತರ'ಗಳನ್ನು — ದಾಟಿ, ಮರೆತು, ಪ್ರಸಕ್ತ ಸನ್ನಿವೇಶದಲ್ಲಿ ತನ್ಮಯವಾಗುವುದೇ ಕಾವ್ಯದ 'ಅಲೌಕಿಕತೆ'.† ಆ ಅನುಭವಪ್ರಪಂಚವೂ

§ ಸಾನೆಟ್, ವಿಡಂಬನೆಗಳಲ್ಲಿ ಈ ಅಂಶದ ಪ್ರಕಾಶ ಎಲ್ಲೆಲ್ಲೂ ತಾನೇ ತಾನು.

† ಅಲೌಕಿಕವೆಂದರೆ ಆಧ್ಯಾತ್ಮಿಕ, ಅತಿಮಾನುಷ ಎಂದಲ್ಲ ಅರ್ಥ. ಹಾಗಾಗಬಹುದು, ಕೃತಿಯ ವಿಷಯವೇ ಅದಾದರೆ. ಇಲ್ಲವಾದರೆ ಯಾವ ವಿಷಯವನ್ನು ಕುರಿತು ಕೃತಿ ಹೇಳುತ್ತಿದೆಯೋ ಆ ಪ್ರಪಂಚ. ಇವೊತ್ತು, ಕಾವ್ಯಾನುಭವಸಮಯದಲ್ಲಿ ಮಹಾಶ್ವೇತೆ, ಶಕುಂತಲೆ, ಭರತ, ರಾವಣ, ಶಕಾರರನ್ನು ದರ್ಶನ ಮಾಡಿದಂತೆ. ಅವರ ಸಹವಾಸದಲ್ಲಿ ಸಮಯ ಕಳೆದಂತೆ. ಆ ಕಾಲದಲ್ಲಿ ಸದ್ಯಕ್ಕೆ ನಮ್ಮ ಸುತ್ತಲ ಜೀವನದ ನಿರ್ಬಂಧಗಳೂ ಅಗತ್ಯಗಳೂ ಬೇಸರಗಳೂ ಎಲ್ಲ ಆವರಣವೂ ಮಾಯ

ಅದರಿಂದ ಹುಟ್ಟಿದ ಭಾವದ ಮತ್ತು ಸತ್ಯದರ್ಶನದ ಅಲೆಗಳೂ ಹೊಮ್ಮಿದಂತೆಲ್ಲ ಮನಸ್ಸು ಆ ಬೇರೆಯ ಲೋಕಕ್ಕೆ ನಮ್ಮನ್ನು ಒಯ್ದು ಭಾವಪರಿಪಾಕ ಉಂಟು ಮಾಡುತ್ತದೆ. Meaning exists in Degrees and Stages ಎಂಬ ಮಾತು ಈ ಅರ್ಥದರ್ಶನದ ಬೆಳವಣಿಗೆಯನ್ನೂ ಹಂತಗಳನ್ನೂ ಸೂಚಿಸುವ ಒಂದು ನುಡಿ.

ಬೆಲೆಗಳು ಎಂದಾಗ ಒಬ್ಬೊಬ್ಬರು ಮೆಚ್ಚಿ ಬಳಸುವ ಬೆಲೆಗಳು ಎಂದಿತು. ಇವುಗಳಲ್ಲಿ ಎಣಿಕೆಯ ಭೇದ, ಪ್ರಧಾನ ಗೌಣಗಳ ತೂಲನೆ ಉಂಟು. ಆದ್ದರಿಂದ ಒಂದು ಕಡೆ ಉಪ್ಪರಿಗೆಯ ಮೆಟ್ಟಲುಗಳಂತೆ ಬೆಲೆಯೆಣಿಕೆ ನೆಲಸಿದರೆ ಇನ್ನೊಂದು ಕಡೆ ತಾರತಮ್ಯವುಂಟು; ನಿರ್ಣಯಸಾಧಕ ಅಂಶವೂ, ಅಲ್ಲದ್ದೂ ಉಂಟು; ಪ್ರಮಾಣಗಳ ವ್ಯತ್ಯಾಸವುಂಟು (Scales of Value and Standards of Judgement). ಜನದಲ್ಲಿ ರೂಢವಾದ ಶುಚಿ, ರುಚಿ, ಭಕ್ತಿ, ಆಸ್ತಿಕತೆ, ಸಂಸ್ಕಾರ, ಧರ್ಮ, ಬುದ್ಧಿ ಪರೀಕ್ಷೆ, ಆಕಾಂಕ್ಷೆ, ಪ್ರಯೋಜನ, ಉದ್ವೇಗ, ಉಗ್ರತೆ, ಪಕ್ಷಪಾತ, ಮಾತು ಅರ್ಥಗಳನ್ನು ಕುರಿತಾಗಿ ಹುಟ್ಟಿರುವ ರಾಗದ್ವೇಷಗಳ ಚರಿತ್ರೆ,—ಇನ್ನೂ ಹೀಗೇ ಯಾವಯಾವದು ಜನರ ಸ್ವಭಾವವನ್ನೂ ಎಣಿಕೆಯನ್ನೂ ನಡಸುವುದೊ ಆ ಎಲ್ಲವೂ ಬೆಲೆ, ಪ್ರಮಾಣ ಆಗುವುವು † ಇವೆಲ್ಲ ನೇರವಾಗಿಯೋ ಪರೋಕ್ಷವಾಗಿಯೋ ಮನಸ್ಸಿನಲ್ಲಿ ಕುಳಿತು ವಿಮರ್ಶೆಯಲ್ಲಿ ಕಾರ್ಯಕಾರಿಯಾಗುತ್ತವೆ. ಇವು ಕೇವಲ ಸಾಹಿತ್ಯದ ವಿವಕ್ಷೆಗಳೇ ಆಗಿರುತ್ತವೆಯೆಂಬುದಿಲ್ಲ. ಸಾಹಿತ್ಯ ಹೇಗೆ ಲೋಕ ಜೀವನದ ಒಂದು ಅಂಶದರ್ಶನವೋ ಹಾಗೆಯೇ ಅದರ ವಿಮರ್ಶೆಯೂ ಹೌದು. ಹಾಗೆಯೇ ಲೋಕದೃಷ್ಟಿಯು ಒಂದು ಬೆಲೆಯೆಣಿಕೆ. ಸಾಹಿತ್ಯವಾಗಿ ಬರೆದುದೆಲ್ಲ

---

ವಾಗುವುದು. 'ಆವರಣ ಭಂಗ' 'ವಿಗಲಿತ ವೇದ್ಯಾಂತರ' ಎಂಬ ನಮ್ಮ ಲಕ್ಷಣ ಶಾಸ್ತ್ರದಲ್ಲಿನ ಮಾತುಗಳು ಇಲ್ಲಿ ಸತ್ಯವಾಗುತ್ತವೆ. ಅದರಿಂದ ಆ ಬೇರೆ ಲೋಕ ಗಮನ. ಇದನ್ನು Transport ಎನ್ನುವುದೂ ಉಂಟು.

† Literature is but one element in the single all-embracing world of ideas where Criticism is only Culture seen from the other side, and both are often scarcely distinguishable from Conduct." Review on "Open Vision" The Times Literary Supplement 8-1-1949.

ಸಾಹಿತ್ಯವೇ ಆದರೂ ಮಹಾಕೃತಿ, ಉತ್ಕೃತಿ ಎಂಬ ಸಲುವಳಿಯಾಗಬೇಕಾದರೆ ಧರ್ಮ, ಕರ್ಮ, ದರ್ಶನಶುದ್ಧಿ, ಲೋಕಪರಿಜ್ಞಾನ, ಜೀವನ ಸಂಸ್ಕಾರ, ರಸ ಅಥವಾ ಅರ್ಥರಚನಾ ಶಿಲ್ಪ, ಕಲ್ಪನೆಯ ಧೋರಣೆ–ಇನ್ನೂ ಎಷ್ಟೆಷ್ಟೋ ಎಣಿಕೆಗೆ ಬರುವುವು. ಇಲ್ಲಿಯೇ ಸಾಹಿತಿ ಸಾಹಿತಿಗಳಿಗೆ ಇರುವ ತಾರತಮ್ಯ ಗಣನೆ ಹುಟ್ಟುವುದು. ಗಣಿಸುವವರ ಯೋಗ್ಯತೆ ಅಭಿರುಚಿಗಳಂತೆ ಇಲ್ಲಿ ವರ್ಗೀಕರಣ.

ಸಾಹಿತ್ಯಶಾಸ್ತ್ರ* ವೆಂಬುದುಂಟು. ಸಾಹಿತ್ಯಾಂಗಗಳಾದ ಅಲಂಕಾರ ಛಂದಸ್ಸುಗಳೊಡನೆ, ಅಲ್ಲಿನ ತತ್ವಭಾಗವೂ ಮನೋವಿಜ್ಞಾನ, ಸಮಾಜ ದರ್ಶನ, ಧರ್ಮಶಾಸ್ತ್ರ ಮುಂತಾದವಕ್ಕೆ ಸಂಬಂಧಿಸಿದ ಕೆಲವಂಶಗಳೂ ವಿಮರ್ಶೆಯ ಹದವನ್ನು ಮಾರ್ಪಡಿಸುವುವು. ಅಲ್ಲಿ ಸಂಪ್ರದಾಯದೃಷ್ಟಿಗೂ ಪ್ರಯೋಗಗಳಿಗೂ ಘರ್ಷಣ ಬರಬಲ್ಲದು.

ಇನ್ನು ಕೆಲವರು ವಿಮರ್ಶಕರು ಸ್ವಂತ ಭಾವಾವೇಶದಿಂದಲೊ, ಪ್ರತಿಭಾ ಬಲದಿಂದಲೊ ತಮ್ಮ ವಿಮರ್ಶೆಯನ್ನೇ ಒಂದು ಕೃತಿಯ ಹಾಗೆ ನಿರ್ಮಿಸ ಬಲ್ಲರು. (ರಸ್ಕಿನ್, ಗಯ್ಟೆ, ರವೀಂದ್ರನಾಥಠಾಕೂರರು – ಇವರಂತೆ.) ಅಂಥಲ್ಲಿ ಮಿಮರ್ಶೆ ಈ ಮಹನೀಯರ ಭಾವರೇಖನಕ್ಕೆ ಸ್ವತಂತ್ರವಾದ ಸಾಹಿತ್ಯಮಾನವನ್ನು ದೊರಕಿಸುತ್ತದೆ. ಅವು ವಿಮರ್ಶೆಯಾಗಿ ಮೂಲ ಕೃತಿಗೆ ಹೊಂದಬಹುದು, ಬಿಡಬಹುದು; ಅಲ್ಲಿಂದ ಹುಟ್ಟಿ ಆ ಸುತ್ತ ಬೆಳೆದು ಇನ್ನೊಂದು ಮನಸ್ಸಿನ ನಿರೂಪಣವೂ ಕ್ರಿಯಾಕಲ್ಪವೂ ಆಗುತ್ತವೆ. ಒಬ್ಬ ವಿಮರ್ಶಕನ ವಿಮರ್ಶೆಯನ್ನು ಮತ್ತೊಬ್ಬರು ಖಂಡಿಸುವುದೂ ಮಂಡಿಸುವುದೂ ಉಂಟು. ಇಂಥ ತರ್ಕ ಪರೀಕ್ಷೆಗಳ ಸಿದ್ಧಾಂತಗಳಲ್ಲಿ ಉಳಿದು ನಿಲ್ಲುವ ಭಾಗ ವಿಮರ್ಶೆಯಲ್ಲಿ ಒಂದು ಗಟ್ಟಿನೆಲ. ಒಂದು ಪಾದದ, ಒಂದು ಪದ್ಯದ, ಅಥವಾ ಒಂದು ಕೃತಿಯ ವ್ಯಷ್ಟಿವಿಮರ್ಶೆ; ಒಬ್ಬ ಕವಿಯ ಕೃತಿಗಳೆಲ್ಲದರ ಸಮಷ್ಟಿ ವಿಮರ್ಶೆ; ಒಂದು ದೇಶದ, ಕಾಲದ, ಬಗೆಯ ಸಾಹಿತ್ಯಮೀಮಾಂಸೆ;

---

* ನಮ್ಮ ಲಕ್ಷಣ ಗ್ರಂಥಗಳಲ್ಲಿಯೂ ಪಾಶ್ಚಾತ್ಯರ Rhetoric, Poetics ಎಂಬಲ್ಲಿಯೂ ಯಾವ ತತ್ವಗಳು ಪ್ರತಿಪಾದನೆಗೆ ಬರುವುವೋ ಪಾಶ್ಚಾತ್ಯರ ಸೌಂದರ್ಯದರ್ಶನ Aesthetics ಮತ್ತು ಸಾಹಿತ್ಯವಿಮರ್ಶೆ Literary Criticism ಯೆಂಬ ವಿವೇಚನೆಗಳಲ್ಲಿ ಏನೇನು ವಿಚಾರಗಳು ಪರ್ಯಾಲೋಚನೆಗೆ ಬರುವುವೋ ಅವೆಲ್ಲ ಕೂಡಿ ಇಲ್ಲಿ ಕಾರ್ಯಕಾರಿ.

ಸಾಹಿತ್ಯಗಳ ತಾರತಮ್ಯಗಣನೆ; ಸ್ಥಾನ ನಿರ್ದೇಶ; ಸಾಹಿತ್ಯ ಪ್ರಕಾರಗಳು, ತತ್ವಗಳು, ವಿಧಾನ, ವಿಮರ್ಶೆಯ ಚರಿತ್ರೆ– ಇವೆಲ್ಲ ವಿಮರ್ಶಾ ಪ್ರಪಂಚ.

ಎಲ್ಲ ರೀತಿಯಲ್ಲಿಯೂ ಕೃತಿಗಳನ್ನು ಅಳೆದು, ಸುರಿದು, ತೂರಿ, ಆರಿಸಿದ ಮೇಲೂ ಈ ಬುದ್ಧಿಕ್ರಿಯೆಗಳಿಗೆ ಸಿಕ್ಕದಿರುವ ಅಂತಃಕರಣಪ್ರಪಂಚ ಒಂದುಂಟು. ಇದು ಪ್ರತಿಯೊಬ್ಬರ ಮನಸ್ಸಿನ ಮೇಲೂ ಆಗುವ ಭಾವ ಪರಿಣಾಮ. ಉಳಿದ ಎಲ್ಲಕ್ಕೂ ಆಧಾರವೂ ಪ್ರಮಾಣವೂ ಫಲವೂ ಆದ ಹೃದಯಸಂವಾದ. ಇದನ್ನು ವಿವರಿಸುವುದೂ ಅಳೆಯುವುದೂ ಹೇಗೆ? ಇದನ್ನು 'ಅಂತಃಶರ್ಮ', 'ಆನಂದ' ಎನ್ನುವುದೂ ಉಂಟು. ಆನಂದವೆಂದರೆ ಕೇವಲ ಸಂತೋಷವೇ ಅಲ್ಲ, ಕೃತಿಯ ಅರ್ಥಭೋಗದಿಂದ ಮನಸ್ಸಿಗೆ ಹೊಸ ದರ್ಶನವೂ ದಾರಿಗಾಣ್ಕೆಯೂ ಆಗುವುದು. ಅದರಮೇಲೆ ಹೊಸ ಒಂದು ಜೀವಂತ ಅನುಭವದ ಪ್ರಭಾವ ಬೀಳುವುದು. ಅದು ಹೃದಯವನ್ನು ಮೃದು ಮಾಡುವುದು. ಪ್ರಧಾನವಾಗಿ ಈ ಸ್ವಾದು ಫಲ ಪರಿಣಾಮಕ್ಕಾಗಿಯೇ ಸಾಹಿತ್ಯಕ್ಕೆ ಬೆಲೆ, ಭಕ್ತಿ.

ಕಾವ್ಯವನ್ನು ಬರೆಯುವುದು ಬುದ್ಧಿ ಭಾವಗಳಿಂದಲ್ಲ (Not with ideas), ಮಾತುಗಳಿಂದ ಎಂದು ಒಬ್ಬ ಕವಿ ಹೇಳಿದ. ಈ ಮಾತುಗಳು– ಆ ಪ್ರತಿಯೊಂದರ ಲಯಗತಿ, ಅಕ್ಷರಯೋಗ, ಸ್ವರಸಂಗೀತ, ಚಿತ್ರ ಕಲ್ಪನಾ ಶಕ್ತಿ, ಸೂಚನೆ ಸಂಬಂಧಗಳ ತಾಂಡವಗಳೊಡನೆ — ಅರ್ಥಪ್ರಪಂಚವನ್ನು ನಿರ್ಮಿಸುತ್ತವೆ. ಅದೇ ಎಲ್ಲ ಭಾವ, ರಸ, ಸಾಹಿತ್ಯ ಪರಿಣಾಮಕ್ಕೂ ಮೂಲಾಧಾರ, ಘಟಕ. ಕವಿಯ ಅನುಭವವನ್ನು ರೂಪಿಸುವ ಮಾತುಗಳ ಈ ಶಕ್ತಿ ಎಲ್ಲ ಶಬ್ದಾರ್ಥಗಳನ್ನೂ ಪೂರ್ತಿ ರೂಪಾಂತರ ಮಾಡುತ್ತದೆ. ಇದೇ ತ್ರಿವಿಕ್ರಮನ ಪಾದದಂತೆ ಸಾಹಿತ್ಯ ಲೋಕವನ್ನು ತುಂಬಿ ವ್ಯಾಪಿಸಿರುವುದು. ಕೃತಿ ಸೌಂದರ್ಯದ ಅನುಭವವೂ ಸಂಸ್ಕಾರವೂ ಈ ಶಕ್ತಿಯ ಕ್ರಿಯೆಗಳು; ಫಲಗಳು. 'ಅರ್ಥಜ್ಞಾನ ಫಲಾಃ ಶಬ್ದಾಃ – ಎಂದ ಭಾಮಹಭಟ್ಟರೇ ಆ ಶಬ್ದಗಳ 'ಅಪರ್ಯಂತ ಅರ್ಥವರ್ತಿನಾಂ' 'ಇಯತ್ತಾ ಕೇನ ವಾ ವಿಶೇಷಾತ್ ಅವಧಾರ್ಯತೇ' ಎಂದು ಹೊಗಳುತ್ತಾರೆ. ಅವುಗಳ ಅರ್ಥವ್ಯಾಪ್ತಿ ಇಷ್ಟು ದೊಡ್ಡದಾಗಿರುವಾಗ ಶಬ್ದಾರ್ಥದ ಪಾರ ಇದು, ಅದರ ಎಲ್ಲೆಕಟ್ಟು ಇಲ್ಲಿ ಎಂದು ಹೇಳಬಲ್ಲವರಾರು? ಹೇಗೆ?

'ಯತೋ ವಾಚೋ ನಿವರ್ತಂತೇ' ಎಂದು ಬ್ರಹ್ಮಾನುಭವವನ್ನು

ನಿರ್ದೇಶಿಸುವುದುಂಟು. ಶ್ರೇಷ್ಠ ಸಾಹಿತ್ಯದ ಅಥವಾ ಕಲಾಕೃತಿಯ ಅನುಭವಕ್ಕೂ ಇದೇ ಲಕ್ಷಣ. ಆದರೆ ಇದನ್ನು 'ಅಪ್ರಾಪ್ಯ ಮನಸಾ ಸಹ' ಎನ್ನಲಾಗದು. ಇದು ಸರ್ವಥಾ ಪ್ರಾಪ್ಯ. ಇದರ ಅನುಸಂಧಾನ ಎಲ್ಲ ಸಂಸ್ಕಾರಿ ಜೀವಕ್ಕೂ ಶಕ್ಯ, ಅಗತ್ಯ.

ವೈಯಾಕರಣಿಗಳ ಅಥವಾ ಮೀಮಾಂಸಕರ ಕಲ್ಪನೆಯಲ್ಲಿ 'ಏಕಃ ಶಬ್ದಃ ಸುಪ್ರಯುಕ್ತಃ ಸಂಯಕ್ ಜ್ಞಾತಃ ಸ್ವರ್ಗೇಲೋಕೇ ಕಾಮದುಘ್ ಭವತಿ' ಎಂಬರಂತೆ. ಆ ಉಕ್ತಿಗೆ ಅಲ್ಲಿ ಯಾವ ಗುಣವೂ ನೆಲಸೂ ಇವೆಯೋ ಅದೇ ಸತ್ಯದಂತಹ ಅರ್ಥಶಕ್ತಿಯ ನೆಲಸು ಸಾಹಿತ್ಯಾನಂದ ಅನುಭವದಲ್ಲಿಯೂ ಇದೆ. ವಿಮರ್ಶಕರು ಇಂಥ ಕಾಮಧೇನುವಿನ ಆವಾಹನೆ ಮಾಡಿ ಅದು ದೊರಕಿಸುವ ಅಮೃತರಸವನ್ನು ಲೋಕಕ್ಕೆ ಊಡಬೇಕು. ಹೊಸ ಊಹೆ, ಭಾವನೆ, ದರ್ಶನಗಳಿಗೆ ಮನಸ್ಸನ್ನು ತೆರೆದು ನವಪ್ರಭಾವಗಳನ್ನು ಎರಗಿಸಬೇಕು. ಸಾಹಿತ್ಯವಿಮರ್ಶೆ ಆಗ ಸಫಲವಾಗುವುದು; ಜೀವನ ಸಂಸ್ಕಾರಕ್ಕೆ ಸಾಧಕವಾಗುವುದು

---

# ಸ್ಫೂರ್ತಿ ಮತ್ತು ಕಲೆಗಾರಿಕೆ

ಇದು ಕಲೆಯ ಉತ್ಪತ್ತಿಗೆ ಸೇರಿದ ವಿಷಯ. ಎಲ್ಲಿಯೋ ಕಂಡ ರೂಪು, ಯಾವುದೋ ಕಣ್ಣ ಹೊಳಪು, ಒಂದು ಹಾಡಿನ ಧಾಟಿ, ಒಂದೊಡಲ ತೊನೆತ, ಬಳುಕು, ಇವು ಕಲೆಯಲ್ಲಿ ಹೇಗೆ ಮೂಡುತ್ತವೆ? ಒಂದು ದೇವಾಲಯ, ಅರಮನೆ, ಕೋಟೆ ಇವುಗಳ ರೂಪಚಿತ್ರ ಶಿಲ್ಪಿಯ ಕಣ್ಣಿಗೆ ಮೊದಲು ಹೇಗೆ ಕಟ್ಟುತ್ತದೆ? ಎಂಬ ವಿಚಾರ ಬಹುಕಾಲದಿಂದ ಪರ್ಯಾಲೋಚನೆಗೆ ಬಂದಿದೆ. ವಾದ, ವಿವರಣೆ, ಸಿದ್ಧಾಂತ ಹುಟ್ಟಿವೆ. ಈ ವಿಷಯದಲ್ಲಿ ನನಗೆ ತೋರಿದ ನಾಲ್ಕು ಅನುವಾದದ ಮಾತುಗಳನ್ನು ಹೇಳುತ್ತೇನೆ.

ಇದನ್ನು ನನಗೆ ಒಪ್ಪಿಸಿದವರ ಮನಸ್ಸಿನಲ್ಲಿ ಸ್ಫೂರ್ತಿ ಎಂದರೆ ಇನ್‌ಸ್ಪಿರೇಷನ್ (Inspiration); ಕಲೆಗಾರಿಕೆ ಎಂದರೆ ಕ್ರಾಫ್ಟ್ಸ್‌ಮನ್‌ಷಿಪ್ (Craftsmanship) ಅಥವಾ Artistry. ಉತ್ತಮ ಕಲೆಯಲ್ಲಿ ಇವುಗಳ ದಾಂಪತ್ಯ ಸಮರಸವಾದ್ದು. ಇವುಗಳ ಸಂಬಂಧ ನಿತ್ಯ. ಕಲೆಗಾರಿಕೆ ಕುಶಲ ಕರ್ಮ ಇವು ಬೇರೆ ಬೇರೆ ಅರ್ಥವ್ಯಾಪ್ತಿಯುಳ್ಳ ಮಾತುಗಳು. ಹಾಗೆಯೇ ಸ್ಫೂರ್ತಿ ಪ್ರತಿಭೆ ಎಂಬವೂ. ಕಲಾಕೃತಿಯ ನಿರ್ಮಾಣಕ್ಕೂ ಒಂದು ಸ್ಫೂರ್ತಿಯೇ ಮೂಲವಾದರೂ ಅದರಲ್ಲಿ ಕೃತಿಗೆ ಕಾರಣವಾದ ಪ್ರತಿಭೆ ಅಥವಾ ಕಲ್ಪನೆಯ ಭಾಗ ಎಷ್ಟು? ಕೃತಿವಿಧಾನ ಹೇಗೆ? ಬಳಸುವ ಮಾಟಗಾರಿಕೆ, ಕುಶಲಕರ್ಮ ಎಂಥವು? ಇವುಗಳ ಹೊಂದಿಕೆ ಹೇಗಿದ್ದರೆ ಕೃತಿಸೌಂದರ್ಯ ತುಂಬುವುದು —ಎಂಬ ಪ್ರಶ್ನೆಗಳೆಲ್ಲ ಸೇರಿವೆ. ವಿಷಯ ದುಷ್ಕರವೆಂಬುದು ಈಗ ತಮಗೆ ಮುಂದಟ್ಟಾದೀತು.

ಸ್ಫೂರ್ತಿಯ ಪ್ರಕಾರಗಳು ಅನೇಕ. ಅದು ಕಲೆಯಲ್ಲದ ಕಾರ್ಯಗಳಲ್ಲಿಯೂ ವ್ಯಾಪಾರದಲ್ಲಿಯೂ ತೊಡಗುವುದು. ಕತ್ತಿಯನ್ನು ಮಸೆಯೋಣ, ಬೆಳುದಿಂಗಳಲ್ಲಿ ಸುತ್ತೋಣ, ಸೈಮರಿಯ ವ್ಯಾಯಾಮ ಮಾಡೋಣ, ಸುಮ್ಮನೆ ಹಲ್ವಾ ಜಾಮೂನ್ ತಿನ್ನೋಣ ಎಂಬ ಸ್ಫೂರ್ತಿ ಜನಕ್ಕೆ ಬರಬಹುದು. ಹಾಗೇ ಅಡಿಗೆ, ವಿಜ್ಞಾನ, ಯಂತ್ರರಚನೆ, ತಂತ್ರ

ಸಾಧನೆ–ಎಲ್ಲ ಕಡೆಯೂ ಹರಿಯಬಲ್ಲದು. ಎಲ್ಲಿ ತೊಡಗಲಿ ಸ್ಫೂರ್ತಿ ಸ್ಫೂರ್ತಿಯೇ. ವಿಶೇಷ ಉರುಬಿನಲ್ಲಿ ಜೀವಶಕ್ತಿ ಉಕ್ಕಿ ಯಾವದೋ ವ್ಯಾಪಾರಕ್ಕೆ ಮನಸ್ಸನ್ನೂ ಶ್ರಮವನ್ನೂ ತಿರುಗಿಸುವದು ಅದರ ಲಕ್ಷಣ. ಕಲಾಮೂಲವಾದ ಸ್ಫೂರ್ತಿ ಒಂದು ವಿಶೇಷಬಗೆಯದು. ಅದು ಏಕೆ ಬರುವುದು? ಒಬ್ಬೊಬ್ಬರಲ್ಲಿ ಒಂದೊಂದು ರೀತಿ, ಅವರಲ್ಲಿಯೇ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ರೀತಿ ಏಕೆ? ಅದರ ಕೆಚ್ಚು, ತುಂಬು, ಉಲ್ಲಾಸಗಳಲ್ಲಿ ವ್ಯತ್ಯಾಸ ಏಕೆ? ಬಂದಾಗ ಬೇರೆ ಬೇರೆ ಬಗೆಯ ರೂಪ, ಭಾವ, ಅರ್ಥ, ರಸ, ವಿರಸ ಉಳ್ಳ ಕೃತಿಗಳನ್ನು ಏಕೆ ಮಾಡಿಸುವುದು? ಎಂಬ ಪ್ರಶ್ನೆಗಳಿಗೆ ಇನ್ನೂ ಉತ್ತರ ದೊರೆತಿಲ್ಲ. ಸಿಗರೆಟ್ ಸೇದಿ, ಕಾಫೀ, ಸೇಂದಿ ಸೇವಿಸಿ, ಕಣ್ಣಿಗೆ ರಮ್ಯವಾದದ್ದನ್ನು ಮುಂದಿರಿಸಿಕೊಂಡು ಸ್ಫೂರ್ತಿಗೊಳ್ಳುತ್ತೇವೆ; ಅವಿಲ್ಲವಾದರೆ ನಮಗೆ ಸ್ಫೂರ್ತಿ ಬಾರದು ಎನ್ನುವವರಿದ್ದಾರೆ. ಅದೊಂದು ಜಾತಿ. "The spirit is most fecund where it is most virginal" ಎಂಬಲ್ಲಿ ಸತ್ಯದ ಇನ್ನೊಂದು ಮುಖ ಕಂಡೀತು. ಒಂದು ದಾರಿ ಭೋಗದ್ದು, ಲೋಲುಪತೆಯದು; ಇನ್ನೊಂದು ನಿಷ್ಠೆಯದು, ಬ್ರಹ್ಮಚರ್ಯದ್ದು.

ಕೃತಿಶಕ್ತಿ ದೈವದತ್ತವಾಗಿರಲಿ, ಗುರು ಅನುಗ್ರಹದಿಂದ ಬರಲಿ, ವ್ಯಕ್ತಿಯ ತಪಸ್ಸಿನಿಂದ ಸಿದ್ಧಿಸಲಿ, ಸಂಸ್ಕಾರಜನ್ಯವಾಗಿರಲಿ ಅಂತೂ ಒಂದು ವಿಶೇಷ ಬಗೆಯದು. ಎಂದರೆ, ಎಲ್ಲರಿಗೂ ಕಲಾವೇಶ ಬರುವುದಿಲ್ಲ. ಎಲ್ಲ ಸ್ಫೂರ್ತಿಯಲ್ಲಿಯೂ ಕಲೆಯಲ್ಲಿನಂತೆ ಕ್ರಿಯೆ ಹರಡದು. ಇದು ಮೇಲೆಂದಾಗಲಿ ಕೀಳೆಂದಾಗಲಿ ನಾನು ಹೇಳುತ್ತಿಲ್ಲ. ಸ್ವರೂಪ ಬೇರೆ ಎಂದು ಮಾತ್ರ ಹೇಳುತ್ತಿದ್ದೇನೆ. ಏನೋ ಕೇಳಿತು, ಕಂಡಿತು, ತೋರಿತು; ಒಂದು ಬಗೆಯ ಸಂಸ್ಕೃತಿಯುಳ್ಳ ಮನಸ್ಸು ಆವೇಶಗೊಂಡು ಆಡುವುದು; ಅದರ ಕಲ್ಪನೆ ಉದ್ರೇಕಗೊಳ್ಳುವುದು; ಸದ್ಯದ ಪರಿಸ್ಥಿತಿಯಿಂದ ತಿರುಗಿ ಹೊಸದಾಗಿ ಹುಟ್ಟುವ ಈ ಅನುಭವಗಳಲ್ಲಿ ತನ್ನನ್ನು ಮರೆಯುವುದು. ಸಂತೋಷವಾಗಲಿ, ಆಗದೆ ಇರಲಿ ಅದು ಒಂದು ತಪ್ತ, ಪ್ರಮತ್ತಸ್ಥಿತಿ. ಆ ನರಕಂಪನ, ಕಣ್ಣಿಕೆರಳು, ಮೂಗಿನ ಹರಡು, ಮೈಕಾವು, ಎದೆಬಡಿತ, ನೆತ್ತರ ಓಟ–ವಾಡಿಕೆಯ ಗತಿಗಿಂತ ವೇಗವಾದವು; ಸ್ಥಿತಿಯ ಒಮ್ಮೊನೆಯನ್ನು ಸಾಧಿಸುವವು. ಲೋಕದ ಬೇರೆ ಅಗತ್ಯಗಳೂ ಬಾಂಧವ್ಯಗಳೂ ಕಳಚಿಬಿದ್ದು ಮನಸ್ಸು ಇದರಲ್ಲಿಯೇ ಮುಳುಗುವುದು. ಇದು ಕಲ್ಪನಾಲೋಕ. ಅಲ್ಲಿ ವಿಹಾರ. ಅಲ್ಲಿ ಹುಟ್ಟಿ ಬೆಳೆಯುವ, ಒಂದು ಹೊಸ

ರೂಪವನ್ನು ಪಡೆಯುವ ವಿಧಾನ, ಕೃತಿರೂಪಣ.

ಕೆರಳಿದ ಕಲ್ಪನೆ ಮನಸ್ಸಿನಲ್ಲಿ ತಾಂಡವವಾಡಿ ಅದನ್ನು ಹೊರಹಾಕುವಂತೆ ಮಾಡಿದಾಗ ಮಾತ್ರ ಕಲೆಯ ನಿರ್ಮಾಣಕ್ಕೆ ಅವಕಾಶ. ಹೊಸ ರೂಪಣಕ್ಕೆ ಪ್ರವೃತ್ತಿ ಎಲ್ಲಿ ಇಲ್ಲವೋ ಅಲ್ಲಿ ಕಲೆಯ ಪ್ರಸ್ತಾಪ ಬಾರದು. ಕೃತಿರಚನೆ ಮಾಡಿಸುವವರೆಗೂ ಎಲ್ಲಿ ಆವೇಶ ಮುಗಿಯದೆ, ಮಾಟ ನಡೆಯುತ್ತಲೇ ಇರುವುದೋ ಅಲ್ಲಿ ಮಾತ್ರ ಕಲಾಕಲ್ಪಕ್ಕೆ ಆಧಾರವಾದ ಸ್ಫೂರ್ತಿ ಇದೆಯೆನ್ನಬೇಕು. ಆಗಲೂ ಒಬ್ಬರಲ್ಲಿ ಕಾವ್ಯ, ಇನ್ನೊಬ್ಬರಲ್ಲಿ ಗಾನ, ಮತ್ತೊಬ್ಬರಲ್ಲಿ ಚಿತ್ರ, ಶಿಲ್ಪ, ನಾಟ್ಯ ಉತ್ಪನ್ನವಾಗುವಂತೆ ಏಕಾಗುವುದೊ ಇದೂ ಗೊತ್ತಾಗಬೇಕಾದ ಸಂಗತಿ. ಇದು ಹಿಂದಿನ ಜನ್ಮದ ಸಂಸ್ಕಾರ ಎಂದರೆ, ಜನ್ಮಾಂತರವಾದವೊಂದನ್ನು ಒಪ್ಪಿಕೊಂಡು ಸುಲಭವಾಗಿ ನಾವು ಇತ್ಯರ್ಥ ಮಾಡಲಾಗದುದನ್ನೂ ಪ್ರಮಾಣಗಳಿಂದ ಸ್ಥಾಪಿಸಲು ಅಶಕ್ಯವಾದ ಸಂಗತಿಯನ್ನೂ ನಮ್ಮ ಅರಿವಿಲ್ಲದ ಯಾವುದೋ ಕಾಲದ ಕೈಗೆ ಕೊಟ್ಟಂತೆಯೇ ಸರಿ. ಅಂಥಲ್ಲಿ ಎಲ್ಲವೂ ನಿಜ; ಯಾವುದೂ ನಿಜವಲ್ಲ. ಯಾರು ಹೇಗೆ ವಾದ ಮಾಡಿದರೆ ಹಾಗೆ ಸ್ಥಿತಿಯನ್ನು ಒಪ್ಪಬೇಕಾಗುತ್ತದೆ.

ಇಂಥ ಶಕ್ತಿಯುಳ್ಳ ಜನ ಇದ್ದಾರೆ, ಅವರಿಂದ ಇಂಥ ಕೃತಿ ಹುಟ್ಟಿದೆ, ಇಷ್ಟು ನಿಜ.

ಕಲೆಗಾರ, ಕಲ್ಪನೆ, ರಚನೆ ಈ ಮೂರು ಅಂಗಗಳ ಕ್ರಿಯೆ ಸೇರಿಕೊಂಡಿದೆ ಈ ವಿಧಾನದಲ್ಲಿ. ಇದು ಕಲ್ಪನೆಯ ಭಾಗ, ಇದು ವ್ಯಕ್ತಿವಿಶೇಷ, ಇದು ರಚನಾಂಶ ಎಂಬ ವಿಂಗಡಣೆಗಳನ್ನು ಆಮೇಲೆ ನಾವು ಗುರುತಿಸುತ್ತೇವೆ. ಉತ್ಪತ್ತಿಸಮಯದಲ್ಲಿ ಇದು ಒಟ್ಟು ಒಂದು ಅಖಂಡಕ್ರಿಯೆ. ಕೃತಿನಿರ್ಮಾಣ ಅವಿಚ್ಛಿನ್ನವಾದ ಕ್ರಿಯಾ-ಪರಿಸರ. ಇದು ಯಾವುದೋ ಹದದಲ್ಲಿ ನಡೆಯುತ್ತದೆ. ಆಯಾ ಮೂಲಸ್ಫೂರ್ತಿಯ ವಿಶೇಷ ಆಯಾ ನಿರ್ಮಾಣಕ್ರಿಯೆಗೆ ಮಾತ್ರ ಹೊಂದುತ್ತದೆ. ಅಲ್ಲಿ ಸೇರುವುದೂ ಬಿಡುವುದೂ ಸ್ಫೂರ್ತಿಸಮಯ, ಬೀಜ, ಭಾವಮಂಡಲಗಳಿಗೆ ಸೇರಿದುದು. ದೇವರಿಗೆ ಲೋಕ ಸೃಷ್ಟಿಯ ಇಚ್ಛೆ ಬಂದಾಗಲೂ ಹೀಗೇ ಅಂತೆ, ಬಹುಶಃ: ಸ ತಪೋ ತಪ್ಯತ; ಸ ತಪಃ ತಪ್ತ್ವಾ; ಇದಂ ಸರ್ವಂ ಅಸೃಜತ- ಎಂದು ಶ್ರುತಿವಾಕ್ಯ ಇದೆ. ಒಂದು ದರ್ಶನಯೋಗ, ಇನ್ನೊಂದು ಕ್ರಿಯಾಯೋಗ -ಇಲ್ಲಿ ಅಂಗಗಳು.

ಆವೇಶದ ಭರದಲ್ಲಿ ಕೃತಿಕಾರನಿಗೆ ಕೂಡ ಮುಂಚಿತವಾಗಿ ತಾನೇನು

ಮಾಡಲಿರುವನೋ ಎಲ್ಲ ಸ್ಪಷ್ಟವಾಗಿ ಹೊಳೆಯದೆ ಇರಬಹುದು. ಇದು ಹೀಗೇ ಸರಿ, ಈ ಅಂಶ ಇಲ್ಲಿಂದ ಬಂದಿತು, ಇವರ ಇಷ್ಟರಿಂದ ಮಾತ್ರ ಮುಂದಿನ ಮಜಲಿಗೆ ನಡೆಯಿತು ಎಂದು ಹೇಳಲಾಗುವುದಿಲ್ಲ. ಕಥೆ ಕಾವ್ಯಗಳನ್ನು ಬರೆಯುವವರಿಗೆ ಒಟ್ಟು ಕಥೆಯ ಕಟ್ಟಡ ಖಚಿತವಾಗಿರಬಹುದು. ಆಗಲೂ ಹೊರರೇಖೆ ಸಿದ್ಧವಾಗಿರಬಲ್ಲದು ಮಾತ್ರ. ಕಲೆಗಾರನ ಜೀವಭಾವವೂ ಒಲವೂ ಪ್ರತಿಜ್ಞೆಯೂ ಕೃತಿರೂಪಕ್ಕೆ ತರಲು ಹಾತೊರೆಯುತ್ತಿರುವ ಸ್ಫೂರ್ತಿಯೂ ಸಂತತವಾಗಿ ಅದನ್ನು ಮಾರ್ಪಡಿಸುತ್ತ ಹೋಗುವುವು. ಕ್ರಿಯೆ ಮುಗಿದ ಮೇಲೆ ಕಲೆಗಾರನು ಪ್ರತಿಯೊಂದನ್ನೂ ಪುನರಾವರ್ತನೆ ಮಾಡಿದಾಗ ಕ್ರಿಯಾ ವಿಧಾನವನ್ನು ನೆನಪಿಗೆ ತಂದುಕೊಂಡು ತಕ್ಕಮಟ್ಟಿಗೆ ನಮಗೆ ವಿವರಿಸಬಲ್ಲನಾದೀತು. ಇಲ್ಲವಾದರೆ ಹೊರಗಿನ ನಮಗೆ ಕೃತಿಯ ಹಿಂದೆ ನಿಂತು ಅಡಗಿ ಕೆಲಸ ಮಾಡಿರಬೇಕಾದ ಅಂಶಗಳನ್ನೂ ಪ್ರಧಾನಸ್ಫೂರ್ತಿಯನ್ನೂ ಊಹಿಸಿ ಮಾತ್ರ ತಿಳಿಯಬೇಕಾಗುವುದು. ಅಷ್ಟೇ ಹೊರತು ಮೊದಲು ಹೊಳೆದುದೇನು, ಮನಸ್ಸಿನಲ್ಲಿ ಏನಾಯಿತು, ಹೋಯಿತು, ಯಾವ ಹೊಸತು ಬಂದು ಸೇರಿಕೊಂಡಿತು—ಮುಂತಾದವು ತಿಳಿಯುವುದಿಲ್ಲ. ಇದೆಲ್ಲ ಆಗಿರುತ್ತದೆ. ಶಾಕುಂತಲದಲ್ಲಿಯೊ, ಪಂಪಭಾರತ, ಪಂಪ ರಾಮಾಯಣಗಳಲ್ಲಿಯೊ ಮೂಲಕಥೆ ಮಾರ್ಪಡುವ ರೀತಿಯನ್ನು ಗಮನಿಸಬಹುದು. ಹರಿಶ್ಚಂದ್ರನ ಕಥೆ ಯಾವ ಭಾವಕ್ಕೆ ತೂಗುತ್ತದೆ? ವಸಿಷ್ಠ ವಿಶ್ವಾಮಿತ್ರರ ಸ್ಪರ್ಧೆಗೊ? ಹರನೆಂಬುದೇ ಸತ್ಯ, ಸತ್ಯವೆಂಬುದೆ ಹರನು ಎಂಬ ರಾಘವಾಂಕನ ಸಿದ್ಧಾಂತಕ್ಕೊ? ಸುಳ್ಳು ಹೇಳದವರಿಗೆ ಸುಡುಗಾಡೇ ಗತಿ ಎಂಬ ಕೈಲಾಸಂ ತತ್ವಕ್ಕೊ? ಈ ಸಂಬಂಧದಲ್ಲಿ ಇಂಗ್ಲಿಷಿನಲ್ಲಿ Theme, Plot and Subject Matter ಎಂಬ ವಿವೇಚನೆಗಳನ್ನು ಮಾಡುತ್ತಾರೆ.

ಕೃತಿಕಾರನ ಮನಸ್ಸು ಒಂದು ಕುಲುಮೆ, ತಾಯೊಡಲು. ಸ್ಫೂರ್ತಿ ಬೆಂಕಿ; ಆಗಿನ ಸನ್ನಿವೇಶ ಮೂಸೆ. ಕಲ್ಪನೆ ಕೆರಳಿಸಿದ ಮೊದಲಿನ ಛಂದವೂ ಅರ್ಥಾದಿಗಳೊ ಆಕೃತಿಗೊಳ್ಳಬಯಸುತ್ತಿರುವ ಜೀವಸತ್ವವೊ ತಂದೆವೀರ್ಯ. ಆಗ ಒಲಿದ ಆವರಣದಲ್ಲಿ ಪ್ರಭಾವಬೀರುವ ಎಲ್ಲ ಬೆಳಕು, ತೂಕ, ಕುಶಲಕರ್ಮಗಳಿಗೂ ಒಳಪಟ್ಟು ಈ ಕಲಾಸತ್ವ ರೂಪುಗೊಳ್ಳುವುದು. ಇಲ್ಲಿ ಹೇಗೆ ಅವಯವಗೊಳ್ಳುವುದೊ, ನಡೆ ನಡೆಯುವುದೊ ಹಾಗೆ ಕೃತಿ ಆಕೃತಿಗೊಳ್ಳುವುದು. ಕೃತಿ ಹೀಗೆ ಕೃತಕ; ಒಂದು ಮಾಟ. ಒಂದು ರೂಪವಾಗಿ

ಪರಿಣಾಮಗೊಂಡ ಒಬ್ಬರ ಅನುಭವ, ಇಚ್ಛಾಪ್ರವೃತ್ತಿ, ರಚನೆ ಅದು.

ಕಲೆಗಾರನು ಅಸಾಧಾರಣ ಗುಣವುಳ್ಳವನು ಎಂದು ಹೇಳಿತು. ಆದರೂ ಅವನು ಒಂದು ಕಾಲದವನು, ದೇಶದವನು, ಕುಲದವನು ; ಒಂದು ಪಕ್ಷಪಾತ ರಾಗದ್ವೇಷಾದಿಗಳಿಗೆ ಒಳಪಟ್ಟವನು; ಒಂದು ವಿದ್ಯೆ, ಆಕಾಂಕ್ಷೆ, ಮೂಲ ಸ್ವಭಾವ ಉಳ್ಳವನು. ಅವನ ದೇಹರಚನೆಗೆ ಸಂಬಂಧಿಸಿದಂತೆ ಇದು ಅವನದೇ ಲಕ್ಷಣ, ಬೇರೊಬ್ಬನದಲ್ಲ ಎಂಬಂತಹ ಲಕ್ಷಣ, ಮಾತು, ನಡತೆ, ವೇಷ, ಶೀಲ ಹೇಗೆ ಇರುವುವೋ ಹಾಗೆಯೇ ಅವನ ಮನಸ್ಸಿನಲ್ಲಿ ಅವನವೇ ಎನ್ನಬಹುದಾದ ಕಲ್ಪನೆಗಳು ಹುಟ್ಟುತ್ತವೆ. ಸ್ಫೂರ್ತಿಸಮಯದಲ್ಲಿ ಮನಸ್ಸಿನ ತಿರುವು ಹೇಗಿರುತ್ತದೆಯೊ ಆ ತಿರುವು ಅವನ ಕಲ್ಪನೆಗೂ ರೂಪಣಕ್ಕೂ ರಸಧಾತು ವಿಗೂ ಸುಳಿಯುವುದು. ಇದು ಆಯಾ ಸಮಯದ ಗುಣ. ಅವನ ಎಲ್ಲ ಕೃತಿಗಳ ಆಳದಲ್ಲಿ ಅವನ ಪ್ರಧಾನ ವ್ಯಕ್ತಿತ್ವ ಇರುತ್ತ ಅವನ ಮುದ್ರೆಯಂತೆ, ಅಂಕಿತದಂತೆ ಎಲ್ಲೆಲ್ಲಿಯೂ ಆಳುತ್ತಿರುತ್ತದೆ. ಕಾಳಿದಾಸ, ಷಾ, ಕೈಲಾಸಂ, ಷೇಕ್ಸ್‌ಪಿಯರ್, ತ್ಯಾಗರಾಜ, ಮೀರಾ, ಪುರಂದರದಾಸ ಅವರ ಪ್ರತಿ ಲಯ ವಿನ್ಯಾಸದಲ್ಲಿಯೂ ವ್ಯಕ್ತಿವಿವೇಚಕವಾದ ಈ ಅಂಶವನ್ನು ಕಾಣಬಹುದು.

ಈ ಕಲ್ಪನೆಗಳೂ ಪ್ರೋಷಕಗಳೂ ಎಲ್ಲಿಂದ ಬರುವುವು? ಒಳಗಿಂದ, ಹೊರಲೋಕದಿಂದ, ಹಿಂದಿನ ಕಾಲಗಳಿಂದ, ಮುಂದಿನ ಹಾರೈಕೆಗಳಿಂದ. ಕಲೆಗಾರನ ಇಷ್ಟ ಅನಿಷ್ಟಗಳಿಂದ; ಅಹಂಕಾರ ವಕ್ರತೆ ಸರಸವಿರಸ ವಿಲಾಸ ಗಳಿಂದ ; ಇಂಥವನ್ನು ಅದುಮಿ ಮರಸಿಟ್ಟಿದ್ದ ಮನಸ್ಸಿನ ಒಳಪದರಗಳಿಂದ: ಜೀವದ ಚರಿತ್ರೆ ಯಾವ ಯಾವ ಮಜಲುಗಳನ್ನು ದಾಟಿ, ಯಾವ ಯಾವ ಅನುಭವ ಬಂದು ಹೋಗಿ ಎದ್ದು ಬಿದ್ದಿದ್ದರೂ ಅವುಗಳ ಶೇಷ ಮನಸ್ಸಿನ ಆಳದಲ್ಲಿರಲು ಈ ಅವ್ಯಕ್ತ ಚೇತನರಂಗದಲ್ಲಿ ಸೇರಿರುವ ಅಂಶಗಳಿಂದ ; ಕಲ್ಪ ನೆಯ ಚಿಲುಮೆಯ ತಾಯಿಮೂಲ ಅಲ್ಲಿ. ಇವನ ಮಾನವತೆಯ ಅಂತರಾಂತರ ದಲ್ಲಿ ಸುಪ್ತವಾಗಿರುವ ಎಲ್ಲ ಮೂಲಪ್ರವೃತ್ತಿ, ಎಲ್ಲ ಚೈತನ್ಯಗಳಿಂದ. ಹಠಾ ತ್ತಾಗಿ ನೆಲಬಿರಿದು ನೀರೊ, ಎಣ್ಣೆಯೊ ಚಿಗಿದು ಏಳುವಂತೆ ಈ ಸತ್ವದ ಉರ್ಕು. ಅವುಗಳಲ್ಲಿ ಈ ಸತ್ವದ ರೂಪಣಕ್ಕೂ ಬೆಳವಣಿಗೆಗೂ ಒಗ್ಗಿದವು ಸ್ವೀಕೃತವಾಗುವುವು. ಉಳಿದವು ಹಿಂಗುವುವು. ಕೆಲವು ಕೃತಿಕಾರರ ಮನಸ್ಸಿ ನಲ್ಲಿ ರೂಪಣ ಮೊದಲೇ ಪೂರ್ತಿನಡೆದು ಯಂತ್ರದಿಂದೆಂಬಂತೆ ಹೊರಬೀಳು ವುದು. ಅಲ್ಲಿ ರಚನೆ ಸುಲಭ. ತಾಯೊಡಲಿಂದ ಪೂರ್ತಿ ಜೀವಂತವಾಗಿ

ಹೊರಬರುವ ಮಗುವಿನ ಪ್ರಸವಕ್ಕೆ ಸೂಲಗಿತ್ತಿ ಹೇಗೆ ನೆರವುಕೊಡುವಳೊ ಹಾಗೆ, ಅಷ್ಟೇ ಇಲ್ಲಿ ಕುಶಲಕರ್ಮ. ಇನ್ನು ಕೆಲವರಲ್ಲಿ ಅಸ್ಪಷ್ಟವಾಗಿ ಮೊದಲಿಟ್ಟು ಬರುಬರುತ್ತ ಮಾರ್ಪಡುವುದು. ಕುಶಲಕರ್ಮ ಹೆಜ್ಜೆ ಹೆಜ್ಜೆಗೂ ರೂಪಗೊಡುತ್ತ ಬೆಳೆಯುವುದು. ಎರಡೂ ಉಂಟು. ಒಬ್ಬೊಬ್ಬರಲ್ಲಿಯೇ ಒಂದು ಕೃತಿಯಲ್ಲಿ ಹೀಗೆ ಇನ್ನೊಂದರಲ್ಲಿ ಹಾಗೆ ಆಗಬಹುದು. ಎರಡು ಕೃತಿಗಳೂ ಚೆನ್ನಾಗಬಹುದು.

ಕಲೆಗಾರನ ಮನಃಸ್ಥಿತಿಯನ್ನೂ ಮಗ್ನತೆಯನ್ನೂ ಯೋಗಿಗಳ ಧ್ಯಾನ ಸಮಾಧಿಗಳಿಗೆ ಹೋಲಿಸುವುದುಂಟು. ಹೋಲಿಕೆ ಸ್ವಲ್ಪಮಟ್ಟಿಗೆ ಇದೆ. ಯೋಗಿಗಳ ಧ್ಯಾನ ರೂಪಣಮುಖವಲ್ಲ. ಅಲ್ಲಿ ಆ ಸ್ಥಿತಿಯೇ ಕೊನೆಯ ಗಮ್ಯ; ಇಲ್ಲಿ ಕೃತಿನಿರ್ಮಿತಿ ಗಮ್ಯ. ಆವರೆಗೂ ಉದ್ವೇಗ ಭೂತದಂತೆ ಕೃತಿಕಾರನನ್ನು ಹಿಡಿದಿರುವುದು. ಭೂತವನ್ನು ಹೊರಹಾಕದ ಹೊರತು ಅದರ ಒತ್ತಾಯವೂ ನಿರ್ಬಂಧವೂ ತಪ್ಪವು; ಅದರಿಂದ ಬಿಡುಗಡೆಯಿಲ್ಲ. ಧ್ಯಾನಸಮಾಧಿಗಳಲ್ಲಿ ಶಾಂತಿ ಉಂಟು. ಇಲ್ಲಿ ಮುಂಗಾರಿನ ಕೆರಳು, ಬಿರುಸು, ಅಬ್ಬರ, ಶೃಂಗಾರ ವಿಲಾಸ ಇರುತ್ತವೆ. ಎರಡೂ ಕಡೆ ಮನೋಭೂಮಿ 'ಋತಂಭರಾ ತತ್ರ ಪ್ರಜ್ಞಾ' ಎನ್ನಬಹುದಾದದ್ದು; ಋತದ ಬೇರೆ ಬೇರೆ ಅರ್ಥಗಳಲ್ಲಿ. ಎರಡೂ ಕಡೆ ಚಿತ್ತಸಮುನ್ನತಿ ಉಂಟು. ಆದರೆ ಅದು ಬೇರೆ ಬೇರೆ ಕಾಂತಿ ಧಾತು ಗಳದು. ರಚನೆಯ ಸಮಯದಲ್ಲಿ ಕೃತಿಕಾರನ ಎಲ್ಲ ಶಕ್ತಿಯೂ ಒದಗಿ ಪ್ರಸಕ್ತ ಕಾರ್ಯಕ್ಕೆ ಬೇಕಾದ ಸಂಪತ್ತಿಯನ್ನು ಒದಗಿಸುವುದರಲ್ಲಿಯೇ ತೊಡ ಗಿರುವುದು. ಅಲ್ಲಿ ಸಮಚಿತ್ತವಾದ ನಿರಾಕುಲ ಮನೋವಿಹಾರ, ವಿಶ್ರಾಂತಿ. ಬಹುಶಃ ವಿಕಾರ, ವೇದನೆ, ತಾಪ ಯಾವದೂ ಇಲ್ಲ. ಇಲ್ಲಿ ಆ ಎಲ್ಲ ಇವೆ. ಜೊತೆಗೆ ಸ್ಫೂರ್ತಿಗೆ ಬಾಹಕವಾಗಿ ಆಳಾಗಿ ದುಡಿಯುವ ಶ್ರಮಕರ ಪ್ರಭಾವ ಗಳೂ ದ್ರವ್ಯಸಾಧನ ಸಾಮಗ್ರಿಗಳ ಕಷ್ಟಗಳೂ ಇಲ್ಲಿ ಇರುತ್ತವೆ. ಅವುಗಳ ಮೇಲೆ ಕೃತಿಕಾರನು ಸ್ಥಾಪಿಸುವ — ಸ್ಥಾಪಿಸಲಾರದ ಜಯಗಳಿರುತ್ತವೆ. ಕ್ರಿಯಾ ವಿಧಾನದ ರೋಷ ಉಗ್ರತೆಗಳೂ ಸಂತೋಷಗಳೂ ಕಾಣುತ್ತವೆ.

ಕ್ರಿಯೆ ಹೀಗಿರುವಾಗ ಸ್ಫೂರ್ತಿಗೂ ಕುಶಲ ಕರ್ಮಕ್ಕೂ ಸಂಬಂಧವೇ ನೆಂದು ಬೇರೆ ಹೇಳಬೇಕೆ? ಮನಸ್ಸಿನ ಭಾವವೂ ಝುಂಕಾರವೂ ಬೆರಳ ಮೂಲಕ ವೀಣೆಗೆ ಹೇಗೆ ಅವತರಿಸಿ ಎಷ್ಟು ಅಲ್ಪಕಾಲದಲ್ಲಿ ಭಾವವು ಬೆರಳಿಗೂ ತಂತಿಗೂ ಇಳಿಯುತ್ತದೆ ಎಂಬುದನ್ನು ಊಹಿಸಿ. ಕಲೆಗಾರನ ಮನಸ್ಸು,

ಹೃದಯಗಳಂತೆ ಅವನ ಕೃತಿ. ಅವನ ಶೀಲದಂತೆ ಶೈಲಿ. ಅವನ-ಅವುಗಳ ಮಟ್ಟದಂತೆ ಕೃತಿಯ ಮಟ್ಟ. ಹೀಗೆ ರೂಪಿಸಿದುದೆಲ್ಲ ಕಲಾಕೃತಿ. ಅದೆಲ್ಲ ಕಲೆಯೇ. ಅಲ್ಲಿನವುಗಳ ಪ್ರಭಾವದಂತೆ, ಯೋಗ್ಯತೆಯಂತೆ ಅಲ್ಲಿ ಹಿರಿ, ಕಿರಿ, ಸಾಧಾರಣ, ಮಧ್ಯಮ ವರ್ಗಗಳುಂಟಾಗುವುವು.

ಕೆಲವೇಳೆ ಕಲ್ಪನೆ ದೊಡ್ಡದಾಗಿ ಅದಕ್ಕೆ ಸಾಲುವಷ್ಟು ರಚನಾಶಕ್ತಿ ಇಲ್ಲದಿರಬಹುದು. ಷೇಕ್ಸ್‌ಪಿಯರ್‌ಅಂಥವನ ಶಕ್ತಿಯೇ ಏಕೋ ಏನೊ ಹ್ಯಾಮ್‌ಲೆಟ್ಟಿನ ಕಲಾಕಲ್ಪಕ್ಕೆ ಸಾಲದಾಯ್ತೆಂದು ಟಿ. ಎಸ್. ಎಲಿಯಟ್ ಅವರ ಮತ. ಈ ಟೀಕೆ ಸರಿಯೊ ತಪ್ಪೊ ಎಂಬ ವಿಚಾರ ಈಗ ಬೇಡ. ಹಾಗೆಯೇ, ಎಣಿಕೆಗಿಂತ ಚೆನ್ನಾಗುವ ಕೃತಿಗಳುಂಟು. 'ಅಯ್ಯವಾರು ಚೇಸಿಂದಿ ಕೋತಿ ಪಿಲ್ಲಾಯೆ' ಎಂಬಂತೆಯೂ ಆಗುವುದುಂಟು. ಹಾಗೇ ಅಡ್ಡಿ ಅಡಚನೆ ಉಂಟಾಗಿ ಕೃತಿ ತಡೆಯುವುದೂ ಅದರ ಅವಶೇಷ ಮನಸ್ಸನ್ನು ಬಹುಕಾಲ ಪೀಡಿಸುವುದೂ ಉಂಟು. ಈ ಶೇಷ ಕಡೆಗೆ ಯಾವ ಕೃತಿಯ ಅಂಗವಾಗು ವುದೊ ತನ್ನ ಪ್ರಾಧಾನ್ಯವನ್ನು ಉಳಿಸಿಕೊಂಡು ಎಂದಿಗಾದರೂ ಬೇರೆಕೃತಿ ಆಗುವುದೊ ಹೇಳಲು ಶಕ್ಯವಿಲ್ಲ. ಅಥವಾ, ಶಕ್ತಿಗೆ ತಕ್ಕ ವ್ಯಂಜನೆ ಇಲ್ಲದೆ ಕೃತಿಯಲ್ಲಿ ಸಡಿಲ ಕಾಣುವುದು. ತೊಡಕು, ಸಂದೇಹ ಸುಳಿಯುವುದು. ರಸ ಒಡಒಡಕು, ನೀರು ನೀರು ಆದೀತು. ಕೆಲವರ ರಚನಾಚಾತುರಿಯೂ ಉಕ್ತಿ ಸಂಪತ್ತಿಯೂ ಅವರ ಕಲ್ಪನೆ ಪ್ರತಿಭೆಗಳಿಗಿಂತ ಹೆಚ್ಚು. ನಮ್ಮ ಯಾವ ಸಣ್ಣ ಚಂಪೂಕಾವ್ಯವೂ ಇದಕ್ಕೆ ನಿದರ್ಶನ. ಚೆಲುವಿಗಿಂತ ಇಂಥಲ್ಲಿ ಬೆಡಗಿಗೆ, ಆಬ್ಬರಕ್ಕೆ ಬೆಲೆ ಬಹಳ. ಅಲ್ಲಿ ಕುಶಲಕರ್ಮ, ಕೃತಿ ಎರಡನೆ ಮಟ್ಟ ದವು. ಆದರ ಮಾಟದಲ್ಲಿ ಸತ್ವ ತನ್ನನ್ನು ಮರೆಯುವುದು. ಕೇವಲ ಕುಶಲ ಕರ್ಮ ಬಲಿತಕಡೆ ಒಂದು ನಿಮಿಷ ಚಿತ್ತರಂಜನೆಯೇನೊ ಆಗಬಲ್ಲುದು; ನಿಜವಾದ ಆನಂದವಿಲ್ಲ. ದರ್ಶನದ ಅಭಾವವೂ ಇದ್ದೀತು. ಆದರೆ ಸಮರಸ ಏರ್ಪಡಿಸಲು ಯಾವ ಸೂತ್ರನಿಯಮವೂ ಇಲ್ಲ. ರೀತಿಗಳು ಅನಂತ. ಚೆನ್ನಾ-ದುದೆಲ್ಲ ರೀತಿಯೇ, ಸರಿಯೇ. ಕೃತಿಯನ್ನು ಮಾಡುಮಾಡುತ್ತ ಕಲೆಗಾರನಿಗೇ ಚಮತ್ಕಾರಗಳೂ ಅವನ್ನು ಮೆರಸುವ ಪ್ರವೃತ್ತಿಯೊ ಉಂಟಾಗುವುದುಂಟು. ಆಗ ಅವನೇ ಕೃತಿಗೆ ಆ ಬಣ್ಣದ ಕುಚ್ಚುಗಳನ್ನು ಕಟ್ಟುತ್ತಾನೆ. ಒಂದು ಉಪ ಮೆಗೆ ಬದಲು ನಾಲ್ಕು ಸಮೆಯುತ್ತಾನೆ: ಷೆಲ್ಲಿ, ಸ್ವಿನ್‌ಬರ್ನ್, ರತ್ನಾಕರ ವರ್ಣಿ ಇವರು ಇದಕ್ಕೆ ಉದಾಹರಣೆಗಳು. ಒಂದು ತಾಳಕ್ಕೆ ಆಡುವಾಗ ಹತ್ತು

ಹೆಚ್ಚೆಯ ಬಡಿತ, ವಿಲಾಸ ಕಟ್ಟುವುವು. ಅದೊಂದು ಬುದ್ಧಿಯ ಸೊಕ್ಕು. ಇಲ್ಲಿ ಪದದ ಮಿತಿ ಮೀರಬಲ್ಲುದು.

ಕಲೆಯ ಸ್ವರೂಪವನ್ನು ಯೋಚಿಸಿದಾಗೆಲ್ಲ ನನಗೆ ಶ್ರೀ ಡಿ. ವಿ. ಗುಂಡಪ್ಪ ನವರ 'ನಿವೇದನ' ನೆನಪಾಗುವುದು. ಅಲ್ಲಿನ ಒಂದು ಪದ್ಯ

ಮನಕೆ ತೋರ್ಪ ಸೊಬಗನೆಲ್ಲ
ತನಗೆ ತುಷ್ಟಿಯಪ್ಪ ತೆರದಿ
ಜನಕೆ ನುಡಿಯಲರಿವ ಸುಕವಿ । ತಿಲಕನಾತನು
ಅನುಭವಿಸಿದ ಬರೆವ ಕಲೆಯ । ಕಲಿತನಾತನು —

ಎಂದು ನುಡಿಯುತ್ತದೆ. ಇದು ಕವಿ ಮತ್ತು ಕಾವ್ಯಲಕ್ಷಣವನ್ನು ತಿಳಿಸುತ್ತದೆ. ಹಾಗೆಯೇ ಎಲ್ಲ ಕಲೆಗಳ ಮೂಲಸ್ವರೂಪವನ್ನೂ ಸಾಧಾರಣ್ಯದಿಂದ ತಿಳಿಸುತ್ತದೆ. ಈವರೆಗೆ ನಾನು ಆಡಿರುವುದನ್ನೆಲ್ಲ ನಾಲ್ಕು-ಆರು ಸಣ್ಣ ಸಾಲುಗಳಲ್ಲಿ ಅಡಕವಾಗಿ ಸುಂದರವಾಗಿ ತಿಳಿಸುತ್ತದೆ. ಈಗಿನ ವಿಷಯಕ್ಕೂ ಸಾಹಿತ್ಯ ವಿಮರ್ಶೆಗೂ ಸಂಬಂಧಿಸಿದ ಹಲವು ಮುಖ್ಯ ಮಾತುಗಳು ಇಲ್ಲಿ ಬಂದಿವೆ ಕೂಡ. ಸೊಬಗು, ತುಷ್ಟಿ, ಜನಕೆ ನುಡಿವುದು, ಅನು, ಕಲೆ–ಈ ಮಾತುಗಳು ಸ್ಫೂರ್ತಿ ಕಲೆಗಾರಿಕೆಗಳಿರಡಕ್ಕೂ ಅತ್ಯಾಪ್ತವಾಗಿ ನಲುವಳಿಯಾಗುವವು. ನಾವಿಂತಿಗೆ ( ಕಲೆಗಾರರಿಗೆಲ್ಲ ಸಾಧಾರಣವಾಗಿ ) ತೋರುವುದೆಲ್ಲ-( ಸ್ಫೂರ್ತಿಗೊಂಡಾಗ )– ಸೊಬಗೇ ಆಗದಿರಬಹುದೇನೊ. ಅದಲ್ಲದ ಸಂಗತಿಗಳ ವ್ಯಂಜನೆಯೂ ಕಲೆಯಾಗಬಲ್ಲದು. ತಮ್ಮ ಎಲ್ಲ ಕೃತಿಗಳಲ್ಲಿಯೂ, ಶ್ರೇಷ್ಠ ಕವಿಗಳೆನ್ನುವವರಿಗೆ ಕೂಡ ತುಷ್ಟಿ ಬಾರದಿರುವುದುಂಟು. ಜನ ಹೊಗಳಿ ಹಿಗ್ಗುತ್ತಿರುವ ಕೃತಿಗಳಲ್ಲಿ ಮೂಡದೆ ತಮ್ಮೊಳಗೇ ಹುಮ್ಮಿಟ್ಟಿದ ಯಾವವೊ ಸೂಕ್ಷ್ಮಗಳು ಕೃತಿಕಾರರನ್ನು ಕೊರಗಿಸುವುದುಂಟು. ಇದು ಅವರ ಅಯೋಗ್ಯತೆಯ ದ್ಯೋತಕವೇ ಆಗಿರಬೇಕಾಗಿಯೂ ಇಲ್ಲ. ಹಾಗೆಯೇ ಜನಕ್ಕೆ ನುಡಿಯುವ ಕ್ರಿಯೆ ಕವಿಯ ಮೂಲಉದ್ದೇಶದಲ್ಲಿ ಜೀವಾಂಶವಾಗಿ ಘಟಕವಾಗಿ ಇರಬೇಕಾದ್ದೂ ಇಲ್ಲ. ಕೇಳಲು ಬೇರಾರೂ ಇಲ್ಲದಿರುವಾಗ ಹಾಡಿಕೊಳ್ಳುವುದು ಆನಂದವಾದೀತು. ಚಿತ್ರಿಸಬೇಕೆನ್ನಿಸಿತು, ಚಿತ್ರಿಸಿದೆವು; ಹಾಡಬೇಕೆನ್ನಿಸಿತು ಹಾಡಿದೆವು ಎಂಬುದುಂಟು. ಅಷ್ಟು ಪ್ರಕಾಶವಾಗಿ ಕೂಡ ಈ ಕ್ರಿಯೆ ನಡೆಯಬೇಕಾಗಿಲ್ಲ–ಕೃತಿಯ ಹುಟ್ಟಿಗೆ.* ಸ್ವಬಾಧಾ ನಿವಾರಣೆಗಾಗಿ, ಒತ್ತುತ್ತಿರುವ

* Expression is not Communication ಎಂಬ ಮಾತನ್ನು ಹೋಲಿಸಿ.

ಪೀಡೆಯನ್ನು ಹೊರಹಾಕುವುದಕ್ಕಾಗಿ ಕೃತಿ ನಿರ್ಮಾಣವಾಗಬಲ್ಲುದು. ಅನುಪೆಂಬ ಮಾತು ಕೂಡ ಹೀಗೆಯೇ. ಪ್ರತಿ ಕೃತಿಗೂ ಒಂಟುವ ಒಂದು ಅನುವುಂಟು. ಕಲೆಯ ಹೊಮ್ಮಿನಲ್ಲಿ ಅದು ಸೇರಿ ಬಂದಾಗ ಮಾತ್ರ ಅದರ ವೈಭವ ಸಹಜ. ಕಲಾವಿಮರ್ಶೆಯಲ್ಲಿ ಅದನ್ನೇ ನಾವು ಹುಡುಕುತ್ತಿರುವುದು. ಕಲಿತನಾತನು ಎಂಬಲ್ಲಿ ಅಭ್ಯಾಸ, ಅನುಕರಣೆ, ವ್ಯವಸಾಯಗಳಿಂದ ಬಂದ ಕಲ್ಪಿಯೊಂದನ್ನು ಮಾತ್ರವಲ್ಲ ಇಲ್ಲಿ ಹೇಳುತ್ತಿರುವುದು. ಅವನ ಜಾಣತನ ಹೊಸಹೊಸದಾಗಿ ಒಳಗಿನ ಅನುಭವವನ್ನು ರೂಪಿಸುತ್ತದೆ, ಸಾಧಿಸುತ್ತದೆ ಎಂಬುದನ್ನು ಈ ಪದ್ಯ ಸಾಕಲ್ಯದಿಂದ ಸೂಚಿಸುತ್ತದೆ.

ಬೇರೆ ಪ್ರಕರಣ ಬೇರೆ ಪ್ರಯೋಜನಕ್ಕಾಗಿ ಬರೆದ ಪದ್ಯವೊಂದು ವಿಮರ್ಶೆಯ ಗದ್ಯ ವಿವರಗಳನ್ನೆಲ್ಲ ತಿಳಿಸತೊಡಗಲನುವಾಗದು. ಆದರೆ ನಾವು ವಿವರಿಸುತ್ತಿರುವ ವಿಷಯವನ್ನು ಕುರಿತ ಮುಖ್ಯಾಂಶಗಳ ಸ್ಥಾನ ಸಂಬಂಧಗಳು ಅತಿ ರಮ್ಯವಾಗಿ ಅತಿ ಸರಳವಾಗಿ ಅಲ್ಲಿ ವರ್ಣಿತವಾಗಿವೆಯೆಂದು ಹೇಳುತ್ತಿದ್ದೇನೆ.

---

# ಭಾರತ ಸಂಸ್ಕೃತಿ - ಧರ್ಮ

## ( ಇಂದಿನ ಪರಿಸ್ಥಿತಿ )

ಸಂಸ್ಕೃತಿ ಮಾನವರಿಗೆಲ್ಲ ಸಾಮಾನ್ಯವಾಗಿ ಸಲ್ಲಬಲ್ಲ ಮಾತು. ಹುಟ್ಟಿದುದು ಹುಟ್ಟಿದಂತಿರದೆ ಎಲ್ಲಿ ಮೇಲ್ಪಡುತ್ತದೆಯೊ ಅಲ್ಲೆಲ್ಲ ಸಂಸ್ಕರಣ ಕ್ರಿಯೆ ಇದೆ. ಗಡಸು ಮೃದುವಾಗಿ, ಒರಟು ನಯವಾಗಿ, ಕಠಿಣ ಕರಗಿ, ಓರೆ ಕೋರೆ ನೇರಗೊಂಡು, ವಿಕಾರ ತಿದ್ದಿ ಚೆಲುವಾಗಿ ಎಲ್ಲಿ ಬದುಕೂ ಕೆಲಸವೂ ಕಾಣುವುವೊ ಅಲ್ಲೆಲ್ಲ ಸಂಸ್ಕಾರಕಾರ್ಯ ನಡೆದಿರುತ್ತದೆ. ಇದ್ದದ್ದು ಚೆನ್ನಾಗುವುದು, ಕಂಡದ್ದನ್ನೂ, ಸಿಕ್ಕಿದುದನ್ನೂ ಚೆನ್ನಮಾಡುವುದು—ಇದೇ ಆ ಕೆಲಸದ ಲಕ್ಷಣ. ಇದು ಮಾನವರಿಂದಾದ್ದು ; ಆ ಮಟ್ಟಿಗೆ ಕೃತಕ. ರೂಕ್ಷವಾದ್ದೊಂದೇ ಅಲ್ಲ ನಯವಾಗುವುದು : ನಯ ನಯತರವಾಗುವುದು ; ಇದು ಈ ರೂಪದಲ್ಲಿ ರೂಕ್ಷ ಎಂಬ ನಿರ್ಣಯ ; ನಯಗೊಳಿಸಲು ಇಷ್ಟ ; ಹೀಗೆ ಹೀಗೆ ಮಾಡಿದರೆ ನಯವಾಗುವುದು ಎಂಬ ತಿಳಿವಳಿಕೆ ; ಇವೆಲ್ಲದರಲ್ಲಿ ಅಡಗಿರುವ ಬೆಲೆ, ತೂಕ, ಪ್ರಮಾಣಗಳ ಪ್ರಕಾಶ ; ಎಲ್ಲಕ್ಕಿಂತ ಮೇಲಾಗಿ ತಾರತಮ್ಯ ವಿವೇಕ—ಇವು ಸಂಸ್ಕೃತಿಯ ಪರ್ಯಾಲೋಚನೆಗೆ ಸೇರಿದ ಸಂಗತಿಗಳು. ಒಳಗೆ ಅಡಗಿದ್ದುಕೊಂಡು ಶ್ರೇಷ್ಠವಾದುದಕ್ಕೆಲ್ಲ ಒಲಿದು ಒಲಿದು ಒದಗುವ ಭಕ್ತಿ ( 'An inward loyalty to the best' ) ಇದರ ಜೀವಾಂಶ. ಅದು ಹೀಗೆ ಹೀಗೆ ಇರುತ್ತದೆಯೆಂದು ಪಟ್ಟಿ ಮಾಡಿ ತೋರಿಸುವುದು ಶಕ್ಯವಿಲ್ಲ. ಇರುವಲ್ಲಿ ಅದರ ಪ್ರಭಾವ, ಪ್ರಕಾಶ ಹೊಮ್ಮಿ ತೋರುವುದು. ಅನುಭವವೇದ್ಯವಾಗುವುದು. ವ್ಯಕ್ತಿಯ ಸಂಸ್ಕಾರ, ಒಂದು ಜನವರ್ಗದ ಸಂಸ್ಕಾರ ಒಂದು ಕೃತಿಯಲ್ಲಿ ರೂಪಗೊಂಡ ಸಂಸ್ಕೃತಿ ಈಯೆಲ್ಲ ಅದರ ಪ್ರಕಾರಗಳೇ. ಇವೆಲ್ಲ ಒಂದು ಅವಯವಿಯಲ್ಲಿನಂತೆ ಒಂದರೊಳಗೊಂದು ಹದವಾಗಿ ಸಮರಸದಲ್ಲಿ ಸೇರಿಕೊಂಡು ದೊಡ್ಡದು ಸಣ್ಣದನ್ನು ಪೋಷಿಸಿ, ಎರಡೂ ಪರಸ್ಪರ ಅವಕಾಶಕೊಟ್ಟು ಪರಿಮಳಗೊಂಡಾಗಲೇ ಸಂಸ್ಕೃತಿ ಹಿರಿದಾಗುವುದು. ಅದು

ಒಂದು ಶಕ್ತಿ ಎನ್ನುವುದಕ್ಕಿಂತ ಒಂದು ಪ್ರಭಾವವೆನ್ನಬಹುದು. ಹೇಗೇ ಇರಲಿ, ಆಗಲಿ, ಮನುಷ್ಯನು ತನ್ನನ್ನೂ ತನ್ನ ಸುತ್ತಲ ಪ್ರಪಂಚವನ್ನೂ ಉತ್ತಮ ಪಡಿಸಿಕೊಳ್ಳಲೂ ದಿನದಿನಕ್ಕೆ ತನ್ನನ್ನೇ ಬಹುಶಃ ಮೀರಿಸಿಕೊಳ್ಳಲೂ ಮಾಡುವುದೆಲ್ಲ ಸಂಸ್ಕಾರ ಕ್ರಿಯೆಯೇ. ಸಂಸ್ಕೃತಿ ಒಂದು ವಸ್ತುವಲ್ಲ; ಒಂದು ವ್ಯಾಪಾರವಲ್ಲ; ಜೀವದ ಮತ್ತು ಜೀವನದ ಒಟ್ಟು ಒಂದು ರೀತಿ; – ಲೋಕದಲ್ಲಿ ನಡೆವುದಕ್ಕೆ ಮನಸ್ಸು, ನಡತೆ ಹೊಂದಿಕೊಳ್ಳುವ ಒಂದು ರೀತಿ. ಅದರ ಒಳಗೆ ಅಡಗಿರುವ ಎಲ್ಲ ವಿನಯಶಕ್ತಿಗಳ ಮೂಲಧಾತು. ರಸದ ಸವಿಯಂತೆ, ಹೂವಿನ ಪರಿಮಳದಂತೆ ಅದರ ಪ್ರಕಾಶ. ಅದು ಎಲ್ಲ ಯೋಜನೆ ಎಲ್ಲ ಶಿಕ್ಷಣದ ಗಮ್ಯವೆನ್ನುವಾಗ ಕೂಡ ಅವುಗಳ ಹೃದಯದೊಳಗೇ ನಿಂತು ಅವನ್ನು ನಡಸುವ ಒಂದು ಪ್ರಭಾವವಿಲಾಸವಾಗುವುದು.

ಎಲ್ಲ ದೇಶ ಕಾಲಗಳಲ್ಲಿಯೂ ಒಂದೊಂದು ಬಗೆಯ ಸಂಸ್ಕಾರವಿರುವಾಗ ಕೆಲವು ಮೇಲು, ಕೆಲವು ಅಷ್ಟು ಮೇಲಲ್ಲ ಎಂಬ ತಾರತಮ್ಯ ಗೋಚರಿಸುತ್ತದೆ. ಈ ಮಟ್ಟಗಳು ವ್ಯಕ್ತಿಗಳಲ್ಲಿ, ಜನತೆಗಳಲ್ಲಿ, ಒಂದೇ ಕಾಲದ ಒಂದೇ ಜನವರ್ಗದ ಬೇರೆ ಬೇರೆ ಜನರಲ್ಲಿ ಕಂಡುಬಂದೀತು. ಇದರಿಂದ ಅವರ ಲೌಕಿಕ ಸಮಾನತೆಗೆ ಧಕ್ಕೆ ಬಂದರೇನು? ಗುಣದಲ್ಲಿ ಇದು ಮೇಲು, ಇದು ಮಧ್ಯಸ್ಥ ಎಂಬ ಭೇದ ಯಾವಾಗ ಉಂಟಾಯಿತೋ ಇಂಥ ಎಣಿಕೆ ಅನಿವಾರ್ಯ. ಜನವರ್ಗಗಳಲ್ಲಿ ಪರಸ್ಪರ ವ್ಯವಹಾರ ನಡೆಯುವಾಗ ಒಂದು ಇನ್ನೊಂದರೊಡನೆ ಯಾವ ಮರ್ಯಾದೆ, ಔದಾರ್ಯ, ಸೌಹಾರ್ದ, ನ್ಯಾಯಬುದ್ಧಿ ತೋರಿಸುತ್ತವೆ? ಅದು ಸಮಾನಸತ್ವವುಳ್ಳ ವರ್ಗವಾದರೆ ಹೇಗೆ? ಸ್ವಲ್ಪ ಬೀಳೊ ದುರ್ಬಲವೊ ಅಧೀನವೊ ಆಗಿದ್ದರೆ ಹೇಗೆ? – ಎಂಬುದೂ ಸಂಸ್ಕಾರದ್ಯೋತಕವಾಗುತ್ತದೆ. ಒಂದೊಂದು ಜನತೆಯೂ, – ಎಷ್ಟು ವಿವಿಧಾಂಗಗಳದ್ದಾಗಲಿ – ಸ್ಥೂಲವಾಗಿ, ಸೂಕ್ಷ್ಮವಾಗಿ ಗುರುತಿಸಬಲ್ಲಂತೆ ಒಂದು ಒಟ್ಟು ಲಕ್ಷಣ, ಒಂದು ವಿಶೇಷ ಬಗೆ ಉಳ್ಳದ್ದು. ಅದು ಸಂಸ್ಥೆ, ಸಂಪ್ರದಾಯ, ದೃಷ್ಟಿ, ಕ್ರಿಯಾವಿಧಾನ, ಪಕ್ಷಪಾತಗಳನ್ನು ಬೆಳಗುತ್ತದೆ; ಕೆಲವನ್ನು ನಿರಾಕರಿಸುತ್ತದೆ; ಕೆಲವನ್ನು ಪ್ರತಿಭಟಿಸುತ್ತದೆ; ಕೆಲವಕ್ಕಾಗಿ ಜೀವತೆರಲು ಸಿದ್ಧವಾಗಿರುತ್ತದೆ. ಭರತಖಂಡ*ವೆನ್ನುವ ಪ್ರದೇಶದಲ್ಲಿ ವಾಸಮಾಡುವ ಜನಕ್ಕೇ ಒಟ್ಟನಲ್ಲಿ– ವಿಶೇಷವಾದ – ಸಂಸ್ಕೃತಿಯ ಚರಿತ್ರೆ ಒಂದು ಉಂಟೆನ್ನಬಹುದು.

* ಭಾರತವೆಂಬ ಮಾತಿನ ಹಿಂದೆ ಇಂದು ಪರಸ್ಪರ ವಿರುದ್ಧವಾದ ಎರಡು ಘೋರಣ

ಇದು ಮೊದಲಿಂದಲೂ ಒಂದೇ ಪ್ರಕಾರವಾಗಿದೆಯೆಂದಾಗಲಿ, ಅದಕ್ಕೆ ಬೆರಕೆ ಇಳಿದಿಲ್ಲವೆಂದಾಗಲಿ ಅಲ್ಲ. ಒಂದು ಬಗೆಯಲ್ಲಿ ಮೊದಲಾಗಿ, ಬೆಳೆದು ವಿಕಾಸ ಗೊಂಡ ಈ ಸಂಸ್ಕೃತಿಯಲ್ಲಿ ಹೋಗುವುದು ಹೋಗಿ, ಉಳಿದುದು ಉಳಿದು ಇದು ಈ ಜನದ ಲಕ್ಷಣ ; ಈ ಗುಣ, ಈ ದೋಷ, ಈ ಶಕ್ತಿ, ಈ ದೌರ್ಬಲ್ಯ ಇವರವು ಎಂಬ ಶೀಲ ಕಾಣುತ್ತದೆ. ಆದ್ದರಿಂದ ಚಾರಿತ್ರಕವಾಗಿ ಈ ಜನತೆ ಹೇಗೆ ಬದುಕಿದೆ, ಬದುಕಬಯಸಿದೆ? ತನ್ನದಾಗಿ ಯಾವ ಆದರ್ಶಗಳನ್ನು ಪುರಸಿದೆ? ಮತ, ಸಾಹಿತ್ಯ, ಕಲೆ, ಜೀವನರೀತಿ, ವ್ಯವಸ್ಥೆ ವಿರಚಿಸಿದೆ* ಇವನ್ನು ನಡಸಿ ಪ್ರಭಾವಗೊಳಿಸಿ, ಇದಕ್ಕೆ ಇಂದಿನ ಆಕೃತಿ, ವೈಲಕ್ಷಣ್ಯ ಗಳನ್ನು ತಂದುಕೊಟ್ಟಿರುವ ಪ್ರಭಾವಗಳಾವುವು ಎಂಬುದನ್ನು ವಿಚಾರಮಾಡ ಬೇಕಾಗುವುದು. ಈ ಸಂಬಂಧದಲ್ಲಿ ಇಂದಿನ ಪರಿಸ್ಥಿತಿಯನ್ನು ಕುರಿತು ಇಲ್ಲಿ ಎರಡು ಮಾತು ಹೇಳಿದೆ.

ಇಂಡಿಯದಲ್ಲಿ ನಾನಾ ಮಟ್ಟಗಳ, ನಾನಾ ಬುಡಕಟ್ಟು, ಮನಸ್ಸು, ಮತ, ಭಾಷೆ ಉಳ್ಳ ಜನ ಇದ್ದಾರೆ. ಮೊದಲಿದ್ದುವೆನ್ನಬಹುದಾದ ಸ್ವಂಥ ನಾಗ, ದ್ರಾವಿಡಗಳ ಲಕ್ಷಣ ಒಂದೋ, ಮರೆಯಾಗಿದೆ ; ಇಲ್ಲವೇ ಅಡಗಿ ಹೋಗಿದೆ.† ಅಂತೂ ಆರ್ಯದ್ರಾವಿಡಗಳೆನ್ನಬಹುದಾದ ಎರಡು ಮುಖ್ಯ ಪ್ರಭಾವಗಳು ಬೆರೆದು ಒಂದು ಪ್ರಧಾನ ಜನವರ್ಗ ಇಲ್ಲಿ ರೂಪುಗೊಂಡಿದೆ. ಸೇತುವಿಂದ ಹಿಮಗಿರಿಯವರೆಗೂ, ಕಚ್ಛದಿಂದ ಕಲ್ಕತ್ತೆಯವರೆಗೂ ಹರಡಿರುವ ಈ ನಾಡಿನಲ್ಲಿ 'ಹಿಂದೂ' ಎಂಬ ಹೆಸರಿನದು ಹೆಚ್ಚು ಭಾಗ. ಆದರೆ ಇದು ಈಚಿನ ಹೆಸರು. ಈ ಮಾತಿನಲ್ಲಿ ವೈದಿಕ, ಅವೈದಿಕ ಎರಡೂ ಸೇರಿವೆ. ಇಲ್ಲ

---

ಗಳಿರುವುದನ್ನು ಕಾಣಬಹುದು. ಇಂಡಿಯಾ ಎಂಬ ಹೆಸರು ಪರಕೀಯವೆಂದು ಆದರ ಮೇಲಿನ ಅಸಹನೆಯಿಂದ ( India, i. e., Bharat ) ಎಂಬ ರಾಜ್ಯ ಘಟನೆಯ ಸೂತ್ರದಲ್ಲಿ ಹಿಂದೂಭಕ್ತಿಯಾಗಿ ಅದು ಸೇರಿಸಿದರೆ, ಯಾವಾಗ ಇಂಡಿಯಾ ಒಡೆದು ಎರಡಾಯಿತೋ ಆಗ ಇಂಡಿಯಾ ಎಲ್ಲಿದೆ ? ಈಗಿರುವವು ಭಾರತ ಪಾಕಿಸ್ತಾನ ಎರಡೇ. ಎಂಬಲ್ಲಿ ಈ ದೃಷ್ಟಿಭೇದ ರಸಭೇದವನ್ನೇ ತರುತ್ತಿದೆ. ಸದ್ಯಕ್ಕೆ ಇದು ವಿಚಾರ್ಯವಲ್ಲ.

* ಈ ಎಲ್ಲದರಲ್ಲಿಯೂ ಇವೊತ್ತು ಭಾರತ ಸ್ವಂತವಾಗಿ ಏನು ಹೊಸತನ್ನೂ ತೋರಿಸದೆ, ಎರೆಯದೆ ಬರಡಾಗಿರುವಂತಿದೆ.

† ಎಲ್ಲಿಯೋ ಆಗಲಿ ಅಂಥವನ್ನು ಪೂರ್ತಿ ಅಡಗಿಸಲಾದೀತೆ, ಅಡಗಿಸುವುದು ಸರಿಯೆ, ಆದರಿಂದ ಸಂಸ್ಕೃತಿಯ ರಸಸೃಷ್ಟಿಗೆ ಭಂಗವಿಲ್ಲವೆ ಎಂಬ ಪ್ರಶ್ನೆಗಳು ಈಗ ಬೇಡ.

ವಾದರೆ ಬೌದ್ಧ, ಜೈನ, ವೀರಶೈವ, ಸಿಖ್ ಪಂಥಗಳು ಎಣಿಕೆಗೆ ಸೇರವು. ಸದ್ಯಕ್ಕೆ ಈ ಎಲ್ಲವೂ ಒಂದು ಮಹಾಸಂಪ್ರದಾಯಕ್ಕೆ ಒಳಪಟ್ಟವು, ಆ ಮೂಲ ಧರ್ಮದ ಮಾರ್ಪಾಡುಗಳು, ಶಾಖೆ ಸಂಸ್ಕರಣಗಳು, ಗುರುಪರಂಪರೆಯ ಒಂದೆರಡು ಪ್ರಕಾರವನ್ನು ಮಾತ್ರ ವಿಶೇಷವಾಗುಳ್ಳವು ಎಂದಿಟ್ಟುಕೊಳ್ಳಬಹುದು. ಇವುಗಳ ಸಾರ ಒಟ್ಟು ಭಾರತಸಂಸ್ಕೃತಿಗೆ ಶಕ್ತಿ, ಕಳೆ ಕೊಟ್ಟಿದೆ. ಕಾಲದಿಂದ ಕಾಲಕ್ಕೆ ಉಂಟಾದ ಎಲ್ಲ ಚಳವಳಿ, ಚಟುವಟಿಕೆಗಳೂ ತಮ್ಮ ಪ್ರಭಾವ ಬೀರಿ ಈ ಸಂಸ್ಕೃತಿಯನ್ನು ಇಂದಿನಂತೆ ಮಾಡಿವೆ. ಅದು ಚರಿತ್ರೆಗೆ ಸಂಬಂಧಿಸಿದ ವಿಷಯ. ಹಾಗೇ ಇಲ್ಲಿಗೆ ಹೊರಗಿಂದ ಬಂದ ಇಸ್ಲಾಂ, ಕ್ರೈಸ್ತ, ಪಾರ್ಸಿ ಧರ್ಮಗಳೂ ತಂದು ಸೇರಿಸಿದ ನೀತಿ, ವ್ಯಾವಹಾರ, ಧ್ಯೇಯಗಳ ಅಂಶಕೂಡ.* ಇವುಗಳಲ್ಲಿ ಕೆಲವು ಮೂಲ ಸತ್ವವನ್ನು ಪೋಷಿಸುವವು. ಕೆಲವು ಇನ್ನೂ ಹೊಂದದೆ ಸೆಡೆತು ನಿಂತಿರುವವು. ಜೊತೆಗೆ ಹೊಸಕಾಲದ ವಿಜ್ಞಾನ, ಯಂತ್ರಶಿಲ್ಪ, ಲೋಕವೆಲ್ಲ ಹತ್ತಿರ ಸರಿದದ್ದರಿಂದ ಉಂಟಾಗಿರುವ ವ್ಯತ್ಯಾಸಗಳು, ಸಕಲ ವ್ಯಾಪಕವಾಗುತ್ತಿರುವ ಸಾಮಾಜಿಕ, ರಾಜಿಕ ಧ್ಯೇಯಗಳು — ಇಂದಿನ ಪರಿಸ್ಥಿತಿಯ ವಿವೇಚನೆಯನ್ನು ತೊಡಕುಗೊಳಿಸಿವೆ. ಆಳದಲ್ಲಿ ಘರ್ಷಣೆ ಉಂಟಾಗಿದೆ. ಅವನ್ನು ಒಳಕ್ಕೆ ಸೇರಿಸಿ, ಜೀರ್ಣಿಸಿಕೊಂಡು ತನ್ನ ವಿಶೇಷ ಗುಣವನ್ನು ಉಳಿಸಿಕೊಂಡರೆ ಮಾತ್ರ ಭಾರತಸಂಸ್ಕೃತಿ ಸ್ವರಸದಲ್ಲಿ ಉಳಿದೀತು. ಇಂದು ಎಲ್ಲ ನಾಡುಗಳಲ್ಲಿಯೂ ಕಾಣುವ ಸಂಸ್ಕೃತಿಯ, — ಧರ್ಮದ ಒಳಕೋಟಲೆ ಇವೊತ್ತು ವಿಚಾರಶೀಲರಾದವರನ್ನು ಕೆರಳಿಸಿ ಅಶಾಂತಗೊಳಿಸಿದೆ. ನಾಳೆ ಸಮಾಜವನ್ನೆಲ್ಲ ತಳಮಳಗೊಳಿಸಿ ಜೀವನದ ಗುರಿಗಳನ್ನೂ ಹದಗಳನ್ನೂ ಬದಲಿಸುವ ಶಕ್ತಿಯಾಗುತ್ತದೆ. ವ್ಯಕ್ತಿಸ್ವಾತಂತ್ರ್ಯ, ಅಹಿಂಸೆ ಇವುಗಳಿಗೆ ಅನುಕೂಲವಾದ ಆವರಣ ಉಳಿದಾವೋ, ಇಲ್ಲವೇ ಅವು ಮುಳುಗಿ ಹೋದಾವೊ ಯಾರು ಹೇಳಬಲ್ಲರು?

ಭಾರತಸಂಸ್ಕೃತಿಯ ರೂಪರೇಖೆ ಯಾವದೆಂದು ತಿಳಿದು ಇಂದಿನ ಪ್ರಭಾವಗಳ ಸ್ವರೂಪವೆಂಥದು ಎಂದರಿತರೆ ಈ ಸನ್ನಿವೇಶ ಸ್ಫುಟಗೊಳ್ಳುವುದು. ಎಲ್ಲ ದೇಶಗಳಲ್ಲಿಯಂತೆಯೇ ಇಲ್ಲಿಯೂ ವ್ಯವಹಾರಜೀವನ ಮೊದಲಿಂದ ನಡೆದಿದೆ. ಸುಖ, ಸಂಪತ್ತು, ಚೆಲುವುಗಳ ಸಾಧನೆಗೆ ಇಲ್ಲಿಯೂ ಸ್ಥಾನಮಾನ ದೊರೆತಿದೆ.

---

* ಇಂದು ಭಾರತ ಧರ್ಮ, ಸಂಸ್ಕೃತಿ ಎಂದರೆ ಇವೆಲ್ಲಕ್ಕೂ ಸಲ್ಲುವದು, ಇವೆಲ್ಲವನ್ನೂ ಒಳಗೊಂಡದ್ದು ಎಂಬ ವಿಶಾಲಾರ್ಥದಲ್ಲಿ ಮಾತ್ರ ಸರಿ.

ಆದರೂ ಬಹುಮಟ್ಟಿಗೆ ಇಲ್ಲಿ ಅವಕ್ಕೆ ಗೌಣಗಣನೆಯಿತ್ತು. ಇಹಕ್ಕಿಂತ ಪರಕ್ಕೆ ಬೆಲೆಕೊಟ್ಟು, ಇದು ಕ್ಷಣಿಕ, ಶಾಶ್ವತದ ಕಡೆಗೇ ನಾವು ಗಮನವಿಡ ಬೇಕು ಎಂದಾಗ ಲೋಕಶಕ್ತಿಗಳನ್ನು ಕುರಿತ ವಿಚಾರವೂ ಲೋಕಜೀವನ ವನ್ನು ಕುರಿತ ಚರಿತ್ರೆಯೂ ವಿಶ್ವಾಸವೂ ಕಡಮೆಯಾದುವು. ಇಲ್ಲಿನ ಕಲೆ ಯಲ್ಲಿಯೂ ಕ್ರಿಯಾತಂತ್ರದಲ್ಲಿಯೂ ಪಾಶ್ಚಾತ್ಯರು ಅವಾಸ್ತವಿಕವೆನ್ನುವ ಅಂಶವೇ ಬೆಳೆಯಿತು.

ನಮ್ಮ ಜೀವನದ ಮೇಲೆ ಧರ್ಮದ್ದೇ ಪ್ರಾಬಲ್ಯವೆನ್ನುವುದು ರೂಢಿ. ಜನದ ಖಾಸಗಿ ಬದುಕು, ಸಮಾಜಜೀವನ, ನಡೆನುಡಿ, ಆಹಾರ, ವಿಹಾರ, ಸಂಸ್ಥೆ, ಸಂಪ್ರದಾಯ, ಎಲ್ಲವೂ ಮತಧರ್ಮ ಏರ್ಪಡಿಸಿದಂತೆ ಈ ವರೆಗೂ ಸುಮಾರು ನಡೆದುವು. ಆ ಮರ್ಯಾದೆಗಳೇ ಮರ್ಯಾದೆಗಳು ; ಆ ಬೆಲೆಗಳೇ ಬೆಲೆಗಳು ; ಆ ನಿರ್ಣಯಗಳೇ ನಿರ್ಣಯಗಳು ; ಅದು ಊರಿದ ಹದಗಳೇ ಹದಗಳು. ಅಷ್ಟು ಸಾಕಲ್ಯದಿಂದ ಎಲ್ಲವನ್ನೂ ಹೊಕ್ಕು ಬಳಸಿ, ಮತಾಚಾರ ಹಿಡಿದು ನಿಲಿಸಿತ್ತು. ಪರತತ್ವ ವಿವೇಚನೆಯಲ್ಲಿಯೂ ಸ್ವೀಕಾರದಲ್ಲಿಯೂ ಎಷ್ಟೇ ಒಳ ಭೇದವಿರಲಿ ಎಲ್ಲ ದರ್ಶನಗಳೂ ಧರ್ಮವನ್ನು ಒಪ್ಪಿದ್ದುವು. ಮತ ಕಾಣಿಸಿದ ಜೀವನ ದೃಷ್ಟಿ, ಅದರ ಪರಮ ಪ್ರಭಾವ ಎಲ್ಲದರ ಮೇಲೂ ತನ್ನ ಆಜ್ಞೆ ಬೀರಿ ದ್ದಿತು. ಲೋಕಜೀವನಕ್ಕೆ ಮೀರಿದ ಆಧ್ಯಾತ್ಮಿಕ ಜೀವನ ಒಂದುಂಟು. ಅದಕ್ಕೆ ಇಲ್ಲಿನದೆಲ್ಲ ಸಾಧಕವಾಗಬೇಕು ; ಜೀವದ ಮೂಲಸತ್ವವೂ ಲೋಕದ ಮೂಲ ಸತ್ವವೂ ಸಾರತಃ ಒಂದೇ ; ಅದನ್ನು ಸಾಕ್ಷಾತ್ಕಾರ ಮಾಡುವುದು ಶಕ್ಯ ; ಯೋಗ, ಧ್ಯಾನ ಇದಕ್ಕೆ ನೆರವು ; ಇದನ್ನು ಋಷಿಗಳು ಸಾಧಿಸಿದರು ; ಅವರ ಸಂತತಿ ಕಡಿಯದೆ ನಡೆದು ಬಂದಿದೆ ; ಅದೇ ಶಾಶ್ವತ, ಸತ್ಯ ; ಲೌಕಿಕ ಜೀವನ ಅನಿತ್ಯ, ಅಸತ್ಯ – ಎಂಬದು ಬಹುಮಟ್ಟಿಗೆ ಈ ಜನ ಒಪ್ಪಿದ್ದ ತತ್ವ. ಇದರ ಪರಮ ಲಾಭವನ್ನು – ನಿಃಶ್ರೇಯಸವನ್ನು – ಸಾಧಿಸಬೇಕಾದರೆ ಲೋಕಸಂಗ್ರಹ ಮಾಡಿ ತೀರಬೇಕು ; ಕೋಟಿ ಮುಖದಲ್ಲಿ ಹೊರಗೆ ಕಾಣುತ್ತಿರುವ ಲೋಕದ ಸೇವೆ ಆ ಪರಶಕ್ತಿಯ ಸೇವೆಯೇ ; ಇದೆಲ್ಲ ಆ ಮೂಲಶಕ್ತಿಯ ಅಂಶವಾದ್ದರಿಂದ ಇದೆಲ್ಲ ಪವಿತ್ರ ; ಎಲ್ಲಕ್ಕೂ ಬಿಡುಗಡೆ ಉಂಟು ; ಎಲ್ಲಕ್ಕೂ ಸಫಲತೆ ಉಂಟು ; ಅದನ್ನು ಸಾಧಿಸುವುದು ಜೀವದ ಪರಮಪ್ರಯತ್ನವಾಗತಕ್ಕದ್ದು ; ಸೇವೆ ಮಾಡಿಸಿಕೊಳ್ಳುವ ಶಕ್ತಿ ಬೇರೆಯಲ್ಲ, ಸೇವೆ ಮಾಡುವುದು ಅನ್ಯವಲ್ಲ ; ಒಂದರ ಎರಡು ಮುಖಗಳು ಅವು – ಎಂಬ ಭಾವ ಬಾಳನ್ನು ನಡಸಿತ್ತು.

ಜನ ಸಾಮಾನ್ಯವಾಗಿ ಬಯಸುವುದು ಸಂಪತ್ತನ್ನು, ಸುಖಭೋಗಾದಿಗಳನ್ನು, ಅಲ್ಲವೆ? ಆಗಬಹುದು. ಧರ್ಮದ ಮಿತಿಗೆ ಒಳಪಟ್ಟು, ಅದಕ್ಕೆ ವಿರೋಧವಾಗದೆ ಅರ್ಥಕಾಮಗಳನ್ನು ಯಾರೂ ಸಂಪಾದಿಸಲಿ, ಅನುಭವಿಸಲಿ. ಆದರೆ ಪರಿಗ್ರಹಕ್ಕಿಂತ ದಾನ ದೊಡ್ಡದು; ಭೋಗಕ್ಕಿಂತ ತ್ಯಾಗ ಹಿರಿದು. ಇನ್ನೊಬ್ಬರ ಒಡವೆಗೆ ಆಸೆ ಸಲ್ಲದು. ತನ್ನದರಲ್ಲಿಯೇ ಅತಿ ಮಮತೆ, ಲೋಭ ಸಲ್ಲದು. ಎಂಥ ಸಮಯದಲ್ಲಿಯೂ ಉದ್ವೇಗಬೇಡ. ಕ್ರೋಧಬೇಡ. ಹೀಗೆ ಲೋಕವನ್ನೂ ಧರ್ಮವನ್ನೂ ಗಳಿಸಿ ಲೋಕಾತೀತವಾದ ಮೋಕ್ಷವನ್ನು* – ಇಲ್ಲೆ – ಪಡೆಯಬಹುದು : ಅನಾಸಕ್ತಿ, ನಿರ್ಮೋಹ, ತ್ಯಾಗ, ವೈರಾಗ್ಯಗಳ ಮೂಲಕ ಅದನ್ನು ಸಂಪಾದಿಸಬೇಕು. ಕರ್ಮ, ಭಕ್ತಿ, ಜ್ಞಾನ, ವೈರಾಗ್ಯ – ಯಾವ ಮಾರ್ಗವನ್ನೂ ಹಿಡಿಯಬಹುದು, – ಅವರವರ ಜಾಯಮಾನ, ಒಲವು ಶಕ್ತಿಗಳಿಗೆ ತಕ್ಕಂತೆ. ಗಮ್ಯವೇನೋ ಅದು. ಜನ್ಮಾಂತರಗಳುಂಟು. ಅವರವರ ಕರ್ಮಬಂಧದಂತೆ ಇವು ಉಂಟಾಗುವುವು. ಅದೇ ಆತ್ಮದ ಚರಿತ್ರೆಯನ್ನು ಒಂದಾಗಿ ಬೆಸೆವ ಸೂತ್ರ. ಅಷ್ಟೇ ಏನು? ಆಯಾ ಕರ್ಮ ಕಥೆಯೇ ಆಯಾಜೀವದ ಚರಿತ್ರೆ. ಹಿಂದಿನ ಕರ್ಮದ ಫಲವನ್ನು – ವ್ಯಕ್ತಿಗಳೂ ಜನತೆಗಳೂ ಸಂಸ್ಥೆಗಳೂ ಭೋಗಿಸಿಯೇ ತೀರಬೇಕಾದರೂ ಮುಂದಿನ ಮೇಲ್ಮೆಗೆ ಸತ್ಕರ್ಮ – ನಿಷ್ಕರ್ಮ ಸಾಧಕವಾಗುವುವು. ಇಲ್ಲಿಯೇ ಆಗಲಿ, ಆಮೇಲಾಗಲಿ, ಸ್ವರ್ಗಾದಿಗಳೊ ಸಾಕ್ಷಾತ್ಕಾರವೊ ದೊರೆಯುವುವು, ಇದು ಖಂಡಿತ, – ಎಂಬ ತಿಳಿವು ಜೀವನದ ದಿಕ್ಕಾಯಿತು. ಸಣ್ಣ ವ್ಯಕ್ತಿಗಳಿಂದ ಹಿಡಿದು ರಾಜಸಂರಾಜರ ನಡತೆಯವರೆಗೂ ಈ ಧರ್ಮ ಬದುಕಿನ ಪ್ರಕಾರವನ್ನು ನಿರ್ದೇಶಿಸಿತು; ಶಾಸನ ಮಾಡಿತು. ವೇದ, ಸ್ಮೃತಿ, ಇತಿಹಾಸ, ಪುರಾಣಗಳು ಈ ಧರ್ಮದ ಸ್ವರೂಪವನ್ನು ತಿಳಿಸಿದುವು, ವಿವರಿಸಿದುವು. ಇವುಗಳಲ್ಲಿ ಯಾವ ಅಂಶವನ್ನು ಕುರಿತಾಗಲಿ ಸಂದೇಹ ಬಂದಾಗ ಈ ಪ್ರಮಾಣಗಳ ಜೊತೆಗೆ

---

* ಇದಕ್ಕೆ ಬಿಡುಗಡೆ ಎಂದರ್ಥ; ಒಳ ಹೊರ ನಿರ್ಬಂಧ ಕಾರ್ಪಣ್ಯಗಳಿಂದ ಈ ಬಿಡುಗಡೆ ಬೇಕು. ಅಜ್ಞಾನ, ದಾರಿದ್ರ್ಯ, ಸಂಕೋಚ, ಸಂಸಾರ, ಕರ್ಮ, ಅಭಿಮಾನ ಎಲ್ಲದರಿಂದಲೂ ಈ ಮುಕ್ತಿ ಬೇಕು. ಮುಕ್ತನನ್ನು ತಯಾರಿಸುವ ವಿದ್ಯೆಯೇ ವಿದ್ಯೆ, ಅದರ ಸಾಧನೆಯೇ ಎಲ್ಲ ಶಿಕ್ಷೆ ವಿನಯಗಳ ಪರಮ ಗುರಿ. [The aim of all Education is the evolution or the creation of the Free Man] ಸಾ ವಿದ್ಯಾ ಯಾ ವಿಮುಕ್ತಯೇ — ಎಂಬ ಮಾತುಗಳನ್ನು ಹೋಲಿಸಿ.

ಲೋಕಾಚಾರ, ಕುಲಾಚಾರ, ಶಿಷ್ಟಾಚಾರ ನಡತೆಯನ್ನು ತಿಳಿಸುತ್ತವೆಂದರು. ಅಲ್ಲಿಗೂ ಹರಿಯದುದನ್ನು ಆತ್ಮತುಷ್ಟಿಯಿಂದ ನಿರ್ಣಯಿಸಿಕೊಳ್ಳಿ, ಅಂತಃಕರಣವೇ ಪ್ರಮಾಣ ಎಂದು ತಿಳಿಸಿದರು. ಮಹಾಪುರುಷರ, ಸಾಧುಸಂತರ† ಜೀವನ ನಾಡಿನಲ್ಲಿ ಒಂದು ಭಕ್ತಿಯನ್ನೂ ಒಂದು ಆದರ್ಶವನ್ನೂ ಹರಡಿತು. ಒಂದು ರೀತಿಯಲ್ಲಿ ನೋಡಿದರೆ ಶ್ರುತಿ, ಸ್ಮೃತಿಗಳ ಪ್ರಾಧಾನ್ಯಕ್ಕಿಂತ, ರಾಮಾಯಣ ಭಾರತಗಳಲ್ಲಿ ಪುರಾಣಗಳಲ್ಲಿ ವರ್ಣಿತರಾದ ಮಹಾತ್ಮರ ಬದುಕೇ ಜನಕ್ಕೆ ಸುಲಭ ಪ್ರಮಾಣವಾಯಿತು. ಹೀಗೆಯೆ ಭಗವದ್ಗೀತೆ, ಧಮ್ಮಪದ, ಮಹಾಪುರಾಣ, ಗ್ರಂಥಸಾಹೆಬ್, ವಚನಗಳು ಜನಜೀವನಕ್ಕೆ ಕೈದೀವಿಗೆಗಳಾದುವು. ಕಾಲ ಕಾಲಕ್ಕೆ, ಸ್ಥಳ ಸ್ಥಳಕ್ಕೆ ಅಗತ್ಯವಾದ ಮಾರ್ಪಾಡುಗಳನ್ನೂ ವರ್ಣಧರ್ಮವನ್ನೂ ವ್ಯವಹಾರಕಾಂಡವನ್ನೂ ಸ್ಮೃತಿಸಂಪ್ರದಾಯವೂ ಶಿಷ್ಟಾಚಾರವೂ ಸಂಗ್ರಹಿಸಿದುವು, ಪರಿಷ್ಕರಿಸಿದುವು, ಖಚಿತಮಾಡಿದುವು. ಋಣವೆಂಬ ತತ್ತ್ವ ಲೋಕಸಂರಕ್ಷಕರಾದ ದೇವತೆಗಳಿಗೂ ವಿದ್ಯಾದಾನ ಮಾಡಿ ಜ್ಞಾನವನ್ನು ಬೆಳಸಿರುವ ಋಷಿಗಳಿಗೂ ವಂಶವನ್ನು ನಡಸಿತಂದಿರುವ ಪಿತೃಗಳಿಗೂ ಸಲ್ಲುವ ಇಷ್ಟವಾದ ಕರ್ತವ್ಯಧರ್ಮವನ್ನು ಬೋಧಿಸಿದುವು. ಅನಿಶ್ಚಯವೂ ಸಂದೇಹವೂ ಹುಟ್ಟಿದರೆ ಯಾರು ಹೇಗೆ ನಿರ್ಣಯಿಸಬೇಕು ಎಂಬುದೂ ಸಭೆ, ಸಭ್ಯ ಇವುಗಳ ಸ್ವರೂಪನಿರ್ಣಯವೂ ಆಯಿತು. ವ್ಯಕ್ತಿಯ ದಿನಜೀವನದಲ್ಲಿ ಆತ್ಮೋನ್ನತಿಗೆ ಸಂಬಂಧಿಸಿದಂತೆ ಆಶ್ರಮಧರ್ಮವೇರ್ಪಟ್ಟಿತು. ಅದು ಸಂಸ್ಕಾರದಿಂದ ಸಂಸ್ಕಾರಕ್ಕೆ ಆತನನ್ನು ನಡಸಬೇಕಾದುದು. ಸಮಾಜದಲ್ಲಿ ಜಾತಿ, ಗುಣ, ಕರ್ಮ, ವರ್ಣಗಳ ಪ್ರಕಾರ ವರ್ಣವ್ಯವಸ್ಥೆ ರಚಿತವಾಯಿತು. ಅವರವರು ತಮ್ಮ ಸ್ಥಾನದ–'ವರ್ಣಾಶ್ರಮ'ದ–ಧರ್ಮವನ್ನು ತಪ್ಪದೆ ನಡಸಿದರೆ ಆ ಧರ್ಮ ಅವರನ್ನು ಎತ್ತುವುದು, ಉಳಿಸುವುದು ಎಂಬ ಘೋಷಣೆ ಇದ್ದಾಗ ಎಲ್ಲೆಲ್ಲಿಯೂ ನೆಮ್ಮದಿ, ನಿಶ್ಚಯ ನಟ್ಟವು. ಇವುಗಳ ನೆರವಿಗೆ ಕುಟುಂಬ ಮತ್ತು ಗ್ರಾಮಪದ್ಧತಿ, ರಾಜನೀತಿ, ವ್ಯವಹಾರಧರ್ಮ, ಆಪದ್ಧರ್ಮ, ಮೋಕ್ಷಧರ್ಮ, ಅಧಿಕಾರವರ್ಗ, ಪ್ರಚಾರ ಮತ್ತು ಪ್ರಬೋಧ

† ಬುದ್ಧ, ತೀರ್ಥಂಕರ, ಸಾಧು, ಗುರು, ಪುರಾತನ, ಆಳ್ವಾರ್, ನಾಯನಾರ್, ಪರಮಹಂಸ, ಮಹರ್ಷಿ ಯಾವ ಹೆಸರಲ್ಲಿ ಈ ಮಹಾತ್ಮವರ್ಗವಿದ್ದರೂ ಎಲ್ಲರೂ ಈ ದಿವ್ಯ ಪಂಕ್ತಿಗೇ ಸೇರಿದವರು. ಇವರ ಸಂತತಿ ಸಂತತ; ಅನಂತ. ಲೋಕ ಮುಗಿದಾಗ ಅದು ಮುಗಿದೀತು.

ವರ್ಗ ಏರ್ಪಟ್ಟವು. ಆಯಾ ವಿಧಾನವೂ ಫಲಾಫಲಗಳೂ ಖಚಿತವಾದಾಗ ಒಂದು ಧರ್ಮಸಂಪ್ರದಾಯ ನಾಡ ಜೀವನವನ್ನು ಒಂದು ಧಾತುವಿನಲ್ಲಿ ನಡಸಿತು, ಆಳಿತು, ಕಾಪಾಡಿತು.

ಇದೆಲ್ಲದರ ಹಿಂದೆ ಒಂದು ನಂಬಿಕೆ, ನಿಷ್ಠೆ, ಒಂದು ಚಾರಿತ್ರ ಇದ್ದುದ ರಿಂದ ಭಾರತಜೀವನವೂ ಅದು ಕಟ್ಟಿ ಬೆಳಸಿದ ಸಂಸ್ಕೃತಿಯೂ ಒಂದು ಜೀವಂತ ಶಕ್ತಿಯಾಗಿ ಬೆಳೆಯಿತು. ಈ ಚೌಕಟ್ಟಿನಲ್ಲಿ ಬಾಳೂ ಸಂಸ್ಥೆಗಳೂ ಬೆಳಗು ತ್ತಿರಲು ನಾಡು ಒಂದೆಂಬಂತೆ, ರಾಮೇಶ್ವರ, ಕಂಚಿ, ಗೋಕರ್ಣ, ದ್ವಾರಕಾ, ಮಧುರಾ, ಕಾಶ್ಮೀರ, ನೇಪಾಲ, ಬದರಿ, ಕೈಲಾಸ, ಕಾಶಿ, ಜಗನ್ನಾಥ ಮುಂತಾದ ಯಾತ್ರಾಸ್ಥಳಗಳೂ, ನದಿ, ಸರೋವರ, ತೀರ್ಥ, ಉತ್ಸವ, ಮೇಳ, ಪುಣ್ಯಭೂಮಿ ಮುಂತಾದವೂ ಪವಿತ್ರ ಎಂಬ ನಂಬಿಕೆ ಬೆಳೆದು ಪ್ರಾದೇಶಿಕ ಪ್ರತ್ಯೇಕತೆಗಳನ್ನು ಮೀರಿದ ಧರ್ಮಬಾಂಧವ್ಯವೊಂದಕ್ಕೆ ಗುರುತಾಯಿತು.

ಹೊಸತಾಗಿ ಬಂದುದನ್ನೆಲ್ಲ ಈ ಧರ್ಮ ಒಳಕ್ಕೆ ಸೇರಿಸಿಕೊಂಡಿತು ಅದಕ್ಕೆ ತನ್ನಲ್ಲಿ ಸ್ಥಾನಕೊಟ್ಟಿತು. ಇದು ಸಹನೆ ಔದಾರ್ಯಗಳ ಸೂಚಿಕೆ ಯಾಗಿ ನಮ್ಮ ಧರ್ಮಸಹಿಷ್ಣುತೆಯ ಚರಿತ್ರೆಯಲ್ಲಿ ಮಹಾಂಶವಾಯಿತೇನೋ ಸರಿಯೇ. ಆದರೆ ಇದರೊಳಕ್ಕೆ ಯಾವಯಾವದೊ ಅಂಶ ಸೇರಿಕೊಂಡು ಮೂಲಧಾತುವಿನ ನಿಬಿಡತೆಗೂ ಸಮವಾಯ ಘಟನೆಗೂ ಕುಂದನ್ನು ತಂದಿತು. ಇದರ ವ್ಯಕ್ತಿತ್ವದ ನಿಷ್ಠೆಗೇ ಊನ ತಂದಿತೆನ್ನಬೇಕು. ಯಾವುದಾದರೂ ಹೊರಗಿನ ಪ್ರಭಾವ ನಾಡಕಟ್ಟನ್ನು ಮುರಿದೀತೆಂಬ ಭಯ ಸುಳಿದಾಗ ಈ ಧರ್ಮ ಹಾಗೆ ಹೀಗೆ ಸಮನ್ವಯ ಮಾಡಿಕೊಂಡಿತು. ಅಲ್ಲಿನ ಮುಂದಾಳು ಗಳನ್ನು ಋಷಿ, ವೀರ, ಸಂತಪದವಿಗೆ ಸೇರಿಸಿ ಸಾಧುಮಾಡಿಕೊಂಡಿತು. ಪ್ರೂರ್ತಿ ಹೊಸ ತತ್ವವನ್ನೂ ದೃಷ್ಟಿಯನ್ನೂ ಮೆರಸಬೇಕೆಂದು ತೋರಿದಾಗ ಕೂಡ ಅವಕ್ಕೆ ಪೂರ್ವಾಚಾರ್ಯ ಪರಂಪರೆ ಇದೆ, ಅವರು ಹೇಳಿದುದನ್ನೇ ಈಗ ವಿಶದಪಡಿಸುತ್ತಿರುವುದು, ಈ ವಿವರಣ, ವ್ಯಾಖ್ಯಾನ, ವಾದಸ್ಥಾಪನ ಪ್ರಾಚೀನ ದಿಂದಲೂ ಬಂದುದೇ – ಎಂದು ನುಡಿಯಿತು. ವಿರೋಧದ ಮೊನೆಯನ್ನು ಮುರಿದು ಅದರ ವ್ಯಾಪನೆಗೆ ಅನುಕೂಲ ಮಾಡಿತು. ತನ್ನಿಂದ ಮುಂದಕ್ಕೆ ಯುಕ್ತಿಯೇ ಹೋಗಲಾರದೆಂಬ ಮಟ್ಟಿಗೆ ತರ್ಕ, ಪ್ರಮಾಣ, ಸಿದ್ಧಾಂತ ಬೆಳಸಿತು*. ಒಳಗಿನದು ಹೊರಗೆ ಹೋಗಲಾಗದಂತೆ, ಹೊರಗಿನದು ಒಳಕ್ಕೆ

* ತರ್ಕವೂ, ಯಾವುದನ್ನೂ ಅತಿಗೆ ಕೊಂಡುಹೋಗಿ ನಡೆಯುವ ಈ ಪ್ರವೃತ್ತಿಯೂ

ಬಾರದಂತೆ ಕಟ್ಟು ನಿಟ್ಟು ಏರ್ಪಟ್ಟವು. ದುರ್ಗಮ ದುರ್ಗಗಳಂತೆ ಈ ಕಟ್ಟು ಸುತ್ತ ಸುತ್ತಿಕೊಂಡಿತು. ಇದರಿಂದೆಲ್ಲ ಆಗಬಹುದಾದ ಪ್ರಯೋಜನ ಆಗಿ, ಶಾಂತಿ, ಸಮಾಧಾನ, ತುಷ್ಟಿ, ಪುಷ್ಟಿ ನಾಡಲ್ಲಿ ಬೆಳೆದವು. ಇದೊಂದು ಜೀವಂತ ಸಂಪ್ರದಾಯವಾಗಿ, ಶ್ರದ್ಧೆ ನಡಸುನವರೆಗೂ ದೊಡ್ಡದು ಹುಟ್ಟಿತು; ಫಲ ದಾನ ಮಾಡಿತು.

ಅದು ನಿಂತು ಈಗ ಬಹು ಕಾಲವಾಗಿದೆ. ಇಂದು ಈ ಸಂಪ್ರದಾಯಕ್ಕೆ ಕ್ರಿಯಾಶಕ್ತಿ, ರಸಧಾತು ಇಲ್ಲವಾಗಿದೆ. ಅದರ ಅನೇಕ ಭಾಗ ಜಡವಾಗಿದೆ, ಕಲ್ಲಾಗಿದೆ.

ಈಚೆಗೂ, ಆಗೊಂದುಸಲ ಈಗೊಂದುಸಲ ಸುಧಾರಣೆ ನಡೆದಿರುವು ದುಂಟು. ಆರ್ಯಸಮಾಜ ವೇದಮತವನ್ನು ಉಳಿಸುತ್ತೇನೆಂದು, ಬ್ರಾಹ್ಮ ಸಮಾಜ ಇದರ ಸಾರವನ್ನು ಉಳಿಸುತ್ತೇನೆಂದು, ಶ್ರೀ ರಾಮಕೃಷ್ಣಪಂಥ ಸಮನ್ವಯ ಮಾಡುತ್ತೇನೆಂದು ದುಡಿದಿವೆ. ಬ್ರಾಹ್ಮೊಪಂಥ ಬಹುಶಃ ಬಂಗಾಳಕ್ಕೆ ಮಿತವಾಗಿ ಕ್ರೈಸ್ತದಂತೆ, ಪರಕೀಯವೆಂಬಂತೆ ಕಂಡೇನೊ ಕುಂದಿದೆ. ಆರ್ಯಸಮಾಜ ವಿದ್ಯಾಸಂಸ್ಥೆಗಳನ್ನು ನಡಸಿ ಶುದ್ಧಿಗಳನ್ನು ಮಾಡಿ ಜಾತಿ ಕೆಟ್ಟವರೆಂಬವರನ್ನು ಪುನಃ ಜಾತಿಗೆ ಸ್ವೀಕರಿಸಿ, ಹಿಂದೂ ಸಮಾಜ ವನ್ನು ಚುರುಕಿನಿಂದ ಬೆಸೆಯಲು ಯತ್ನಿಸಿದೆ. ರಾಮಕೃಷ್ಣಪಂಥ ಸಾಮಾಜಿಕ ವಾಗಿ ಯಾವ ಹೊಸ ಸಂಸ್ಥೆ ಗುಂಪುಗಳನ್ನು ಸ್ಥಾಪಿಸದಿದ್ದರೂ ಸಮಾಜಹಿತ ಕಾರ್ಯದಲ್ಲಿ ತೊಡಗಿ ಧರ್ಮಪ್ರಚಾರ ಮಾಡಿದೆ. ಆದರೆ ಇವು ಯಾವವೂ ಸಮಾಜವನ್ನೆಲ್ಲ ಮಾರ್ಪಡಿಸುವ ಶಕ್ತಿಯುಳ್ಳವಾಗಲಿಲ್ಲ.

ನಮ್ಮ ಜನತೆಯನ್ನು ಇವೊತ್ತು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು: ಅಧಿಕಾರ ಮೂಲಕವೊ ವಿದ್ಯಾಶಿಕ್ಷಣ ಮತ್ತು ಸಂಚಾರ ಮೂಲಕವೊ ಪಾಶ್ಚಾತ್ಯ ರೀತಿಯಲ್ಲಿಯೇ ಬದುಕಲು ಬಯಸುತ್ತಿರುವವರು; ಆ ಅವಕಾಶ ವಿಲ್ಲದೆಯೊ ಇದ್ದೂ ಅಭಿಮಾನದಿಂದಲೊ ಭಾರತೀಯಕ್ಕೇ ಒಲಿದವರು— ಎಂದು. ಈ ಇಬ್ಬರಲ್ಲಿ ಒಳ ವಿವೇಚನೆ ಮಾಡಬಹುದು: ಪಾಶ್ಚಾತ್ಯ ರೀತಿಗೆ ಪೂರ್ತಿ ಮನಸೋತು ಭಾರತೀಯವೆಂಬುದು ಬೇರೆಯಿಲ್ಲ, ಇದ್ದರೂ ಉಳಿಯ ಲಾರದು ಎಂಬವರು; ಉಳಿದೀತು, ಉಳಿಯಬೇಕು ಎಂಬವರು. ಎರಡನೆಯ

ನಾಡಿನ ಸೃಷ್ಟಿಶಕ್ತಿಯನ್ನೂ ಕ್ರಿಯಾಶಕ್ತಿಯನ್ನೂ ಎಷ್ಟು ಕುಂದಿಸಿದವೆಂಬದನ್ನು ಒಂದು ಸಾವಿರ ವರ್ಷದ ನಮ್ಮ ಸಂಧ್ಯತೆಯ ಚರಿತ್ರೆ ಕಾಣಿಸುವುದು.

ಬಗೆಯುವರಲ್ಲಿ ಶಾಸ್ತ್ರ, ಸಾಹಿತ್ಯ, ಸಂಸ್ಕಾರವುಳ್ಳವರಾಗಿ ಪ್ರಾಚೀನ ಸಂಪ್ರದಾಯವನ್ನು ತಿಳಿದು ಅದನ್ನು ಮಾತ್ರ ಒಪ್ಪುವವರು, ಬಹುಮತಿಸುವವರು, ತಿಳಿದೊ ತಿಳಿಯದೆಯೊ ಸಂಪ್ರದಾಯವನ್ನು ಹಾಗೆ ಹೀಗೆ ನಡಸುವ ರೂಢಿಯವರೂ ಇಬ್ಬರೂ ಇದ್ದಾರೆ. ಈ ಎರಡು ಗುಂಪುಗಳ ಸುತ್ತ ಮುತ್ತ, ಈಗ ಹೀಗೆ, ಆಗ ಹಾಗೆ ಎರಡೂ ಕಡೆಯ ಭಕ್ತಿವಿಶ್ವಾಸ ಉಳ್ಳವರಿದ್ದಾರೆ. ಯಾವ ಯೋಚನೆಯ ಗೋಜಿಗೂ ಹೋಗಲಾರದವರ ಸಂಖ್ಯೆಯೇ ಎಲ್ಲಿಯೂ ಅಧಿಕ. ಯೋಚನೆ ಮಾಡದಿರುವವರಲ್ಲಿ ಮೂಢಭಕ್ತಿಯಾದರೂ ಸ್ವಲ್ಪವಿದೆ. ಅದು ಇನ್ನೂ ಕೆಲವು ಕಾಲ ನಡೆದೀತು; – ಜನದ ಆರ್ಥಿಕ ಪರಿಸ್ಥಿತಿಯೂ ವಿದ್ಯಾಶಿಕ್ಷಣವೂ ಇಂದಿನಂತೆಯೇ ಇರುವ ತನಕ. ಅವು ಉತ್ತಮಗೊಂಡರೆ ಅವರ ಮನಸ್ಸು ಹೇಗೆ ತಿರುಗುವುದೊ ಹೇಳುವುದು ಕಷ್ಟ. ಅವರ ಮತ ನಂಬಿಕೆಗಳಿಗೆ ಆಧಾರವಾದ ಪುರಾಣ, ಪುಣ್ಯಕಥೆ, ಲೋಕ ಸ್ವರೂಪ, ಆಲೋಕ ವರ್ಣನ, ಸ್ವರ್ಗ ನರಕಗಳ ಆಶೆ ಭೀತಿ, ಇವುಗಳಲ್ಲಿನ ನಂಬಿಕೆ, ಬಹುತರ ಯಾವ ಕಾರಣದಿಂದಲೇ ಆಗಲಿ ಪೂರ್ತಿ ಸಡಿಲವಾದಾಗ ಈ ಜನದ ಗತಿ – ಈ ಜನತೆಯ ಧರ್ಮಸ್ಥಿತಿ, – ಏನಾದೀತೊ ಭೀತಿಯುಂಟುಮಾಡುವಂಥದೆನ್ನಿಸುತ್ತದೆ. ತಮ್ಮ ತಮ್ಮ ಹುಟ್ಟು ಪಂಥಗಳಲ್ಲಿ ಮೂಢಶ್ರದ್ಧೆ ಅತಿಭಕ್ತಿ ಉಳ್ಳ ಇನ್ನು ಕೆಲವು ಜನಗಳಲ್ಲಿಯೂ ಹೊರ ಆಚರಣೆ ಸ್ವಲ್ಪಕಾಲ ಹೀಗೇ ಮಾರ್ಪಾಡಿಲ್ಲದೆ ನಡೆದೀತು. ಎಲ್ಲಿಯೂ ಸತ್ಯವನ್ನು ಅರಸುವ ಶ್ರದ್ಧೆ ಹುಟ್ಟಿಕೊಂಡರೆ ಅಸತ್ತು ಸುಟ್ಟು ಬೂದಿಯಾಗುವುದು, ಒಣ ಅಭಿಮಾನ ಇಂಗಿ ಹೋಗುವುದು. ಯೋಚನೆ ಮಾಡಬಲ್ಲವರಲ್ಲಿ ಕೇವಲ ಭಾರತೀಯವನ್ನೇ ನಡಸುತ್ತೇವೆನ್ನುವುದೂ ಕಷ್ಟವಾದೀತು. ಪ್ರಬಲರು, ಪುಷ್ಟರು, ವಿದ್ಯಾವಂತರು ಸ್ವತಂತ್ರ ಧೀಶಕ್ತಿಯುಳ್ಳ ಮಾನ್ಯರು ಆಧುನಿಕಕ್ಕೆ ಓಲುತ್ತಿರುವಾಗ ಇವರು ಎಷ್ಟು ಯತ್ನಿಸಿದರೂ ಶುದ್ಧ ವೈದಿಕವನ್ನು ಬಾಳುವುದು ಅಶಕ್ಯವಾಗುವುದು. ಪಾಶ್ಚಾತ್ಯಕ್ಕೆ ಪೂರ್ತಿ ತಮ್ಮನ್ನು ಮಾರಿಕೊಂಡವರ ಮಾತು ಬೇಡವೆಂದಾಗಲೂ ಅವರ ಪ್ರಭಾವವೂ ಕೈವಾಡವೂ ಇಲ್ಲಿನವರ ಮೇಲೆ ಬೀಳುತ್ತಿರುತ್ತದೆ ಎಂಬುದನ್ನು ಮರೆಯಬಾರದು. ಅವರಿಂದ ಆಗುವ ಪ್ರಯೋಜನವೂ ಅವರ ಮೋಹಕತೆಗಳೂ ಹಲವಂಶಗಳಲ್ಲಿ ಕಾರ್ಯಕಾರಿಯಾದಾವು. ಎರಡು ಸಂಪ್ರದಾಯ ದೃಷ್ಟಿ ರೀತಿಗಳನ್ನೂ ಎರಡರ ಬಲಾಬಲ ಪ್ರಯೋಜನಗಳನ್ನೂ ತಿಳಿದು ಅವುಗಳ ಸಾರಸಂಪತ್ತನ್ನು ಕೂಡಿಸಿ ಬಾಳಿಗೆ ದುಡಿಸಿ ಈ ನಾಡಿನ

ವಿಶೇಷಮಾರ್ಗವನ್ನು ನಿಲ್ಲಿಸಬೇಕೆನ್ನುವವರು ನಮಗೆ ಗಣ್ಯರು, ಮಾನ್ಯರು. ಅಂಥವರ ಸಂಖ್ಯೆ, ಗುಂಪು ಬೆಳೆಯಬೇಕು ಮಾತ್ರ.

ಇವರಲ್ಲಿ ಸುಧಾರಣೆಗೆ ಹೆಚ್ಚು ಸೋಲದೆ, ಅಲ್ಲಿ ಇಲ್ಲಿ ಸ್ವಲ್ಪ ತೇಪೆ ಹಾಕಿಕೊಂಡು ಇದ್ದುದನ್ನು ನಡಸಿದರೆ ಸಾಕು ಎಂಬ ಮಂದಗಾಮಿ ಅಥವಾ ಸ್ಥಿತಿ ಸಂರಕ್ಷಕರು ಒಂದು ಬಗೆ. ಧಾರಾಳವಾಗಿ ಮಾರ್ಪಾಡುಗಳನ್ನು ಮಾಡಿಕೊಳ್ಳೋಣ, ಇರುವದನ್ನೂ ಅವುಗಳ ಸೂತ್ರಗಳನ್ನೂ ಹಿಗ್ಗಿಸಿ ವಿಕಾಸಗೊಳಿಸಿ, ಬಿಡುವುದನ್ನು ಬಿಟ್ಟು ಹೊಸತು ಮಾಡಿಕೊಳ್ಳೋಣ ಎಂಬ ಉದಾರವಾದಿಗಳದು ಇನ್ನೊಂದು ಬಗೆ. ಇದಾವುದೂ ಸಾಲದು, ಕ್ರಾಂತಿಯೇ ಶರಣು, ಹಿಂದಿನದನ್ನು ಬುಡಮುಟ್ಟ ಕಿತ್ತುಹಾಕಿ ಜೀವನದ ಅಚ್ಚನ್ನೇ ಬದಲಾಗಿಸಿ ಪೂರ್ತಿ ಹೊಸತನ್ನು ಯೋಜಿಸಬೇಕು ಎಂಬ ತೀವ್ರವಾದಿಗಳದು ಮತ್ತೊಂದು ಬಗೆ. ಮತಧರ್ಮದ ವಿಷಯದಲ್ಲಿ ಯಾವುದನ್ನು ಮುಟ್ಟಲೂ ಭಯವೇ. ಮಾರ್ಪಾಡು ಎಲ್ಲಿಗೆ ಹೇಗೆ ಮುಗಿದೀತೆಂಬ ನಿಶ್ಚಯವಿಲ್ಲ. ಸುಧಾರಕರಲ್ಲಿ ತಾನೇ ಯಾರ ಮನಸ್ಸು – ಮಾಟ – ಮಾತು ಸರ್ವಗ್ರಾಹ್ಯ? ಯಾರ ತೀರ್ಮಾನ ಕಡೆಯದು? ನಿರ್ಣಯ ಮಾಡುವ ಬಗೆ ಯಾವುದು? ಎಂಬವು ಇಲ್ಲಿ ಕಷ್ಟಗಳು. ಹಿಂದಿನದು ಎಂಬದಕ್ಕೆ ಒಟ್ಟಿನಲ್ಲಿ ಸುಮಾರು ಒಂದು ಸಮಗ್ರ, ಒಂದು ಅಖಂಡ ದೃಷ್ಟಿ ಇತ್ತು. ಸಮಾಜದ ಮುಖ್ಯಾಂಶಗಳನ್ನು ಕುರಿತಾಗಿ ಒಂದು ಸ್ಫುಟ ವಾಣಿ ಇತ್ತು. ಇಂದಿನ ದೃಷ್ಟಿಗಳು ಅನೇಕ, ಧ್ವನಿಗಳು ಹಲವಾರು. ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತೆಂಬಂತೆ ಸುಧಾರಣೆಯ ಮಾರ್ಗಗಳು ನೂರಾರು ಕವಲಿನವು. ಟಿ. ಎಸ್. ಎಲಿಯಟ್ಟರು ಕ್ರೈಸ್ತವನ್ನು ಕುರಿತು ಆಡಿದಮಾತು ಈ ಸಂಬಂಧದಲ್ಲಿ ನಮಗೂ ಸಲ್ಲುತ್ತದೆನ್ನಿಸುತ್ತದೆ: Conservatism conserves often the wrong values; Liberalism is another name for relaxation of Discipline: Revolution is a denial of Permanent values. ಆದರೆ ಇಷ್ಟು ಮಾತ್ರ ನಿಜ: ಹಲವಾರು ಬದಲಾವಣೆಗಳಾಗಿ ಇಂದಿನ ಜೀವನರೀತಿಗೂ ರಂಗಿಗೂ ಹೊಂದದಿದ್ದರೆ ನಮ್ಮ ಸಂಸ್ಕೃತಿ ಹೆಳವಾದೀತು ಎನ್ನಿಸುತ್ತಿದೆ.

ಇಂದು ಲೋಕವೆಲ್ಲ ಒಂದು ಊರಿನ ಜನವೆಂಬಂತೆ ಜೀವನ ಬೆಳೆಯುತ್ತಿದೆ. ಹಣದ ಸಂಚಾರ ಮತ್ತು ಹಂಚಿಕೆ, ವ್ಯಾಪಾರ, ಉದ್ಯೋಗ, ಯಂತ್ರಸಾಧನೆ, ಯೋಜನೆ, ನೋಟ, ವ್ಯವಹಾರ, ಯಾನವಾಹನ ಸೌಕರ್ಯ,

ಸಂಚಾರ ಸ್ವಾತಂತ್ರ್ಯ, ವೃತ್ತಾಂತ ಸಂಗ್ರಹ, ಜನತೆಗಳ ಸಹಕಾರ, ಸಹ ಯೋಗ, ಆಟಪಾಟ, ವಿನೋದ, ಊಟ, ಉಡುಪು, ಮರ್ಯಾದೆ – ಎಲ್ಲವೂ ಲೋಕವನ್ನು ಹತ್ತಿರ ಹತ್ತಿರ ತರುತ್ತಿವೆ. ಹೊರ ಅಂಶಗಳಲ್ಲಿ ಒಂದೇ ಬುದ್ಧಿಯುದಾಗಿ ಲೋಕ ಮಾರ್ಪಡುತ್ತಿದೆ. ಪಾಶ್ಚಾತ್ಯರಾಷ್ಟ್ರಗಳ ಒಳ್ಳೆಯದು ನಮಗೆ ಒಳ್ಳೆಯದನ್ನೂ ಅವರಿಗೆ ಕೆಟ್ಟದ್ದು ನಮಗೆ ಕೆಟ್ಟದ್ದನ್ನೂ ಮಾಡುವ ವಾಗಿವೆ. ಅವರ ರೀತಿನೀತಿಗಳನ್ನು ಅರಿತು, ಕೆಲವನ್ನು ಅನುಸರಿಸದ ಹೊರತು ನಮ್ಮ ಸ್ವಾಸ್ಥ್ಯಗಳು ರಕ್ಷಿತವಾಗವೆಂಬಂತೆ ಬಲಿಯುತ್ತಿವೆ. ಹೊಂದಿಕೆ, ಅನುಕರಣ, ಸರಿಸ, ಸಿಷ್ಟತೆ, ಸಜ್ಜು ಅವರ ರೀತಿಗೆ ಪೋಟಿಯಾಗಿ ನಡೆಯು ದಿದ್ದರೆ ನಮಗೆ ನಷ್ಟ, ನಾಶ ಎನ್ನಿಸುತ್ತಿದೆ. ಹೊರಗಿನ ಈ ಪ್ರಭಾವ ಬೆರೆಯದೆ ಈ ನಾಡಿನ ಯಾರ ಯಾವ ವಿಶೇಷವೂ ಶುದ್ಧವಾಗಿ ಹಿಂದಿನಂತೆ ಉಳಿಯಲಾರದು. ಈ ಆವರಣದಲ್ಲಿ ನಮ್ಮ ಸಂಸ್ಕೃತಿ ಸತ್ವತಃ ತನ್ನ ವಿಶಿಷ್ಟತೆಯನ್ನು ಕಾದುಕೊಳ್ಳಬೇಕು. ಜನತೆಗೆಲ್ಲ ಹಬ್ಬುವಂತೆ ಇದು ಹೇಗಾಗು ವುದೋ ನೋಡಬೇಕು. ಈ ಸಮಸ್ಯೆಯೇ ಕೃತಕ, ಅನಗತ್ಯ ಎಂಬ ಮಹಾತ್ಮರ ಮಾತು ಈ ಕಷ್ಟವನ್ನು ಕೆಲವರ ಕಣ್ಮರೆಮಾಡಿದೆ. ಆದರೆ ಎಷ್ಟು ಕಾಲ ಇಂಥ ತಡೆ ತಡೆದೀತು? ನಾವು ಕಣ್ಣುಪಟ್ಟಿ ಹಾಕಿ ನಡೆದರೆ ಆಚೆ ಈಚಿನವು ಇಲ್ಲವೆಂದ ಹಾಗಾಯಿತೆ?

ಭರತಖಂಡದ ಆಧ್ಯಾತ್ಮಿಕತೆಗೆ ಎಂದಿಗೂ ಬೆಲೆಯುಂಟು. ಆದರೆ ಅದನ್ನು ಸಾಧಿಸುವುದು ವ್ಯಕ್ತಿಗಳಿಗೆ ಶಕ್ಯವೇ ಹೊರತು ಸಮಾಜಕ್ಕಲ್ಲ; ಸಮಾಜ ವಲ್ಲಿನ ಬಹು ಮಂದಿಗೆ ಶಕ್ಯವಾದೀತೆಂದೂ ಹೇಳಲಾಗದು. ಆಗುವಷ್ಟಕ್ಕೂ ಅದಕ್ಕೆ ಪೋಷಕವಾದ ಜೀವನ ಕ್ರಮವನ್ನು ವಿರಚಿಸುವ ಕಾರ್ಯ ಮಹತ್ವದ್ದೇ. ಶ್ರೇಷ್ಠರು, ಸಂತರು, ಋಷಿಪ್ರಾಯರು, ಉತ್ತಮ ಸಂಸ್ಕಾರಿಗಳು ಹುಟ್ಟಿ ಬೆಳೆಯಲು ಅವಕಾಶವಿರುವಂತೆ ಮಾಡಬೇಕಾದ್ದು ಅಗತ್ಯ. ಅಂಥವರೂ ಇಂದಿನ ಜೀವನಕ್ಕೆ ಸಹಾಯಕವಾಗದಿದ್ದರೆ, ತಮಾಷೆ ಬಂಗಲೆಗಳಲ್ಲಿ ನೋಟ ಕ್ಕಿಟ್ಟಿರುವ ವ್ಯಕ್ತಿಗಳಂತೆ, ಕಡಲ ನಡುವಿನ ಕಲ್ಲರೆಗಳಂತೆ ಆಗಿಬಿಟ್ಟರೆ ಸಾಲದು. ಬಹಳವೆಂದರೆ, ಅದು, ಒಂದು ಜೀವ ಒಂದು ಹದವನ್ನು ಸಂಪಾದಿಸಿ ರುವುದಕ್ಕೆ ಸಾಕ್ಷಿ*. ತಕ್ಷಣದ ಕೆಲವು ಫಲಗಳು ಅಲ್ಲಿ ದೊರಕೆರುವುವು. ಆದರ

* ಯಾವುದು ಹದವೆಂದು ತಿಳಿದರೆ ಅದನ್ನು ಎಲ್ಲಿಯಾದರೂ ಯಾರೂ ಸಾಧಿಸುವುದು ಯತ್ನಸಾಧ್ಯ. ಅಂಥಲ್ಲಿ ಈ ಸಂಸ್ಕೃತಿ ಆ ಸಂಸ್ಕೃತಿ ಎಂಬ ನಿರ್ಬಂಧ ಸಲ್ಲದು.

ತರುವಾಯ, ಅದರ ಹಿಂದೆ ಸುತ್ತಲ ಜೀವನ ಎಂದಿನಂತೆ ಜಡವಾಗಿಯೋ ವಿರಸವಾಗಿಯೋ ಕರ್ಕಶವಾಗಿಯೋ ತೊಳಲೀತು. ಗಾಂಧೀಜಿಯವರಂಥ ತಪಸ್ಸಾಧನೆ ಇನ್ನೊಂದು ರೀತಿಯದು. ಶ್ರೀ ಕೃಷ್ಣನ ಕಾಲದ ಈಚೆಗೆ – ಸಂಸಾರದಲ್ಲಿಯೂ ವ್ಯವಹಾರದಲ್ಲಿಯೂ ಎಲ್ಲರಂತೆ ನಡೆಯುತ್ತ, ಸಮಾಜದ ಎಲ್ಲ ರಾಜಕ ಧಾರ್ಮಿಕ ಪ್ರಸಂಗಗಳಲ್ಲಿಯೂ ಜನದ ಒಡಗೂಡಿ ಪಾತ್ರವಹಿಸಿ, ತನ್ನ ಧರ್ಮವನ್ನೂ ಲೋಕಧರ್ಮವನ್ನೂ ಸಮನ್ವಯಮಾಡಿ ಅಖಂಡ ಭರತಖಂಡದ ಪ್ರಭಾವಶಾಲಿಪುರುಷರಾಗಿ ಮೆರೆದ ವ್ಯಕ್ತಿಗಳು ಅಪೂರ್ವ. ಗಾಂಧೀಜಿಯವರಿಗೂ ಆಧುನಿಕತೆಯ ಅನೇಕ ವಿಷಯಗಳು ಒಗ್ಗಲಿಲ್ಲ. ಅದರ ಪರಿಮಂಡಲದಲ್ಲಿ ಮಹಾಶಕ್ತಿಗಳಾಗಿರುವ ಯಂತ್ರೋದ್ಯೋಗ, ಶ್ರಮಕರ ವರ್ಗದ ಸಂಯೋಜನೆ, ಅಲ್ಲಿ ಒಡ್ಡಿರುವ ಕೋಟಲೆ, ಕ್ರೋಧ, ಮತಧರ್ಮದ ಮೂಲಭೂತನಿಮರ್ಶೆ ಇವು ಅವರ ಮನಸ್ಸಿಗೆ ಹಿಡಿಸಲಿಲ್ಲ.† ನಮ್ಮ ನಾಡಿನ ಮಹಾವಾಣಿಯಂತೆ ಎಂದೆಂದಿಗೂ ಕೇಳಿಸುವ ಧರ್ಮವಾಣಿ ಅವರದಾದ್ದರಿಂದ ಅವರು ನಾಡಿನ ಪ್ರತಿನಿಧಿಯಾದರು; ಧ್ವನಿಯಾದರು. ಅವರ ಮೂರ್ತಿತ್ವ ಮಹಾ ಸತ್ವವುಳ್ಳದ್ದಾದ್ದರಿಂದ ಇದಕ್ಕೆ ನೆರವಾಯಿತು. ಹಲವು ಪ್ರಯೋಜನಗಳನ್ನು ಸಾಧಿಸಿತು.

ತಂದೆಯ ಸತ್ಯಕ್ಕಾಗಿ ತನಗೆ ಬರಬೇಕಾದ ರಾಜ್ಯವನ್ನು ಬಿಡುತ್ತೇನೆಂದು ಅಣ್ಣನು ಹೇಳಲು, ತಮ್ಮನು ಕೆರಳಿ ದಶರಥ ಭರತಾದಿಗಳನ್ನೂ ಪ್ರತಿಭಟಿಸಿದ ಎಲ್ಲರನ್ನೂ ನಿಗ್ರಹಿಸಿ ಅಣ್ಣನ ಅಧಿಕಾರವನ್ನು ಎತ್ತಿ ಹಿಡಿಯುತ್ತೇನೆಂದು ರೋಷವಾಕ್ಯಗಳನ್ನುನುಡಿದ ಲಕ್ಷ್ಮಣನಿಗೆ, ಕೇವಲ ೧೭ ಪ್ರಾಯದ ರಾಮನು ಆಡಿದ ಮಾತು ಇವರ ಬದುಕಿನ ಮಂತ್ರದಂತೆ ಕಂಡಿತು: 'ದೇವಕಲ್ಪಂ ಋಜುಂ ದಾನ್ತಂ ರಿಪೂಣಾಮಪಿ ವತ್ಸಲಂ' ಆದ ಆತನು 'ನಿರ್ಮನುಷ್ಯಾಂ ಇಮಾಂ ಸರ್ವಾಂ ಅಯೋಧ್ಯಾಂ . . . ಕರಿಷ್ಯಾಮಿ' (ಜನಕ್ಕೆ ಶಕ್ತಿಯಿರುವುದು ಸಾರ್ಥಕವಾಯಿತು!) ಇತ್ಯಾದಿಯಾಗಿ ಲಕ್ಷ್ಮಣನು ಕೂಗಾಡಿದಾಗ

ತದೇನಾಂ ವಿಸೃಜಾನಾರ್ಯಾಂ ಕ್ಷತ್ರಧರ್ಮಾಶ್ರಿತಾಂ ಮತಿಂ
ಧರ್ಮಮಾಶ್ರಯ; ಮಾ ತೈಕ್ಷ್ಣ್ಯಂ; ಮದ್ಬುದ್ಧಿರನುಗಮ್ಯತಾಂ

† ಲೋಕದ ಎಲ್ಲ ಜೀವನ ಇಂದಿಗಿಂತ ಸರಳವಾಗಿ ಪ್ರಾಚೀನದಂತಾಗುವುದು ಸಾಧ್ಯವಿದ್ದರೆ ಅವರ ರೀತಿ ಸರ್ವಚಿಕಿತ್ಸಕವಾಗಬಲ್ಲದು. ಇದು ಎಷ್ಟು ಶಕ್ಯವೊ ಯೋಚನೆಮಾಡಬೇಕಾದ ಸಂಗತಿ.

ಎಂದನು.* ಈ ಧರ್ಮ ಭಾರತಸಂಸ್ಕೃತಿಯ ವಿಶೇಷ ಲಕ್ಷಣ. ಇದರಿಂದಾಗಿ ನಮ್ಮ ನಾಡಿಗೆ ಲೋಕವಂದನೆ ದೊರಕಿರುವುದು. ನಿಜ. ಇದಕ್ಕೆ ಶಾಂತಿ, ದಾಂತಿ, ಸಹನೆ, ಸ್ವಾಸ್ಥ್ಯ, ಧೃತಿ ಬೇಕು. ಒಂದು ನಾಡಿಗೆ ಇದು ವ್ರತವಾಗಬೇಕಾದರೆ ತೀವ್ರವಾದ ಆತ್ಮಶಿಕ್ಷಣವೂ ಸತ್ಯವಿವೇಚನೆಗಳೂ ಬೇಕು. ಇಂದು ಜನ ಎಂದಿಗಿಂತ ಹೆಚ್ಚು ಭೋಗಮುಖವಾಗಿ ಸುಖಸಂಗಿಯಾಗಿದೆ. ಪರಾರ್ಥಕ್ಕಿಂತ ಸ್ವಾರ್ಥಕ್ಕೆ, ವಿರಕ್ತಿಗಿಂತ ಕಾಮುಕ್ಕೆ, ಹೊಣೆಗಾರಿಕೆಗಿಂತ ಸ್ವಾತಂತ್ರ್ಯಕ್ಕೆ, ಕರ್ತವ್ಯಕ್ಕಿಂತ ಹಕ್ಕಿಗೆ, ಒಟ್ಟಿನಲ್ಲಿ ಸತ್ವಕ್ಕಿಂತ ಕ್ಷಾತ್ರತಾಮಸಗಳಿಗೆ ತಿರುಗುತ್ತಿರುವ ಈ ಕಾಲದಲ್ಲಿ ಆ ಬುದ್ಧಿ, ಆ ಬಗೆಯ ಧರ್ಮನಿಷ್ಠೆ, ಪಕ್ಷಪಾತ ಬರುವುದು ಕಷ್ಟವೇನೊ. ಸತ್ಯವನ್ನೂ ಔದಾರ್ಯವನ್ನೂ ತ್ಯಾಗವನ್ನೂ ಸಹಿಸದೆ ಅವರ ಧರ್ಮದ ಹೆಸರಿನಲ್ಲಿಯೇ ಗಾಂಧೀಜಿಯವರನ್ನು ಗುಂಡಿಟ್ಟು ಮುಗಿಸಿದುದೇ ಈ ತಾಮಸಕ್ಕೆ ಸಾಕ್ಷಿ. ಇದು ವೇದ ಸಮ್ಮತವೆ ? ಶಾಸ್ತ್ರ ಸಮ್ಮತವೆ? ರಾಮಾಯಣಕ್ಕೆ ಅಥವಾ ಭಾರತದರ್ಶನಕ್ಕೆ ಸಮ್ಮತವೆ ? ಬೌದ್ಧ ಜೈನಗಳಿಗೆ ಹೊಂದುವ ಬುದ್ಧಿಯೇ? ಹಸಿಯ ಅನಾರ್ಯ ವೃತ್ತಿ.

ಅಶಾಂತಿ, ಅಹಿಂಸೆ, ಸತ್ಯವ್ರತದ ಮಾರ್ಗ ಮಹಾ ವ್ಯಕ್ತಿಗಳಿಗೆ, ಪ್ರಚಂಡ ಸತ್ವರಿಗೆ ಮಾತ್ರ. ಅಂಥ ವ್ಯಕ್ತಿಗಳು ಹುಟ್ಟಲು ತಕ್ಕ ಆವರಣಕಲ್ಪನೆ ಮಾಡತಕ್ಕದ್ದೂ ಅವು ಹುಟ್ಟಿ ಕಾರ್ಯಮಾಡುವಾಗ ಅವನ್ನು ಗುರುತಿಸಿ ಗೌರವಿಸಿ ಸಹಾಯಕವಾಗಿ ನಡೆಯತಕ್ಕದ್ದೂ ಒಂದು ಪುಣ್ಯ. ಎಲ್ಲ ರಾಜಕೀಯ ವ್ಯವಹಾರಕ್ಕೂ ವಿದ್ಯಾಶಿಕ್ಷಣ ಕ್ರಮಕ್ಕೂ ಇದು ಗುರಿಯಾಗಬೇಕು. ಆದರೆ ಅದು ಕನಸಿನ ಗಂಟು. ಅಂಥವರು ನಾಡಿನ ಭಾಗ್ಯದಿಂದ ಹುಟ್ಟುವರೇ ಹೊರತು ಐದುಹತ್ತು ವರ್ಷಗಳ ಯೋಜನೆಗಳಿಂದ ತಯಾರಿಸಬಲ್ಲವರಲ್ಲ; ಆ ಮಿತಿಯ ಒಳಹಿಡಿಗೆ ನಿಂತ ಕೆಳಮಟ್ಟದ ಜೀವನವನ್ನು ಕುರಿತು ನಾವು ಎಂದಿಗೂ ಯೋಚಿಸುವುದು. ಅಂಥವರು ಸ್ವಯಂ ಆಚಾರ್ಯರು; ಸರ್ವತಂತ್ರ ಸ್ವತಂತ್ರರು; ಅವರಿಗೆ ಅವರೇ ಕಾಯಿದೆ; ಅವರೇ ಅಂಕುಶ; ಧರ್ಮ

* ಆತನ ಹೆಂಡತಿ ಸೀತೆ. ಹನುಮಂತನು, ಆಕೆಯನ್ನು ಹಿಂಸಿಸಿದವರನ್ನು ದಂಡಿಸುತ್ತೇನೆಂದಾಗ ಆಕೆ ಆಡಿದ

ಪಾಪಾನಾಂ ವಾ ಶುಭಾನಾಂ ವಾ ವಧಾರ್ಹಾಣಾಂ ಪ್ಲವಂಗಮ
ಕಾರ್ಯಂ ಕರುಣಮಾರ್ಯೇಣ ನ ಕಶ್ಚಿನ್ನಾಪರಾಧ್ಯತಿ ?
—ಎಂಬ ಮಾತೂ ಅದೇ ಧಾತುವಿನದೇ.

ಪ್ರಪಂಚದ ನಿರಂಕುಶರು ಅರಾಜಕರು, (The great spiritual anarchs) ಅವರು. ಆ ಕಲ್ಪನೆಯನ್ನು ಒಪ್ಪಿದ್ದ ಜನಾಂಗವೇ ಜಿನ, ಸಿದ್ಧಬುದ್ಧರನ್ನು ಒಪ್ಪಿ ಸಂಸ್ಕಾರದ ಕೊನೆಮುಟ್ಟುವನ್ನು ಸೂಚಿಸಿ ಕೃತಾರ್ಥವಾಯಿತು.

ಆದರೇನು ? ಯಂತ್ರಗಳನ್ನು ದುಡಿಸಿ ಬೃಹತ್ ಪ್ರಮಾಣದಲ್ಲಿ ಪೋಷಕ ನಾಶಕ ಕ್ರಿಯೆಗಳನ್ನು ರೂಢಿಸುವ ಕಾಲ ಇದು. ವ್ರತ, ಮಡಿ, ಆಚಾರ, ನಿಷ್ಠೆ, ಸಂಕೋಚ, ಪದ್ಧತಿಗಳ ಬೆಳವಣಿಗೆಗೆ ಅನುಕೂಲಕಾಲ ಅಲ್ಲ. ಪ್ರವೃತ್ತಿ, ಅಧಿಕಾರ ಮತ್ತು ಭೋಗ ಮುಖವಾಗಿದೆ ಇಂದು ಜೀವನ; ಜನದ ಆಕಾಂಕ್ಷೆ. ಇದು ಅಂತರ್‌ರಾಷ್ಟ್ರೀಯ ಪ್ರಭಾವವೂ ಹೌದು : ರಾಷ್ಟ್ರಗಳ ಮೇರೆಯನ್ನು ಮೀರಿದೆ ಈ ಲೌಕಿಕ ದೃಷ್ಟಿ. ವಿಜ್ಞಾನ, ಯಂತ್ರವಿಧಾನಗಳ ಪರಿಪಾಠಿಯನ್ನು ಒಪ್ಪದ ಲೋಕಜೀವನ ಇನ್ನು ಮುಂದೆ ದುರ್ಬಲವಾಗಿ ಕೊರಗಬೇಕಾಗುತ್ತದೆ. ಬಹುಶಃ ಆ ಕಾರಣದಿಂದಲೇ ಹೆರವರ ಪಾಲಾಗಬೇಕಾಗುತ್ತದೆ.

ಹೀಗಾಗಿ ಧರ್ಮದಧಾತು ಕುಂದಿದೆ. ಅದರ ತತ್ವಗಳು ತೀಕ್ಷ್ಣ ವಿಮರ್ಶೆಗೆ ಸಿಕ್ಕಿವೆ. ಹಿಂದಿನ ಮತದ ಹಿಡಿತ ಇಂದು ಸಡಿಲ. ವರ್ಣ ವ್ಯವಸ್ಥೆ ಮುರಿದು ಅದರಲ್ಲಿ ನಂಬಿಕೆ ಇಳಿದಿದೆ. ಅದರಿಂದ ಜನವರ್ಗಕ್ಕೆ ಅನ್ಯಾಯ, ಅಸಮತೆ ಎಂದು ಅದನ್ನು ಅಳಿಸುವ ಯತ್ನ ಕಾರ್ಯಕಾರಿಯಾಗುತ್ತಿದೆ. ಅದಕ್ಕೆ ಆಧಾರವಾದ ಸ್ಮೃತಿ, ರಾಜವರ್ಗ, ಮಠ, ಸಂಸ್ಥೆಗಳ ದರ್ಪವೂ ಕಾಂತಿಯೂ ಕುಂದಿವೆ. ರಾಜರಿಗೇ ಇರವೂ ಮಾನ್ಯತೆಯೂ ಇಲ್ಲದಿರುವಾಗ, ದಿಕ್ಕಿಲ್ಲದಿರುವಾಗ ಅವರು ವರ್ಣಾಶ್ರಮ ಧರ್ಮರಕ್ಷಕರು ಹೇಗಾಗಬೇಕು ? ಹಳೆಯ ರೀತಿಯ ಗ್ರಾಮ ವ್ಯವಸ್ಥೆ, ಕೂಡುಕುಟುಂಬ ಪದ್ಧತಿ, ವಿವಾಹ ವಿಧಿ ವಿಧಾನಗಳು ಕಳಲಿ ಅಲ್ಲಿ ಮೂಲಭೂತವಾದ – (ನ್ಯಾಯವಾಗಿ) – ಮಾರ್ಪಾಡು ಬರುತ್ತಿದೆ. ಸಂಚಾರ ಮತ್ತು ಮಿಳನ ಸ್ವಾತಂತ್ರ್ಯಗಳು ವಿಪುಲವಾಗಿ ಪ್ರತ್ಯೇಕತೆ ಕರಗಿಹೋಗಿದೆ. ಗ್ರಂಥಗಳನ್ನು ಕೂಲಂಕಷವಾಗಿ ಪರಿಶೀಲಿಸುವ, ಪರಿಶೋಧಿಸುವ, ಧರ್ಮ ತತ್ವಗಳನ್ನೂ ಸಂಸ್ಥೆ ಸಂಪ್ರದಾಯಗಳ ಬೆಲೆಗಳನ್ನೂ ವಿಮರ್ಶಾತ್ಮಕವಾಗಿ, ಚಾರಿತ್ರಕವಾಗಿ, ತಾರತಮ್ಯ ದೃಷ್ಟಿಯಿಂದ ಪರೀಕ್ಷಿಸುವ ಬುದ್ಧಿ ಬೆಳೆದು, ಹಲವು ನಂಬಿಕೆಗಳ ಬುಡ ಮೇಲೆದ್ದಿದೆ. ಒಂದು ಕಡೆ ವಿಜ್ಞಾನಮಾರ್ಗ, ಇನ್ನೊಂದು ಕಡೆ ಮಾನವವರ್ಗದ ಮೂಲವಿಜ್ಞಾನ, ಮತ್ತೊಂದು ಕಡೆ ಮನಃಶಾಸ್ತ್ರದ ಬೆಳವಣಿಗೆ ಹೊಸಹೊಸ ಸಂಗತಿಗಳನ್ನು ತಿಳಿಸುತ್ತ ನಂಬಿಕೆಯ ಮೂಲಗಳನ್ನು ಅಲ್ಲಾಡಿಸುತ್ತಿವೆ. ಪ್ರಾಚೀನ ಅಭಿ

ಪ್ರಾಯಗಳ ಲೋಪಗಳನ್ನೂ ಸ್ಥಾನಮಾನವನ್ನೂ ತೋರಿಸಿಕೊಡುತ್ತಿವೆ. ಆಧುನಿಕ ಸಮಸ್ಯೆಗಳನ್ನು ಆಧುನಿಕ ರೀತಿಯಲ್ಲಿಯೇ ಎದುರಿಸಿದ ಹೊರತು ಉಳಿವು ಬಾಳಿಲ್ಲವೆಂಬುದಂತು ಸ್ಥಿರವಾಗಿದೆ. ಸರ್ವವ್ಯಾಪ್ತಿಯುಳ್ಳ ಇಂಥ ಪ್ರಭಾವಗಳೂ ಕಮ್ಯೂನಿಸಂ ಅಂತಹ ಪಂಥಗಳೂ ಕ್ರಿಯಾಶಕ್ತಿಗಳೂ ಹರಡಿ ಜೀವನದ ಎಲ್ಲ ಪ್ರಕಾರಗಳೂ ರೂಪಾಂತರಗೊಳ್ಳುತ್ತಿವೆ. ದೇಶದ ನ್ಯಾಯವು ಮತಧರ್ಮದ ಮುಂಚಿಕೆಯನ್ನು ಬಿಟ್ಟು ಲೌಕಿಕ ವ್ಯವಹಾರ ಮಾತ್ರ ಸಾಧಕ ವಾಗಿರುವೆನೆಂದು ಬದಲಾಗುತ್ತಿರುವಾಗ ಮತಧರ್ಮನಿಷ್ಠವಾಗಿರುತ್ತಿದ್ದ ಎಲ್ಲ ಕರ್ತವ್ಯವೂ ಸಂಸ್ಕೃತಿ ವಿಶೇಷಗಳೂ ಹಿಂಗಿ ಖಾಸಗಿಯಾಗಿಯೇ ವ್ಯಕ್ತಿಶವಾಗಿಯೇ ಮುಗಿದಾವು. ನಾಡಿಗೆಲ್ಲ ಅನ್ವಯಿಸುವ ಕಾನೂನು ಸಮಸ್ತ ವ್ಯವಹಾರವನ್ನೂ ನಿರ್ಣಯಿಸಬೇಕೆನ್ನುವಾಗ ಬೇರೆ ನಡೆಯುವುದು ಶಕ್ಯವಿಲ್ಲವಾಗುವುದು. ವಯಸ್ಕರಾದ ಎಲ್ಲರಿಗೂ ರಾಜಕೀಯ ಮತಾಧಿಕಾರವೂ ಇದೇ ಸನ್ನಿವೇಶದಲ್ಲಿ ಸ್ತ್ರೀಯರಿಗೆ ಸಮಾನ ವಿದ್ಯಾ, ವಿವಾಹ, ಆರ್ಥಿಕ ಸಾಮಾಜಿಕ ರಾಜಕೀಯ ಹಕ್ಕುಗಳೂ ಯಾವಾಗ ದೊರಕಿದವೋ ಆಗ ಸಮಾಜದ ಹಿಂದಿನ ಅಚ್ಚು ಕಟ್ಟು ಬದಲಾಗುವುದು ತಾನೆ?* ಇದರ ವ್ಯಾವಹಾರಿಕ ಮತ್ತು ಸಾಂಸ್ಕೃತಿಕ ಪರಿಣಾಮ ಹೇಗಾಗುವುದೋ ಹೇಳಲು ಇನ್ನೂ ಐವತ್ತು ವರ್ಷವಾದರೂ ಹಿಡಿದೀತು. ಸಂಪ್ರದಾಯಕ್ಕೆ ಬದಲು ಸ್ವಾತಂತ್ರ್ಯ, ರೂಢಿಗೆ ಬದಲು ಹಣದ ಓಡಿಯಾಟ, ವಾಡಿಕೆಗೆ ಬದಲು ಸ್ಪರ್ಧೆ, ಅಂತರ್‌ರಾಷ್ಟ್ರೀಯ ಪೇಟೆಯ ಲಾಭದ ವ್ಯವಹಾರ ಪ್ರಪಂಚ–ಇವು ಕಟ್ಟೆನಿಂತಾಗ ಅವುಗಳ ಅಪಾರ ಪ್ರಯೋಜನಕಾಂಡವೂ ಮೋಹಕತೆಯೂ ಸುಖಾಭಿಲಾಷೆಯ ಪೂರಣದ ದೃಶ್ಯಗಳೂ ಜನರ ಮನಸ್ಸನ್ನು ಕೋರೈಸುತ್ತವೆ. ಈ ನಾಡಿನ–ಅಷ್ಟೇ, ಏಕೆ?–ಪೂರ್ವ ರಾಷ್ಟ್ರಗಳೆಲ್ಲದರ ಕಣ್ಣೂ ಆಕಡೆ ತಿರುಗಿದೆ. ಎಲ್ಲರ ರಕ್ತ ವನ್ನೂ ಆಸೆಯನ್ನೂ ಕುದಿಸುತ್ತಿದೆ. ಈ ಕಾವು ಇಳಿದು ಉಪಶಾಂತವಾಗಿ ಪುನಃ ಧರ್ಮದ ಕಡೆಗೆ ತಿರುಗುವವರೆಗೂ ನಮ್ಮ ಸಂಸ್ಕೃತಿಯ ಕರೆ ದುರ್ಬಲ ಸತ್ವವೇ ಸರಿ.

---

* ಇದು ತಪ್ಪು, ಆಗಬಾರದಿತ್ತು ಎಂದು ನಾನು ಹೇಳುತ್ತಿಲ್ಲ. ಆಗಬೇಕು. ಇದರಿಂದ ನಮ್ಮ ಸಂಸ್ಕೃತಿಯ ಮೇಲೆ ಪರಿಣಾಮ ಕ್ರಾಂತಿಕರವಾಗುವುದೆಂದು ಮಾತ್ರ ಹೇಳುತ್ತಿದ್ದೇನೆ. ಕಾನೂನಲ್ಲಿ ಗಂಡು ಹೆಣ್ಣಿಗೆ ತಾರತಮ್ಯ ಉಳಿದರೆ ಅನ್ಯಾಯ ವಾಗುತ್ತದೆ ಎಂಬುದನ್ನು ಯಾರೂ ಮರೆಯಬಾರದು.

ಈ ಸಂದರ್ಭದಲ್ಲಿ ಸಂಸ್ಕೃತಿ ಎಂಬುದರ ಅನ್ವಯ ಬೇರೆ ಬೇರೆ ಮಂಡಲಿಗಳಲ್ಲಿ ಬೆಳೆದು ಕಾಣುವ ವ್ಯಕ್ತಿಗಳ ಶೀಲಕ್ಕೂ ನಡವಳಿಕೆಗೂ ಅವರಲ್ಲಿ ಉತ್ತಮರಾದವರ ಬದುಕಿನ ಗುಣಕ್ಕೂ ಮಾತ್ರ ಸಂದೀತು. ಎಲ್ಲಿ ಅನ್ಯರನ್ನು ಕಂಡರೆ ವಿಶ್ವಾಸ, ಸೌಹಾರ್ದ, ಅನ್ಯಮತಗಳಲ್ಲಿ ಸಹನೆ, ಒಡನಡತೆ, ನಯ, ಸೌಜನ್ಯ ಉಳಿದು ಬದುಕು ಚೆಲುವಾಗುವುದೋ, ಸವಿಯಿಡುವುದೋ, ಸ್ನೇಹ ವ್ಯವಹಾರವನ್ನೂಡುವುದೋ ಅಲ್ಲಿನ ಎಲ್ಲವೂ ಸಂಸ್ಕೃತಿಯ ಪ್ರಭಾವವುಳ್ಳದ್ದಾಗುವುದು. ಹಿಂದಿನಿಂದ ಈ ಸಂಪ್ರದಾಯಕ್ಕೆ ಬೆಲೆಕೊಟ್ಟ ಭಾರತವೇ ಅದಕ್ಕೆ ಎರವಾದರೆ ಬೇರೆ ನೆಲೆ ಅದಕ್ಕೆ ಎಲ್ಲಿ? ಇಲ್ಲಿ ಉಳಿದು ನೆಲೆ ಕೊಟ್ಟರೆ ಭಾರತದ ಇಂದಿನ ಜೀವನವೂ ಅಮೃತವಾಗುವುದು. ಅನಂತಕಾಲಕ್ಕೂ ಅದರ ಪರಿಮಳ ವ್ಯಾಪಿಸಿ ಅದರ ಬೆಳಕು ನಂದಾದೀವಿಗೆಯಾಗುವುದು. ಅದನ್ನು ಸಾಧಿಸವಾದರೆ ಭಾರತದ ಕೀರ್ತಿ ಮಸುಕಾಗುವುದು.

---

# ಭಾರತಗಳ ಶ್ರೀಕೃಷ್ಣ

ವ್ಯಾಸರು, ಪಂಪ, ನಾರಣಪ್ಪ—ಈ ಮೂವರು ತಾವು ರಚಿಸಿರುವ ಭಾರತಗಳಲ್ಲಿ ಶ್ರೀಕೃಷ್ಣನ ಶೀಲ ಚಾರಿತ್ರಗಳನ್ನು ಯಾವ ರೀತಿ ವರ್ಣಿಸಿದ್ದಾರೆಂಬುದು ಇಲ್ಲಿಯ ವಿಷಯ. ಅದನ್ನು ಆಮೂಲಾಗ್ರವಾಗಿ ವಿವರಿಸುವುದಕ್ಕೆ ಇಲ್ಲಿ ಅವಕಾಶವಿಲ್ಲವಾದುದರಿಂದ ಸ್ಥೂಲವಾಗಿ ನಿರೂಪಿಸಿ ಉದ್ಯೋಗಪರ್ವದ ಒಂದು ಪ್ರಸಂಗದಿಂದ ಅವುಗಳಿಗಿರುವ ತಾರತಮ್ಯಗಳನ್ನು ವಿವರಿಸುವ ಪ್ರಯತ್ನ ಮಾಡಿದೆ. ಮೂವರ ದೃಷ್ಟಿಯಲ್ಲಿಯೂ ಕೃಷ್ಣನು ದೇವರೇ. ಆದರೆ ಅವರು ಆತನ ದೇವತ್ವವನ್ನು ಸ್ಥಾಪಿಸುವ, ವ್ಯಾಪಿಸುವ ರೀತಿ ಬೇರೆ ಬೇರೆ. ಅವರ ವ್ಯಕ್ತಿತ್ವವೂ ಮೂರು ಬಗೆಯಾಗಿರುವುದು. ಅವರ ಕಾಲ, ಜೀವಿತ, ದೃಷ್ಟಿವಿಶೇಷ, ಉದ್ದೇಶ ಇವುಗಳಲ್ಲಿ ಎಷ್ಟು ಅಂತರವಿದೆಯೋ ಅವರು ಚಿತ್ರಿಸುವ ಕೃಷ್ಣಚಾರಿತ್ರದಲ್ಲಿಯೂ ಕೃಷ್ಣಪ್ರಪಂಚದಲ್ಲಿಯೂ ಅಷ್ಟೇ ಅಂತರವಿರುವುದೆನ್ನಬಹುದು.

'ಮಹಾಭಾರತ'ದ ಕಾಲವಾವುದೆಂಬುದು ಸಿದ್ಧಾಂತಕ್ಕೆ ಬಂದಿಲ್ಲ. ಈಗ ನಾವು ಮಹಾಭಾರತವೆಂದು ಕರೆಯುವ ಗ್ರಂಥವನ್ನು ಯಾರೊಬ್ಬರೇ ಆಗಲಿ, ಯಾವ ಒಂದು ಕಾಲದಲ್ಲಿಯೇ ಆಗಲಿ ಬರೆದರೆ ಎಂಬ ಅಂಶದಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಮಹಾಭಾರತದ ಮೊದಲ ಕಥೆಯು ಇಷ್ಟೇ ಎಂಬುದನ್ನೂ ಇನ್ನು ಮೇಲೆ ನಿರ್ಧರಿಸಬೇಕಾಗಿದೆ. ಆದರೂ ಅದರ ಚೌಕಟ್ಟು ಇಷ್ಟೇ ಇದ್ದಿರಬಹುದೆಂದು ಊಹಿಸುವುದಕ್ಕೂ ಅನುಮಾನಿಸುವುದಕ್ಕೂ ಸಾಕಾದಷ್ಟು ಪ್ರಮಾಣಗಳಿವೆ. ಸದ್ಯಕ್ಕೆ, ವ್ಯಾಸ ಮಹರ್ಷಿಗಳೇ ಅದನ್ನೆಲ್ಲಾ ಬರೆದವರೆಂದು ಒಪ್ಪಿದಂತೆ ಮುಂದಿನ ಕೆಲವು ಮಾತುಗಳನ್ನು ಹೇಳಿದೆ.

ವ್ಯಾಸರು ಮಹರ್ಷಿಗಳು. ಭಾರತ ವಂಶಕ್ಕೆ ಒಂದು ತೆರದಲ್ಲಿ ಮೂಲ ಪುರುಷರು ; ಭೀಷ್ಮರಿಗಿಂತಲೂ ಮೊದಲು ಹುಟ್ಟಿದವರು ; ಅವರಿಗೆ ಅಣ್ಣ. ಭಾರತ ಯುದ್ಧಕ್ಕೆ ಸಂಬಂಧಿಸಿದ ಮುಖ್ಯ ಪುರುಷರು ಹುಟ್ಟುವುದಕ್ಕೆ ಬಹು ಮುಂಚೆಯೇ ಹುಟ್ಟಿ, ಎಲ್ಲವನ್ನು ನೋಡಿ, ಎಲ್ಲರೂ ತೀರಿಹೋದಮೇಲೂ ಬದುಕಿದ್ದು ಕಾವ್ಯವನ್ನು ಬರೆದವರು. ಅವರು ಬರೆದುದು ಇತಿಹಾಸ. ಆದರಲ್ಲಿ

ಒಂದು ಸಮಗ್ರ ಪ್ರಪಂಚವೇ ಪ್ರತಿಫಲಿಸಿದೆ. ಅಲ್ಲಿ ಕಾಣದ ಪ್ರಾಚೀನ ಜೀವನದ ಮುಖವೇ ಇಲ್ಲ. ಮಹಾಭಾರತವು ಹಲವರ ಬಾಯಿಗಳ ಮೂಲಕ ನಮ್ಮ ಕಾಲದ ವರೆಗೂ ಬಂದಿದೆ. ರೌಮಹರ್ಷಣಿ, ವೈಶಂಪಾಯನ, ಸಂಜಯ, ವ್ಯಾಸ ಮುಂತಾದವರ ಹೇಳಿಕೆಯನ್ನು ಒಳಕೊಂಡಿದೆ. ಕಥೆಯನ್ನು ಕೇಳುತ್ತಿದ್ದ ಋಷಿಗಳು, ಧೃತರಾಷ್ಟ್ರ, ಜನಮೇಜಯ, ಪರೀಕ್ಷಿತ್ ಮುಂತಾದವರಿಗೆ ಅನೇಕ ಪ್ರಸಂಗಗಳಲ್ಲಿ ಸಂದೇಹವುಂಟಾಗಿ ಅವರು ಹಾಕಿದ ಪ್ರಶ್ನೆಗಳಿಗೆ ದೊರೆತ ಉತ್ತರಗಳೆಲ್ಲವೂ ಕಥೆಯ ನೆಯ್ಗೆಯಲ್ಲಿ ಹೊಕ್ಕು, ಅದು ಸ್ಪಷ್ಟವಾಗಿ ವಿಸ್ತಾರವಾಗಿದೆ. ಸತ್ಯಪ್ರತಿಪಾದನೆಯೇ ವ್ಯಾಸರ ಉದ್ದೇಶ. ಪಕ್ಷಪಾತದಿಂದ ನಿಜವನ್ನು ಮರೆಯಿಸಲು ಅವರ ಮನಸ್ಸು ಯತ್ನಿಸಿಲ್ಲ. ಯಾರಿಗೆ ಕೀರ್ತಿ ಬರಲಿ ಯಾರಿಗೆ ಅಪಕೀರ್ತಿ ಬರಲಿ, ಇವನು ಕೃಷ್ಣನೆನ್ನದೆ ಅವನು ದುರ್ಯೋಧನನೆನ್ನದೆ ಇದ್ದುದನ್ನು ಇದ್ದಂತೆ ವರ್ಣಿಸಿ, ತಮಗೆ ಆಯಾ ಸಮಯದಲ್ಲಿ ತೋರಿದ ಧರ್ಮವನ್ನು ಅವರು ಹೇಳಿದ ಹಾಗಿದೆ. ಸ್ವಲ್ಪಮಟ್ಟಿಗೆ ತಾವೂ ಕೈಹಾಕಿ ಭಾರತ ಕಥೆಯನ್ನು ನಡೆಯಿಸಿದ್ದರೂ, ಯಾವ ಮೋಹವನ್ನೂ ಭ್ರಾಂತಿಯನ್ನೂ ಇಟ್ಟುಕೊಂಡಂತಿಲ್ಲ. ಆದುದರಿಂದ ಅವರ ದೃಷ್ಟಿಯು ಸತ್ಯದೃಷ್ಟಿ, ಧರ್ಮದೃಷ್ಟಿ ಮಾತ್ರ. ಋಷಿಯಲ್ಲದವನು ಈ ಬಗೆಯ ಕೃತಿಯನ್ನು ರಚಿಸಲಾರನು.

ಎಲ್ಲ ಭಾಷೆಗಳ ಎಲ್ಲ ಭಾರತ ಕಥೆಗಳಿಗೂ ನಮಗೆ ಈಗ ತಿಳಿದಿರುವ ಮಟ್ಟಿಗೆ ಮಹಾಭಾರತವೇ ಮೂಲ.* ವ್ಯಾಸರ ಕಾಲವು ಇತಿಹಾಸ-ಪುರಾಣ ಕಾಲವಾದರೆ ಪಂಪನದು ಕ್ರಿ. ಶ. ಹತ್ತನೆಯ ಶತಮಾನ-ವೀರಕಾಲ; ದೇಶದ ಚರಿತ್ರೆಯ ಪರಿವಿಡಿಯಲ್ಲಿ ಗೊತ್ತಾಗಿರುವ ಸ್ಪಷ್ಟಕಾಲ. ಪಂಪನು ಜೈನ; ತನ್ನ ಪ್ರಭುವಿನ ರಾಜ್ಯದಲ್ಲಿ ಸೇನಾಧಿಪತಿಯಾಗಿದ್ದವನು; ಪಂಡಿತ, ರಸಿಕ, ಕವಿ; ಕಾವ್ಯವನ್ನೇ ಬರೆಯಬೇಕೆಂದು ಭಾರತವನ್ನು ಬರೆಯತೊಡಗಿ ಆರು ತಿಂಗಳಲ್ಲಿ ಮುಗಿಸಿದವನು. ಕನ್ನಡ ಸಂಸ್ಕೃತ ಎರಡು ಭಾಷೆಗಳಲ್ಲಿಯೂ ವ್ಯುತ್ಪತ್ತಿ ಪಡೆದು, ಉದ್ದಾಮ ಕಾವ್ಯಗಳ ಶೈಲಿಯನ್ನೂ ಒಳಸ್ವಾರಸ್ಯವನ್ನೂ ಸವಿದು ಸಂಸ್ಕಾರಪಡೆದಿದ್ದವನು. ಆದಿಪುರಾಣವನ್ನು ಬರೆದು ಆತನ ಕೈ ಚೆನ್ನಾಗಿ ಪಳಗಿತ್ತು. ಆತನ ರೀತಿಯು ಆತನ ಇಚ್ಛೆಯಂತೆ ಚಂಪೂ ಕಾವ್ಯ

* ಮಹಾಭಾರತಕ್ಕೂ ಆದಿಯಲ್ಲಿ ವಿಜಯವೆಂಬ 'ಭಾರತ' ಒಂದಿದ್ದಿರಬೇಕೆಂದು ಕೆಲವರ ಅಭಿಪ್ರಾಯವಿದೆ.

ಗಳ ಘಕ್ಕೆಯನ್ನು ಹಿಡಿಯಿತು. ಕಲ್ಪನೆ ವರ್ಣನೆಗಳೆಲ್ಲವೂ ಕಾವ್ಯದ ಹೆದ್ದಾರಿಗಳಲ್ಲಿ ನಡೆದುವು. ವಿಷಯವನ್ನು ಪ್ರತಿಪಾದಿಸುವುದರಲ್ಲಿಯೂ ಆತನಿಗೆ ಬೇರೆ ಉದ್ದೇಶವಿದ್ದಿತು. ಮಹಾಭಾರತದ ಕಥೆಯನ್ನೇ ಆತನು ಹೇಳಿದರೂ ತನಗೆ ಬೇಕಾದಂತೆ—ಹಿಂದೆ ಭಾಸಾದಿಗಳು ಮಾಡಿಕೊಂಡಂತೆಯೇ, ಬಹುಶಃ ಅವರನ್ನು ಅನುಸರಿಸಿಯೇ—ಅಲ್ಲಲ್ಲಿ ವ್ಯತ್ಯಾಸಗಳನ್ನು ಮಾಡಿಕೊಂಡನು. ಕಥಾ ಭಾಗಗಳಲ್ಲಿ ಕೆಲವನ್ನು ಆರಿಸಿಕೊಂಡನು; ಕೆಲವನ್ನು ಬಿಟ್ಟನು; ಸ್ವಂತವಾಗಿ ಕೆಲವನ್ನು ಸೇರಿಸಿದನು. ಮುಖ್ಯವಾಗಿ ತನ್ನ ಅರಸನಾದ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ ಅವನ ಪ್ರಶಂಸೆಗಾಗಿ ತನ್ನ ಭಾರತವನ್ನು—ವಿಕ್ರಮಾರ್ಜುನ ವಿಜಯವನ್ನು—ಬರೆದನು. ಈ ಕಾರಣದಿಂದ ಆತನ ಭಾರತದಲ್ಲಿ ಕೃಷ್ಣನಿಗೆ ಪ್ರಾಧಾನ್ಯವಿಲ್ಲವಾಯಿತು. ಕೃಷ್ಣನ ಪೂಜ್ಯತೆ ಪ್ರಭಾವಗಳಲ್ಲಿಯಾಗಲಿ, ಆತನು ಮಾಡಿದ ಸಹಾಯದ ವರ್ಣನೆಯಲ್ಲಿಯಾಗಲಿ ಯಾವ ತೂಕವೂ ಕಡಮೆಯಾಗಿಲ್ಲದಿದ್ದರೂ, ಇಲ್ಲಿ ಆತನು ಅರ್ಜುನನಿಗೆ ಸ್ನೇಹಿತನಾದ, ಬೆಂಬಲನಾದ ಕೃಷ್ಣದೇವನು ಮಾತ್ರ. ಮಹಾಭಾರತದ ಕಥಾನಾಯಕನು ಯುಧಿಷ್ಠಿರನಾದರೆ ಪಂಪಭಾರತದಲ್ಲಿ ಹೀಗೆ ಅರ್ಜುನನಾಗುವನು.

ವ್ಯಾಸರದು ಇತಿಹಾಸದ ಅಥವಾ ಧರ್ಮದ ಮಹಾಯುಗವಾಗಿ ಪಂಪನದು ಚರಿತ್ರೆಯ ವೀರಯುಗವಾದರೆ ನಾರಣಪ್ಪನದು ಭಕ್ತಿಯುಗ; ವೈಷ್ಣವ ಮತ ಪ್ರಾಬಲ್ಯದ ಕಾಲ. ಭಾರತ ಯುಗವು ಮುಗಿದು, ಭಾಗವತರ ಭಕ್ತಿಯಿಂದ ಕೃಷ್ಣ ಚಾರಿತ್ರ್ಯದ ಲೀಲಾವಿಲಾಸಗಳೆಲ್ಲ, ಅವತಾರ ಕಾರ್ಯಗಳೆಲ್ಲ, ವೀರರ ಸುತ್ತಲೂ ಹೆಣೆದುಕೊಂಡು ರಾಗಯುಕ್ತವಾಗಿದ್ದ ಕಾಲ. ನಾರಣಪ್ಪನು ಬ್ರಾಹ್ಮಣ; ರ್ಯಾನುಭೋಗ; ರಸಿಕ. ಕೃಷ್ಣಭಕ್ತಿಯ ಪರವಶತೆಯಲ್ಲಿ ಕವಿತ್ವವು ಉಕ್ಕಿ ಪದ್ಯಗಳನ್ನು ಹಾಡಿದನು;—ಅಥವಾ ನಾರಾಯಣನೇ ಹೇಳಿದುದನ್ನು ಬರೆದುಕೊಂಡವನು. ಆತನಿದ್ದುದು ಸಾಧಾರಣವಾದ ಒಂದು ಊರಿನಲ್ಲಿ. ಆತನಿಗೆ ಪ್ರತಿಭೆ ಇತ್ತು; ಭಕ್ತಿಯಿತ್ತು; ಕಥೆಯ ವಿಷಯವು ಸಂಪೂರ್ಣವಾಗಿ ಕೈವಶವಾಗಿತ್ತು; ತನ್ನ ಕಥಾನಾಯಕನ ಕಾರ್ಯದಿಂದ ಬಂದ ಆವೇಶವಿತ್ತು. ಭಾರತವು ಆತನಿಗೆ ಶ್ರೀಕೃಷ್ಣರಾಯನ ಚರಿತೆ. ವ್ಯಾಸರ ಶೈಲಿಯು ವೀರ್ಯವತ್ತಾದ ಇತಿಹಾಸ ಶೈಲಿ; ಮುಖ್ಯವಾಗಿ ಅನುಷ್ಟುಪ್ಪಿನ ಕಟ್ಟಿನಲ್ಲಿ ಓಡುವುದು. ಪಂಪನದು ಚಂಪೂ ಶೈಲಿ; ಪಂಡಿತರಿಗೆ

ಮಾತ್ರ ಸಂಪೂರ್ಣವಾಗಿ ಅರ್ಥವಾಗಬಲ್ಲ ಪ್ರೌಢಕಾವ್ಯ ಶೈಲಿ. ಅದರಲ್ಲಿ ಆತನು ತುಂಬದ ರಸಮಾಧುರಿಯೇ ಇಲ್ಲ, ವೀರಸೌಂದರ್ಯಗಳೇ ಇಲ್ಲ, ರೀತಿ ನವ್ಯತೆಯೇ ಇಲ್ಲ ಎನ್ನಬಹುದು. ಆದರೆ ಕವಿಗೊಟ್ಟ ಸಂತತವೂ ಎಚ್ಚರ ದಿಂದ ಆಲಿಸದಿದ್ದರೆ ಅವನ ವೃತ್ತದ ನಾದವಿಶೇಷಗಳು ಕೇಳಿಸದಾಗುವುವು. ಮನಸ್ಸೂ ಹೃದಯವೂ ಅವಿಶ್ರಾಂತವಾಗಿ ತೆರೆದಿರದಿದ್ದರೆ ಅಲ್ಲಿನ ಭಾವರಸ ಚಿತ್ರಗಳೂ, ಮೃದು ಕಲ್ಪನಾ ವಿಚಕ್ಷಣತೆಯೂ, ಪದ, ಅರ್ಥ, ಧ್ವನಿ, ತಾನ ಗಳ ಸಾಮರಸ್ಯವೂ ನಮಗೆ ಗೋಚರಿಸದಾಗುವುವು. ನಾರಣಪ್ಪನ ಭಾಷಾರೀತಿ ಗಳಲ್ಲಿ ಯಾವ ವೀರ್ಯಕ್ಕೂ ಶಬ್ದಾರ್ಥ ಧ್ವನಿಗಳಿಗೂ ಕೊರತೆಯಿಲ್ಲದಿದ್ದರೂ ಯಾವ ಉತ್ಕೃಷ್ಟೋದ್ಧರಣೆಗೂ ಕಡಮೆಯಿಲ್ಲದಿದ್ದರೂ ಅವನ ಶೈಲಿಯು ಪಂಡಿತರ ಪ್ರೌಢಶೈಲಿಯಲ್ಲ; ಲೋಕರಂಜನೆಯ ಸರಸಶೈಲಿ; ಕೇವಲ ಸುಲಭವಾದ ಕನ್ನಡ ಷಟ್ಪದೀ ಶೈಲಿ. ಭಾಮಿನೀ ಷಟ್ಪದಿಯ ಓಟದಲ್ಲಿ ದೊಡ್ಡ ಕಥೆಯ ಕಥನಕ್ಕೆ ಯಾವೆಲ್ಲ ಅನುಕೂಲವು ದೊರೆಯುವುದೊ, ಅದರ ವಿಭವವನ್ನೆಲ್ಲ, ನಾದಸಂಪತ್ತನ್ನೆಲ್ಲ ರೂಢಿಸಿಕೊಂಡು ಗಂಗಾಪ್ರವಾಹದಂತೆ ಕಥೆಯನ್ನು ಹರಿ ಯಿಸಿಕೊಂಡು ಹೋಗುತ್ತಾನೆ. ಯಾವ ನಿರ್ಬಂಧವನ್ನೂ ಲೆಕ್ಕಿಸದೆ, ಪ್ರತಿ ಭೆಯು ನುಡಿಸಿದಂತೆ ನುಡಿದು ನಮ್ಮ ನಾಡಿನ ಸುಂದರ ಛಂದಸ್ಸಿನಲ್ಲಿ ಗರಿಮೆ ಯನ್ನೂ ರಸವನ್ನೂ ಭಕ್ತಿಯನ್ನೂ ಆವೇಶದ ಉನ್ಮಾದಗಳನ್ನೂ ತುಂಬಿ ಸ್ವಚ್ಛಂದವಾಗಿ ಬರೆದುಕೊಂಡು ಹೋಗಿದ್ದಾನೆ. ಈತನು ಕಥೆಯನ್ನು ನಡೆ ಯಿಸುವ ರೀತಿಯನ್ನು ನೋಡಿದರೆ ಮಹಾಭಾರತ ಭಾಗವತಗಳ ಪರಿಚಯ ವಷ್ಟೇ ಅಲ್ಲ, ಪಂಪ ಭಾಸಾದಿಗಳ ಪರಿಚಯವೂ ಈತನಿಗೆ ಇದ್ದಿರಬೇಕೆಂದು ತೋರುತ್ತದೆ. ಒಟ್ಟಿನಲ್ಲಿ ಮೂವರೂ ಮೂರು ಮಹಾ ಪ್ರಪಂಚಗಳನ್ನು ಸೃಷ್ಟಿ ಮಾಡಿದ್ದಾರೆ. ಅವರ ವ್ಯಕ್ತಿತ್ವ ಅಳತೆ ತೂಕಗಳಿಗೆ ತಕ್ಕಂತೆ ಅವರು ಕೃಷ್ಣನ ಮಹಿಮೆಯನ್ನು ಪ್ರತಿಪಾದಿಸಿರುತ್ತಾರೆ.

ಮಹಾಭಾರತದ ಶ್ರೀಕೃಷ್ಣನ ವಿಚಾರವನ್ನು ಒಂದೆರಡು ಮಾತುಗಳಲ್ಲಿ ಹೇಳಿ ಮುಗಿಸುವುದು ಕಷ್ಟ. ವೀರಾಧಿವೀರರ ಎದುರಿಗೆ – ಸದ್ಗುಣ ದುರ್ಗುಣ ಗಳೆರಡರಲ್ಲಿಯೂ ಮೀರಿದ ಮಹಾನುಭಾವರಿದ್ದ ಕಾಲದಲ್ಲಿ, ಭೀಷ್ಮ ದ್ರೋಣರೂ ವ್ಯಾಸ ವಿದುರರೂ, ದುರ್ಯೋಧನ ಜರಾಸಂಧ ಶಿಶುಪಾಲರೂ, ಭೀಮಾರ್ಜುನ ಯುಧಿಷ್ಠಿರರೂ ತಮ್ಮ ತಮ್ಮ ಗುಣಶಕ್ತಿಗಳನ್ನು ಮೆರೆದ ರಂಗದಲ್ಲಿ ತಾನು ತನ್ನ ಪ್ರಭಾವವನ್ನು ಸ್ಥಾಪಿಸಿ, ಎಲ್ಲರನ್ನೂ ಬೆರಗು

ಮಾಡಿ, ಭೂಮ್ಯಂತರಿಕ್ಷಗಳನ್ನು ಸೇರಿಸುವಂತೆ ಒಂದೇ ನಿಲವು ನಿಂತು ತನ್ನ ಪೂರ್ತಿತ್ವವನ್ನು ಬೆಳಗಿದ ಮಹಾತ್ಮನು ಆತನು. ಅನೇಕ ಭಾಗಗಳಲ್ಲಿ ಪಾಂಡವರ ಸ್ಥಿತಿಯೂ ಆತನ ಸ್ಥಿತಿಯೂ ಪರಸ್ಪರ ಹೋಲುತ್ತಿದ್ದುವು. ಇಬ್ಬರೂ ಧರ್ಮಾಭಿಮಾನಿಗಳು. ಕೃಷ್ಣನು ಸೆರೆಯಲ್ಲಿ ಹುಟ್ಟಿದ್ದರೆ, ಇವರು ವನದಲ್ಲಿ ಹುಟ್ಟಿ ಬೆಳೆದರು. ಆತನಿಗೆ ರಕ್ಕಸರ ಬಾಧೆ ಉಪಟಳಗಳಿದ್ದರೆ ಇವರಿಗೆ ದುರ್ಯೋಧನನ ಮತ್ಸರದಿಂದ ಉಂಟಾದ ಕಿರುಕುಳ; ಪ್ರಾಣಾಪಾಯ. ಆತನಿಗೆ ಯಾದವ ಕಲಹಗಳಿಂದ ವಿಶ್ರಾಂತಿಯಿಲ್ಲದಿದ್ದರೆ ಇವರಿಗೆ ನಿಲವಿಲ್ಲದ, ನೆಲೆಯಿಲ್ಲದ ಅಲೆದಾಟ; ದೇಶಭ್ರಷ್ಟತ್ವ.

ಮಹಾಭಾರತ ಪ್ರಪಂಚಕ್ಕೆ ಆತನು ಮೊದಲು ಪ್ರವೇಶಮಾಡಿದುದು ದ್ರೌಪದೀ ಸ್ವಯಂವರ ಕಾಲದಲ್ಲಿ. ಆಗ ಎಲ್ಲರಂತೆ ಸಭೆಗೆ ಬಂದ ಆತನು ಪಾಂಡವರು ಬದುಕಿರುವುದನ್ನೂ ಜಯಶಾಲಿಗಳಾದುದನ್ನೂ ತಿಳಿದು ಸಂತೋಷಪಟ್ಟು ಅವರ ಭಾಗದ ದೇವರು ಅವರನ್ನು ಹುಡುಕಿಕೊಂಡು ಹೋಗುವಂತೆ ರಾತ್ರಿಯ ಕತ್ತಲಲ್ಲಿ ಯಾರೂ ಅರಿಯದಂತೆ ಅವರಿಳಿದುಕೊಂಡಿದ್ದ ಕುಂಬಾರನ ಮನೆಗೆ ಹೋಗಿ, ವಾಸುದೇವನೆಂದು ತನ್ನ ಪರಿಚಯವನ್ನು ಹೇಳಿ, ಅವರಿಗೆ ಸುಖವನ್ನು ಬಯಸಿ, ಧೈರ್ಯ ಕೊಟ್ಟು ಬರುವನು. ಅವರಲ್ಲಿನ ಪ್ರೀತಿಯಿಂದ ಸ್ನೇಹವು ಬೆಳೆಯುವುದು. ತಂಗಿಯಾದ ಸುಭದ್ರೆಯು ದುರ್ಯೋಧನನ ಕೈಸೇರದಂತೆಯೂ ತನ್ನ ಪ್ರೀತಿಗೊಪ್ಪಿದ ಅರ್ಜುನನ ಹೆಂಡತಿಯಾಗುವಂತೆಯೂ ಅರ್ಜುನನ ಪ್ರೇಮಕ್ಕೆ ಅನುಕೂಲವಾದ ತಂತ್ರವನ್ನು ಹೂಡಿ ಆ ಮೂಲಕ ಬಾಂಧವ್ಯವನ್ನು ಬೆಳೆಸುವನು. ಸಮಯ ಸಮಯದಲ್ಲಿಯೂ ಸ್ನೇಹಿತರ ಸತ್ವವನ್ನೂ ದೃಢವನ್ನೂ ನೀತಿಯ ನೆಲೆಯನ್ನೂ ಪರೀಕ್ಷೆಮಾಡಿ, ಅರ್ಥಮಾಡಿಕೊಂಡು, ಅವರ ಉತ್ಕರ್ಷೆಯಲ್ಲಿ ಸಂತೋಷಪಟ್ಟು, ದುಃಖದಲ್ಲಿ ಭಾಗಿಯಾಗಿ ಸಮಾಧಾನ ಹೇಳಿ, ಘೋರವಾದ ಯುದ್ಧವು ಸಂಭವಿಸಿದ ಕಾಲದಲ್ಲಿ ಎಲ್ಲ ಆಪತ್ತುಗಳಿಂದಲೂ ಅವರನ್ನು ರಕ್ಷಿಸಿ ತಾನು ದ್ವಾರಕೆಗೆ ಹಿಂದಿರುಗುವನು. ಆರ್ಯಕ್ಷತ್ರಿಯ ಕುಲಗಳಿಗೆ ಸ್ವಲ್ಪ ದೂರವಾದ (ಅನೇಕ ರಾಜರು ಅವನನ್ನು ಹಾಗೆಂದು ಹಳಿಯುವರು) ಯಾದವರ ಮಧ್ಯದಲ್ಲಿ ಹುಟ್ಟಿ, ಭರತಖಂಡದ ಉತ್ತರ ಪಶ್ಚಿಮ ಪ್ರಾಂತಗಳಲ್ಲಿ ಒಂದು ವಂಶದಲ್ಲಿ ಮೊದಲು ಪ್ರಖ್ಯಾತಿ ಪಡೆದು, ತನ್ನ ಗುಣಗಳಿಂದ ಪೂಜ್ಯನಾಗಿ ಪ್ರಜಾರಂಜಕನಾಗಿದ್ದ ಆತನು ರಾಜಸೂಯ ಕಾಲದಲ್ಲಿ ಅಖಿಲ ಭಾರತರಂಗಕ್ಕೆ ಬಂದು

ಅಲ್ಲಿಯೂ ತನ್ನ ವೀರ್ಯವರ್ಚಸ್ಸ್ಥಿತಿಗಳನ್ನು ನಟ್ಟು ಎಲ್ಲರನ್ನೂ ನಡುಗಿಸಿ ಪ್ರತಿಭಟರನ್ನು ಅಡಗಿಸಿದನು. ಆತನ ಸಖ್ಯವಾಗಲಿ ವೈರವಾಗಲಿ ಎಷ್ಟು ಪರಿಣಾಮಕಾರಿ ಎಂಬುದನ್ನು, ಉದ್ಧತನಾದ ಅಮರ್ಷಿಯಾದ ಐಶ್ವರ್ಯಾದಿ ಮದಗಳಿಂದ ಅಂಧನಾದ ದುರ್ಯೋಧನನೇ ಆತನಲ್ಲಿಗೆ ಸಹಾಯಬೇಡಲು ಹೋಗುವ ಪ್ರಸಂಗವು ತಿಳಿಸುವುದು. ಕಡೆಗೆ ತಾನು ಪಾಂಡವರ ಕೆಲದಲ್ಲಿ ನಿಂತು ಶಸ್ತ್ರಾಸ್ತ್ರಗಳನ್ನು ಹಿಡಿದು ಯುದ್ಧ ಮಾಡದಿದ್ದರೂ, ತನ್ನ ಮಂತ್ರಬಲದಿಂದಲೂ ಕಾರ್ಯನಿರ್ವಹಣ ಶಕ್ತಿಯಿಂದಲೂ ಸಮಯಜ್ಞತೆಯಿಂದಲೂ ಅರ್ಜುನನಲ್ಲಿ ಅನುಲಗ್ನವಾದ ಪ್ರಾಣದಿಂದಲೂ ಆತನಿಗೆ ಸಾರಥ್ಯಮಾಡಿ, ಪಾಂಡವರ ಕಾರ್ಯವನ್ನು ಸಾಧಿಸಿಕೊಡುತ್ತಾನೆ. ಉದ್ಯೋಗಪರ್ವದವರೆಗೂ ಹಿಂದೆ ಹಿಂದೆ ನಿಂತು ಅವರಿಗೆ ಸಮಾಧಾನವನ್ನೂ ಭರವಸೆಯನ್ನೂ ಕೊಡುತ್ತ ಇದ್ದವನು ಅಲ್ಲಿಂದ ಆಚೆ ತಾನೇ ಮುಂದೆ ಹೋಗಿ ಶಾಂತಿ ಸಂಧಾನವನ್ನು ನಡೆಯಿಸಿ, ಯುದ್ಧವು ಅನಿವಾರ್ಯವಾಗಲು ಯುದ್ಧಸೂತ್ರವನ್ನು ಹಿಡಿದು, ಅತಿ ಮಾನುಷದಂತೆ ಕಾಣುವ ಶಕ್ತಿಯಿಂದ ಎಲ್ಲವನ್ನೂ ಗೆಲವಿಗೆ ನಡೆಯಿಸುವನು.

ಆದರೂ ಯಾವ ಕಾರ್ಯಸಮಾರಂಭಗಳಲ್ಲಿಯೂ ಸ್ವಾರ್ಥವಿಲ್ಲದೆ, ಸ್ವಪ್ರತಿಷ್ಠೆಯ ಚಿಂತೆಯಿಲ್ಲದೆ ಕೆಲಸ ಮಾಡುವನು. ಆತನದು 'ಧರ್ಮಾಯತ್ತವಾದ ತೇಜೋಬಲ.' ಯಜ್ಞ, ಧರ್ಮ, ಸತ್ಯ ಇವುಗಳನ್ನು ಕಾಪಾಡಲು ಬದ್ಧಕಂಕಣವಾಗಿ ನಿಂತಿದ್ದನು. ಯಾವುದರಲ್ಲಿಯೂ ಕರ್ತೃತ್ವ ಪಕ್ಷಪಾತವನ್ನಿಟ್ಟುಕೊಂಡು ಕೆಲಸ ಮಾಡಿದವನಲ್ಲ. ಜರಾಸಂಧನನ್ನು ಕೊಲ್ಲಲು ಹೊರಟಾಗ ಯುಧಿಷ್ಠಿರನ ಧರ್ಮಪ್ರಭುತ್ವವನ್ನು ಒಪ್ಪಿ ಪ್ರಭುಕಾರ್ಯನಿರ್ವಾಹಕ್ಕಾಗಿ ಹೋಗಿ ಕೆಲಸವನ್ನು ಮುಗಿಸಿಕೊಂಡು ಬರುವನು. ಶಿಶುಪಾಲವಧೆ ಮಾಡಿದುದು ಅವನು ಕೇವಲ ತನ್ನನ್ನು ಬಯ್ದು ಹೀಯಾಳಿಸಿದಾಗ ಅಲ್ಲ; — ಧರ್ಮಕ್ಕೆ ಅಡ್ಡ ಬಂದು ತಾನು ವಹಿಸಿದ್ದ ಯಜ್ಞರಕ್ಷಣ ಕಾರ್ಯಕ್ಕೆ ಶಿಶುಪಾಲನು ಅಡ್ಡಿ ತಂದಾಗ. ವಾಯುಪರೀಕ್ಷಕನು ಮಳೆ ಸಿಡಿಲು ಮಿಂಚು ಗಾಳಿಗಳು ಹೇಗೆ ಸಂಚರಿಸುವುವೆಂಬುದನ್ನು ಮೋಡಗಳ ಮತ್ತು ವಾತಾವರಣದ ಸ್ಥಿತಿಯಿಂದ ತಿಳಿಯುವಂತೆ, ಮುಂದೆ ಯಾವ ಯಾವುದು ಹೇಗೆ ನಡೆಯಬಹುದೆಂಬುದನ್ನು ಯೋಚಿಸಿ, ಧರ್ಮಿಷ್ಠರಾದ ಪಾಂಡವರ ಪಕ್ಷವನ್ನು ವಹಿಸಿದನು. ಅವರ ದ್ವೇಷಿಗಳೇ ತನ್ನ ದ್ವೇಷಿಗಳೆಂದು

ಬೆಂಬಲವಾದನು. ಆಗಿನ ಅಸಹಾಯಶೂರರೆಲ್ಲರೂ – ತನ್ನ ಮೇಲಿನ ವೈರದಿಂದ ಕೆಲವರು, ಪಾಂಡವರ ಉತ್ಕರ್ಷೆಯನ್ನು ಸಹಿಸಲಾರದ ಕರುಬಿಂದ ಕೆಲವರು, ದುರ್ಯೋಧನನ ಸ್ನೇಹದಿಂದ ಕೆಲವರು, ಭಯದಿಂದ ಕೆಲವರು, ಇತರ ಬಗೆಯ ಋಣಗಳಿಗೂ ಬಾಂಧವ್ಯಗಳಿಗೂ ಕಟ್ಟುಬಿದ್ದು ಕೆಲವರು – ಕೌರವರ ಕಡೆ ಸೇರಿಕೊಂಡಾರೆಂದು ಊಹಿಸಿ ಮೊದಮೊದಲೇ ಜರಾಸಂಧ, ಶಿಶುಪಾಲ, ಸಾಲ್ವ, ಏಕಲವ್ಯ ಮುಂತಾದವರನ್ನು ನಿವಾರಿಸಿದ್ದನು; ತೀರಿಸಿದ್ದನು. ಎಲ್ಲ ಕಡೆಗೂ ಕಣ್ಣಿಟ್ಟು, ಸಮಯವೊದಗಿದಾಗ ಎಲ್ಲ ಕಡೆಯೂ ಕೈವಾಡ ತೋರಿಸಿ ತಾನು ಯಾವುದು ಧರ್ಮವೆಂದು ತಿಳಿದಿದ್ದನೊ ಅದನ್ನು ಸಾಧಿಸಿದನು. ಪ್ರೀತಿಯ ಮಗುವನ್ನು ತಾಯಿಯು ಸಾಕುವಂತೆ, ತಂದೆಯು ಅಭಿವೃದ್ಧಿಗೆ ತರುವಂತೆ, ಅರ್ಜುನ ಸಾತ್ಯಕಿಯರಿಗೆ ಬೇಕಾದರೆ ತನ್ನ ಖಂಡವನ್ನಾದರೂ ತೆರಲು ಸಿದ್ಧನಾಗಿ ಕಾಪಾಡಿ ಪಾಂಡವ ಯಾದವ ಕಾರ್ಯಗಳನ್ನು ನೆರವೇರಿಸಿ ಲೋಕಕಲ್ಯಾಣವನ್ನು ಸಾಧಿಸುವನು.

ಒಂದೆರಡು ಕಡೆ ಆತನು ಮಾಡುವ ಕೆಲಸವು ಈ ಕಾಲದ ನಮಗೆ ಒಪ್ಪದಿರಬಹುದು; ಒಂದೆರಡು ಮಾತುಗಳನ್ನು ಕೃಷ್ಣನಂತಹವನು ಆಡದಿದ್ದರೆ ಚೆನ್ನಾಗಿರುತ್ತಿತ್ತು ಎನ್ನಿಸಬಹುದು. ಆದರೂ ಒಟ್ಟದಲ್ಲಿ ಆತನ ಮೂರ್ತಿತ್ವವನ್ನೂ ಕಾರ್ಯಪ್ರಪಂಚವನ್ನೂ ನೋಡಿದುದೇ ಆದರೆ ಗ್ರೀಕರು ನೋಡುತ್ತಿದ್ದಂತೆ ಸ್ಥಿರದೃಷ್ಟಿಯಿಂದ, ಅಖಂಡ ದೃಷ್ಟಿಯಿಂದ (' See it steadily and see it whole '), ನೋಡಿದುದೇ ಆದರೆ, ಈಗಿನ ಕಣ್ಣಿಗೆ ಅಧರ್ಮವೆಂದು ಕಾಣಿಸುವುದೆನ್ನುವವರೂ ಆಗಿನ ಆತನ ನಡತೆಯನ್ನು ಅರ್ಥಮಾಡಿಕೊಳ್ಳಬಹುದು. ಕಾಲ ದೇಶ ಸ್ಥಿತಿ ಜನ ಸ್ವಭಾವಗಳೂ ಗುಣ ಕ್ರಿಯಾ ಸಂಬಂಧಗಳೂ ಹಾಗಿರುವಾಗ – ಪ್ರತಿಯೋಧಿಗಳು ಕಪಟಿಗಳಾಗಿ ವ್ಯಾಪಕರಾಗಿರುವಾಗ – ಪಾಪ, ಬೇರೆ ಹೇಗೆ ಮಾಡುವದಕ್ಕೆ ತಾನೆ ಆತನಿಗೆ ಸಾಧ್ಯವಿತ್ತು? ಈ ಸಂದರ್ಭದಲ್ಲಿ ಇನ್ನೂ ಒಂದು ಸಂಗತಿಯನ್ನು ನಾವು ನೆನಪಿನಲ್ಲಿಡಬೇಕಾಗುತ್ತದೆ: ಆತನು – ಈ ರೀತಿ ಹೇಳಬಹುದಾದರೆ – ಕೇವಲ ಅಥವಾ ಶುದ್ಧ ಧರ್ಮದ ಪಕ್ಷಪಾತಿಯಲ್ಲ; ಉಪಾಸಕನಲ್ಲ. ಶುದ್ಧ ಧರ್ಮವೆಂಬುದು ತಾನೆ ಯಾವುದು? ಎಲ್ಲಾ ಸಮಯಗಳಲ್ಲಿಯೂ, ಎಲ್ಲಾ ಕಾಲ ದೇಶ ಸನ್ನಿವೇಶಗಳಲ್ಲಿಯೂ, ಇದೇ ಧರ್ಮವೆಂದು ಯಾವುದನ್ನು ಹೇಳೋಣ? ಕೇವಲ ಸಮಯಸಾಧನೆಯೆಂದು ಹೊರಗೆ ಕಾಣುವುದು ಕೂಡ, ಒಳಹೊಕ್ಕು ನೋಡಿ

ನರೆ, ಅನೇಕ ವೇಳೆ ಧರ್ಮವಾಗಿರಬಹುದು. ಧರ್ಮದ ಸ್ವರೂಪವನ್ನು ಆತನೇ ಅನೇಕ ಪ್ರಸಂಗಗಳಲ್ಲಿ ಚರ್ಚೆ ಮಾಡಿ ತನ್ನ ಅಭಿಪ್ರಾಯವನ್ನು ತಿಳಿಸಿದ್ದಾನೆ. ಆತನ ಧರ್ಮಕ್ಕೂ ನಡತೆಗೂ ಆತನ ಸಮಗ್ರ ಜೀವನವೇ ಸಾಕ್ಷಿ ಪ್ರಮಾಣ. ಸಮಾಜಹಿತಕ್ಕಾಗಿ, ಲೋಕಕಲ್ಯಾಣಕ್ಕಾಗಿ ಬಾಳಿದವನು ಆತನು. ದೊಡ್ಡ ಹಿತವನ್ನು ಸಾಧಿಸುವವನು ಅದಕ್ಕಾಗಿ ಹಲವು ಸಣ್ಣ ಹಿತಗಳನ್ನು ಬಲಿ ಕೊಡಬೇಕಾದೀತು. ಸಣ್ಣ ಕಲ್ಯಾಣಗಳು 'ಸ್ವರಸತಯಾ' ಒಳ್ಳೆಯುವಾಗಿರಬಹುದಾದರೂ ಒಟ್ಟಿನ ಮಂಗಳಕ್ಕೆ ಅಡ್ಡಿ ತರುವಂತಾದರೆ ಅವುಗಳನ್ನು ನಿಷ್ಠುರವಾಗಿ ಆಹುತಿ ಕೊಡಬೇಕಾಗುವುದು. ಅವುಗಳು ಉರಿದೇ ತೀರಬೇಕಾದಾಗ ಅವುಗಳನ್ನು ನೋಡಿ ನಿಟ್ಟುಸಿರು ಬಿಡೋಣ; ಕಣ್ಣೀರು ಹಾಕೋಣ; ಆದರೆ ಗತ್ಯಂತರವಿಲ್ಲ.

ತ್ಯಜೇತ್ ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್

ಎಂದು ಕೌರವ ಸಭೆಯಲ್ಲಿ ಆತನು ಹೇಳಿದ ಶಿಷ್ಟಧರ್ಮದ ನುಡಿಗಳು ಆತನ ಎಲ್ಲ ಕಾರ್ಯಗಳಿಗೂ ಸ್ಥಾನವನ್ನೂ ಬೆಲೆ ಗೌರವಗಳನ್ನೂ ಕಟ್ಟಿಕೊಡುತ್ತವೆ. ಆತನದು ಅನಂತ ಸಂಸಾರ. ಧರ್ಮ, ಸತ್ಯ, ತಪಸ್ಸು, ಯಜ್ಞ, ಸಮಾಜದ ಪ್ರವೃತ್ತಿ – ಇವುಗಳನ್ನು ಉಳಿಸಬೇಕಾಗಲು ಒಂದು ನಿಮಿಷವೂ ವಿಶ್ರಾಂತಿಯಿಲ್ಲದೆ ಶ್ರಮಪಟ್ಟನು. ಕಡೆಗೆ ಒಂದು ವೇಳೆ ಆಗ ತನ್ನ ಸಖರಾಗಿದ್ದ ಪಾಂಡವರು ದುರ್ಮದರಾಗಿ ಕೆಡುಕರಾಗುವ ಸಂದರ್ಭ ಬಂದರೆ ಅವರನ್ನೇ ಮೆಟ್ಟಿ ತುಳಿಯಲು ಆತನು ಹಿಂಜರಿಯುತ್ತಿರಲಿಲ್ಲವೆಂದು ತೋರುವುದು. ಸ್ವಂತಕ್ಕಾಗಬೇಕಾಗಿದ್ದುದೇನು ? ಮಹಾಭಾರತದಲ್ಲಿ ವರ್ಣಿತವಾಗಿರುವಂತೆ* ಆತನು ಸಿದ್ಧಧರ್ಮದ ಮೂರ್ತಿಯಾಗಿದ್ದಾನೆ. ಎಲ್ಲದರ ಒಳತಿರುಳನ್ನೂ ಅರಿತಿದ್ದನು. ಎಲ್ಲವನ್ನೂ ಸಾಧಿಸಿದ್ದನು. ಎಲ್ಲಕ್ಕೂ ಕೈಹಾಕಿದರೂ ಯಾವುದಕ್ಕೂ ಅಂಟಿಕೊಳ್ಳದೆ ಸಿಕ್ಕಿಕೊಳ್ಳದೆ ಕೆಲಸ ಮಾಡಿ, ಅದು ಮುಗಿದ ಮೇಲೆ ಯಃಕಶ್ಚಿತ್ ಮನುಷ್ಯನಂತೆ ಮೃತನಾದನು-- ಹೌದು, ಕೃಷ್ಣನು ಮೃತನಾದನು; ಶಾಪಗ್ರಸ್ತನಾಗಿ ಮೃತನಾದನು. ಬಲ್ಲಂತೆ ಪಾಪವನ್ನೂ ಅಧರ್ಮವನ್ನೂ

* ಹರಿವಂಶವು ಮಹಾಭಾರತಕ್ಕೆ ಆಮೇಲೆ ಸೇರಿಸಿದ ಕೃಷ್ಣಕಥೆಯನ್ನೊಳಗೊಂಡ ಗ್ರಂಥ; ಭಾಗವತವೂ ವಿಷ್ಣು ಅವತಾರ ಕಥೆಗಳಲ್ಲಿ ಸೇರಿ ಕೃಷ್ಣಚಾರಿತ್ರಗಳನ್ನು ವರ್ಣಿಸಿ ಉದಾಹರಿಸಿದ ಗ್ರಂಥ; ಎರಡೂ ಭಾರತಕ್ಕೆ ಈಚಿನವು.

ನಾಶ ಮಾಡಿ, ಪುಣ್ಯವನ್ನು ಬಿತ್ತಿ, ಇನ್ನು ತಾನು ಮಾಡಬೇಕಾದುದು ಏನೂ ಇಲ್ಲದಿರುವಾಗ ತನಗೇ ಬೇಸರಬಂದ ಕಾಲದಲ್ಲಿ, ಎಲ್ಲಿಯೋ ಹೋಗಿ ಹೇಗೋ ಮೃತನಾದನು.

ಆತನು ಹುಟ್ಟಿದಂದಿನಿಂದಲೂ ಕಷ್ಟಜೀವಿಯೇ. ಅಪಾಯಗಳ ದವಡೆಯಲ್ಲಿ ಸಿಕ್ಕಿಕೊಂಡಿದ್ದರೂ ಅದನ್ನು ಹಿರಿದು ಹೊರಕ್ಕೆ ಬಂದು ಪಾಂಡವರ ಮೂಲಕ ಖಳಮಂಡಲವನ್ನೆಲ್ಲ ಮುರಿದನು. ತನ್ನ ವಂಶದಲ್ಲಿನ ಅಂತಃಕಲಹಗಳನ್ನೆಲ್ಲ ಸರಿಪಡಿಸಿದನು. ಲಂಪಟತೆಗಳನ್ನು ಭಗ್ನಮಾಡಿದನು. ಇತ್ತ ಅಕ್ರೂರ, ವಸುದೇವ ಬಲರಾಮರ ಯಾಜಮಾನ್ಯಕ್ಕೆ ಒಳಪಟ್ಟಿದ್ದರೂ, ಅತ್ತ ಯುಧಿಷ್ಠಿರನ ಯಾಜಮಾನ್ಯವನ್ನು ಒಪ್ಪಿಕೊಂಡಿದ್ದರೂ ಎಲ್ಲರಿಂದಲೂ ಮಾನಿತನಾಗಿ ಎಲ್ಲರಿಗೂ ತಿಳಿಯಹೇಳಿ ಎಲ್ಲರಿಂದಲೂ ಕೆಲಸ ಮಾಡಿಸಿದನು. ಎಂತಹ ವಿಪತ್ತುಗಳ ಮಧ್ಯದಲ್ಲಿಯೂ ಸರಸವಾದ, ಸಮತೆ ತಪ್ಪದ, ಸಾತ್ವಿಕ ಜೀವನವನ್ನು ನಡೆಯಿಸಿಕೊಂಡನು ಎಂದು ಹೇಳಬಹುದೇ ಹೊರತು ಮಹಾಭಾರತವನ್ನೆಲ್ಲ ಹುಡುಕಿದರೂ ಎಲ್ಲಿಯೇ ಆಗಲಿ, ಒಂದು ದುರಾಶೆಯ, ಒಂದು ಕಾಮುಕತೆಯ ಸೂಚನೆ (ಶಿಶುಪಾಲನ ಮೂದಲಿಕೆಗಳಲ್ಲಿ ಕೂಡ), ಅಧರ್ಮಕಾರ್ಯದ ಒಂದು ನೆಳಲು ಕವಿದು ಬರುವುದಿಲ್ಲ. ಆತನಿಗೆ ಬಿತ್ತ ವಾವುದು ಹೊಟ್ಟು ಯಾವುದು, ಕಳೆ ಯಾವುದು ಪಯಿರಾವುದು ಎಂಬುದು ಗೊತ್ತು. ಆದುದರಿಂದ ಆತನು ಆಗಿನ ಭರತಖಂಡದಲ್ಲಿ ನಾಶಯೋಗ್ಯವಾದುದನ್ನೆಲ್ಲ ನಾಶ ಮಾಡಿ, ಧರ್ಮವನ್ನು ಬೆಳೆದಿದ್ದಾನೆ. ಇಂಥವನನ್ನಲ್ಲದೆ ಬೇರೆ ಯಾರನ್ನು ದೇವರೆನ್ನುವುದು? ಜೀವನದ ಪ್ರತಿಯೊಂದು ರಂಗದಲ್ಲಿಯೂ ಮಾನವ ಯೋಗ್ಯತೆಯ ಪರಮಾವಧಿಯನ್ನು ಆತನು ತೋರಿಸಿದ್ದಾನೆ. ಕೇವಲ ದೇವರು ಹೀಗೆಲ್ಲ ಮಾಡಿದನೆಂದರೆ ಹೆಚ್ಚುಗೆಯೇನೂ ಇಲ್ಲ; ಮನುಷ್ಯನಾಗಿದ್ದವನು ಈ ಬಗೆಯ ಗರಿಮೆಯಿಂದ ದೈವತ್ವವನ್ನು ಪಡೆದನೆಂದರೆ ಮಾನವವರ್ಗಕ್ಕೇ ಗೌರವ; ಭರವಸೆ. ಎಲ್ಲ ಯತ್ನಗಳಿಗೂ ನಂಬಿಕೆ, ಉತ್ತೇಜನ, ಮೇಲ್ಪಂಕ್ತಿ. ಇದ್ದುದೂ ಹಾಗೆಯೇ.

ಪಂಪನಿಗೂ ಕೃಷ್ಣನಲ್ಲಿ ಗೌರವವಿದೆ. ಆತನ ಕೃಷ್ಣನೂ ಪುರುಷೋತ್ತಮನು. ರಾಜಸೂಯ ಪ್ರಸಕ್ತಿ ಬಂದು ಯುಧಿಷ್ಠಿರನು ಆತನಿಗೆ ಹೇಳಿಕಳುಹಿ ಅವನ ಅಭಿಪ್ರಾಯವನ್ನು ಕೇಳಲು ಅದು ಬಹಳ ಕಷ್ಟವೆಂದು ಹೇಳುವುದರ ಜೊತೆಗೆ ಹಿಂದೆ ಕೃತಯುಗದಲ್ಲಿ ಸೋಮ ವರುಣರ ರಾಜಸೂಯಗಳಲ್ಲಿ ದೇವಾ

ಸುರ ಯುದ್ಧವು ನೆಗಳಲು ಹಿರಣ್ಯ ಕಾಳನೇಮಿ ಮೊದಲಾದ ದೈತ್ಯರೆಲ್ಲರೂ ತನ್ನ ಚಕ್ರಘಾತದಲ್ಲಿ 'ಅಟ್ಟಿಗ್ಗ ಮಟ್ಟಿಗ್ಗದಂತಾದರೆಂ'ದು ಆತನು ವರ್ಣಿಸಿರುವನು. ಅರ್ಜುನನೂ ತಾನೂ ನರನಾರಾಯಣರೆಂದು ಆತನಿಗೆ ಗೊತ್ತಿದ್ದು ಹಲವು ವೇಳೆ ಅರ್ಜುನನಿಗೆ ತಾನೇ ಆ ಸಂಗತಿಯನ್ನು ತಿಳಿಸುವನು.* ತನಗೂ ಅವನಿಗೂ ಯಾವ ಭೇದವೂ ಇಲ್ಲವೆಂದೂ ಇಬ್ಬರಿಗೂ ಹಲವು ಜನ್ಮಗಳಲ್ಲಿನ ಕೆಳೆತನವುಂಟೆಂದೂ ತಿಳಿಸುವನು. ಆದರೂ ಕೃಷ್ಣನ ಮುಖ್ಯಸ್ಥಾನವು ಅರ್ಜುನನ ದಿವ್ಯ ಸ್ನೇಹಿತನಾಗಿರುವುದು. ಸರ್ವದಾ ಅವನ ಹಿಂದೆ ನಿಂತು ಅವನಿಗೆ ಸಹಾಯ ಮಾಡುವನು; ಸಮಯೋಚಿತ ಬುದ್ಧಿಯನ್ನೂ ಕಾರ್ಯ ರೀತಿಯನ್ನೂ ಹೇಳಿಕೊಟ್ಟು, ಅವನ ಜಯಕ್ಕೆ ಸಹಾಯಮಾಡಿ ಅವನಿಗೆ ಮೂರ್ಧಾಭಿಷೇಕ ಮಾಡಿಸುವನು. ಕೃಷ್ಣಾರ್ಜುನ ಸಂಬಂಧಕ್ಕೆ ಪಂಪನು ಹೇಗೆ ಬೆಲೆಗೊಟ್ಟಿದ್ದನೆಂಬುದು ಸುಭದ್ರಾಹರಣ ಭಾಗದಲ್ಲಿ ವಿಶೇಷವಾಗಿ ಸ್ಪಷ್ಟ ವಾಗುವುದು. ಹನ್ನೆರಡು ತಿಂಗಳ ದಿಗ್ವಿಜಯ ಪ್ರಪಂಚವನ್ನೂ ಸುಭದ್ರಾ-ಹರಣ, ಪುರುಷೋತ್ತಮನ ಪರಮ ಮಿತ್ರತ್ವ— ಇವುಗಳನ್ನೂ ಅರ್ಜು-ನನು ಯುಧಿಷ್ಠಿರನಿಗೆ ವರ್ಣಿಸಲು ಅದನ್ನು ಕೇಳಿ ಎಲ್ಲರೂ ಸಂತೋಷಪಡು ವರು. ರಾಜಸೂಯದಲ್ಲಿಯಂತೂ ಕೃಷ್ಣನ ವೀರವನ್ನು ಪಂಪನು ಕಳೆ ಕಟ್ಟು ವಂತೆ ವರ್ಣಿಸಿದ್ದಾನೆ. ಶಿಶುಪಾಲನು ಇತರ ಭಾರತಗಳಲ್ಲಿ ವೀರನಂತೆ ಯುದ್ಧ ಮಾಡಿದ್ದರೂ ಪಂಪನ ಕೃಷ್ಣನಿಗೆ ಅವನಲ್ಲಿ ತೀರಾ ಲಘುಭಾವನೆ. ತನಗೆ ಆರತಿಯೆತ್ತಿದ್ದ ತಳಿಗೆಯನ್ನು ತಿರ್ರನೆ ತಿರುಗಿಸಿ ಅವನ ತಲೆಯನ್ನು ತೆಗೆಯು ವನು. ಅಲ್ಲಿಯೂ ವೈಕುಂಠದ ದ್ವಾರಪಾಲಕನಾಗಿ ಶಾಪಗ್ರಸ್ತನಾಗಿದ್ದವನಿಗೆ ವಿಷ್ಣುವಿನ ಅವತಾರವಾಗಿ ಜನ್ಮವೆತ್ತಿದ್ದ ಕೃಷ್ಣನು ಮೋಕ್ಷವನ್ನು ಉಂಟು ಮಾಡಿದನೆಂಬಂತೆ ಶಿಶುಪಾಲನ ತಲೆಯು ಆ ತಳಿಗೆಯ ನಡುವೆ ಕಳಕಳಿಸಿ — ನೋಡು ಕೃಷ್ಣ, ಸಾಧಿಸಿದೆನೆನ್ನುವ ತೆರದಲ್ಲಿ — ನಗುತ್ತಿದ್ದ ವರ್ಣನೆಯಿದೆ. ಜರಾಸಂಧ ವಧೆ, ಖಾಂಡವ ದಹನ, ರಾಜಸೂಯ ಮುಂತಾದ ಎಲ್ಲ ಸಮಯಗಳಲ್ಲಿಯೂ ಪಂಪನಲ್ಲಿ ಕೃಷ್ಣನ ಮಿತ್ರತ್ವವೇ ಪ್ರಧಾನ ಸಂಗತಿ. ತನ್ನ ನಾಯಕನ ಕೀರ್ತಿಗೆ ಕುಂದನ್ನು ತರುವ ಯಾವ ಪ್ರಸಂಗವನ್ನೂ ಅವನು ವರ್ಣಿಸಿಲ್ಲ. ಮುಂದೆ ಭೀಷ್ಮನು ಯುಧಿಷ್ಠಿರನಿಗೆ ತನ್ನ ವಧೋಪಾಯ

* ಇದರಿಂದ ಪಂಪನ ಕಥಾನಾಯಕನ ಉನ್ನತಿ ಹೆಚ್ಚುವುದು. ಮಹಾಭಾರತದಲ್ಲಿ ಬಹುವಾಗಿ ವ್ಯಾಸರ, ನಾರದರ, ಬ್ರಾಹ್ಮಣರ ಮಾತೇ ಈ ಸಂಬಂಧಕ್ಕೆ ಆಧಾರ.

ವನ್ನು ತಿಳಿಸುವಾಗ ಕೂಡ 'ನರಂಗಱಿಪದೀ ತೆಱದಿಂ ನೆಗಟ್ದು . . . . ವೀರ ಲಕ್ಷ್ಮಿಗೆ ನೆಲೆಯಾಗು ಪೋಗು' ಎಂದು ಹೇಳಿಸಿರುವನು. ಹೆಚ್ಚೆಂದರೆ ಅರ್ಜುನನ ಸಮಕ್ಕೆ ನಿಂತು ಎಲ್ಲ ಕೆಲಸಗಳನ್ನೂ ನಡೆಯಿಸಿಯಾನೇ ಹೊರತು ಎಂದಿಗೂ ಅವನಿಗೆ ಮೇಲ್ಗೈ ಅಲ್ಲ. ವರ ಶಾಪಗಳು, ಅಸ್ತ್ರ ಶಸ್ತ್ರ ರಹಸ್ಯಗಳು ಮುಂತಾದವನ್ನೆಲ್ಲ ಬಲ್ಲವನಾಗಿ, 'ಕಾಲ ಕುಶಲನಪ್ಪುದಱಿಂ' — ಸಮಯ ವರಿತು ಎಚ್ಚರ ಕೊಡುವನು, ಆಪತ್ತಿನಿಂದ ತಪ್ಪಿಸುವನು. ದ್ರೌಪದೀ ವಸ್ತ್ರಾಪಹರಣದ ಮಾತೇ ಬರುವ ಸಂಭವವಿಲ್ಲದುದರಿಂದ, ಸತ್ಯಭಾಮೆ ಯೊಡನಿದ್ದ ಕೃಷ್ಣನ ಹರಕೆಯಿಂದ ಆಕೆಯ ವಸ್ತ್ರವು ಅಕ್ಷಯವಾದ ಪವಾಡ ವೃತ್ತಾಂತಕ್ಕೆ ಅವಕಾಶವಿಲ್ಲ.* ಅಲ್ಲಿ ಆತನ ಸುಳಿವೇ ಇಲ್ಲ. ರಾಯಭಾರ ಕಾಲದಲ್ಲಿಯೂ ಪಂಪನ ಶ್ರೀಕೃಷ್ಣನು ಯುಧಿಷ್ಠಿರನ ಅಭಿಪ್ರಾಯವನ್ನು ತಿಳಿದು ದಂಡಪ್ರಯೋಗದ ಮುನ್ನ ಸಾಮವನ್ನು ಮುಂತಿಕ್ಕಿ ನಿಜವಾದ ಮಂತ್ರಿ ಯಂತೆ ಮೊದಲು ಸಂಧಿಯ ಏರ್ಪಾಡನ್ನೇ ಮಾಡಬೇಕೆಂದು ತಿಳಿಸಿ, ತಾನೇ ಹಸ್ತಿನಾವತಿಗೆ ನೇರ ಹೋಗಿ, ದುರ್ಯೋಧನನನ್ನು ಕಂಡು, ಹೆದರಿಸಿ ಬೆದರಿಸಿ, ಅವನನ್ನು ರಾವಣನಿಗೂ ನೆಲವನ್ನು ಸೀತೆಗೂ ಹೋಲಿಸಿ ಎಲ್ಲಿಗೂ ಅವನು ಬಗ್ಗದಿರಲು, ಪಾಂಡವರ ಕೈಯಲ್ಲಿ ನಿನಗೆ 'ನಿರ್ನೇಕವಾಗದೆ' ಎಂದು ಕೊನೆ ಮಾತು ಹೇಳಿ ಹಿಂದಿರುಗುವನು. ಒಟ್ಟಿನಲ್ಲಿ ಪಂಪನ ಕೃಷ್ಣನು ಆದಿಪುರುಷ ನಾದ ಶ್ರೀಮನ್ನಾರಾಯಣನಾದರೂ ವೇದ ಪುರಾಣ ಅವತಾರ ಕಥೆಗಳಿಗೆ ಹೊಂದುವಂತೆ ವಿನುತನಾಗಿದ್ದರೂ ಕಥೆಯ ನಾಯಕನಾದ ಅರ್ಜುನನಿಗೆ ನಚ್ಚಿನ ಸ್ನೇಹಿತನಂತೆ, ವೀರನಂತೆ, ಮಹಾ ಮಂತ್ರಿಯಂತೆ ಸಹಾಯಮಾಡಿ ಸೋದರತ್ತೆಯ ಮಕ್ಕಳಾದ ಪಾಂಡವರ ವಿಶ್ವಾಸವನ್ನೂ ಪೂಜ್ಯತೆಯನ್ನೂ ಪಡೆದು ತನ್ನ ಭಾಗದ ಕಾರ್ಯಗಳನ್ನು ನೇರವೇರಿಸುವನು.

ಗದುಗಿನ ಭಾರತದಲ್ಲಿ ಕೃಷ್ಣನು ಮೊದಲಿಂದ ಕಡೆಯವರೆಗೂ ಒಂದೇ ಬಗೆಯ ಕಾರ್ಯಶಕ್ತಿಯನ್ನೂ ದೈವೀಗುಣವನ್ನೂ ತೋರಿಸುವನು. ಲಕ್ಷ್ಯ ಭೇದನ ಮೂಲಕವಾಗಿಯೇ ದ್ರೌಪದೀಪರಿಣಯವಾಗಬೇಕಾಗಿದ್ದರೂ, ಸಾಮಾನ್ಯ ಸ್ವಯಂವರದಲ್ಲಿ ಕನ್ಯೆಯನ್ನು ವರಿಸೆಂದು ಹೇಳುವಂತೆ ಧೃಷ್ಟ-

* ಆ ಸಮಯದಲ್ಲಿ ಕೃಷ್ಣನು ಸಾಲ್ವನ ಮೇಲೆ ಯುದ್ಧಕ್ಕೆ ಹೋಗಿದ್ದನು. ವಸಿಷ್ಠರ ಉಪದೇಶದಿಂದ ದ್ರೌಪದಿಯು ಗೋವಿಂದನ ಸ್ಮರಣೆಮಾಡಿದುದರಿಂದ ಆಕೆಯ ವಸ್ತ್ರವು ಅಕ್ಷಯವಾಯಿತೆಂಬ ಮಾತಿದೆ, ಮಹಾಭಾರತದಲ್ಲಿ.

ದ್ಯುಮ್ನನು ದ್ರೌಪದಿಗೆ ಇತರರಂತೆ ಕೃಷ್ಣನನ್ನೂ ತೋರಿಸುವನು. 'ಅಖಿಳ ನಿಗಮಾವಳಿ ಶಿರೋಮಣಿ'ಯಾದ ಕೃಷ್ಣನನ್ನು ವರಿಸು; ಆತನು 'ಮದನ ನಯ್ಯನು' 'ಮೂಜಗವ ಮಾಡಿದನ ತಾತನು' ಎಂದು ವರ್ಣಿಸುವನು. ಭಕ್ತಿಯ ಉದ್ರೇಕದಲ್ಲಿ ಆಕೆಯು ಆತನನ್ನು ನೆನೆದು ಹೊಂಪುಳಿಯೋಗಿ ರೋಮಾಂಚನದ ನೃಯುಬ್ಬಿನಲ್ಲಿ ತನುಪುಳಕಾಂಬುಪೂರದಲ್ಲಿ ಮನದೊಳಗೆ ಆತನನ್ನು ವಂದಿಸುವಳು. ಆತನಲ್ಲಿ ತನಗೆ ಗುರುಭಾವನೆಯೆ ಸಂಜನಿಸಿತೇ ನೆಂದರಿಯೆ ಎಂದು ಮೊದಲಾದ ಭಾವದಲ್ಲಿ ಆರಂಭವಾಗಿ ಆಕೆಯೂ ಇತರರೂ ಕೊನೆಯವರೆಗೂ ಭಕ್ತಿಸ್ವರ್ಗದ ಸೋಪಾನಗಳಲ್ಲಿಯೆ ಏರಿ ಏರಿ ಹೋಗು ವಂತೆ ಸನ್ನಿವೇಶಗಳು ವರ್ಣಿತವಾಗಿವೆ. ನಾರಣಪ್ಪನ ಭಾರತದಲ್ಲಿ ಎಲ್ಲ ಕೀರ್ತಿಯೂ ಕೃಷ್ಣನಿಗೇ ಸಲ್ಲತಕ್ಕದ್ದು; ಎಲ್ಲ ಕೆಲಸವೂ ಅವನದು; ಎಲ್ಲ ಗುಣದಲ್ಲಿಯೂ ಅವನಿಗೇ ಹೆಚ್ಚಿಗೆ; ಅವನ ಮೇಲೆ ಯಾರ ಕೈಯೂ ಇಲ್ಲ. ಶ್ರೀಮಹಾವಿಷ್ಣುವು ಧರ್ಮಪರಿಪಾಲನೆಗೂ ಪಾಪವಿನಾಶಕ್ಕೂ ಕೃಷ್ಣರೂಪ ದಲ್ಲಿ ಅವತಾರವೆತ್ತಿ, ಅರ್ಜುನನ ಮೂಲಕ ದುಷ್ಟಶಿಕ್ಷಣ ಮಾಡಿಸಿ, ಭೂಭಾರ ವನ್ನು ಪರಿಸಿ, ವಿರಾಮವಿಲ್ಲದೆ ಭಕ್ತಪೋಷಣೆ ಮಾಡುತ್ತಾನೆ ಆತನು ವಿಶ್ವಂಭರ; ಸರ್ವವ್ಯಾಪಿ; ಸರ್ವಾಂತರ್ಯಾಮಿ. ಎಲ್ಲ ಸ್ವತಂತ್ರವೂ ಅವ ನಿಗೇ ಮಾತ್ರ. 'ತೇನ ವಿನಾ ತೃಣಮಪಿ ನ ಚಲತಿ' ಎಂಬ ನುಡಿಯಂತೆ ಎಲ್ಲಕ್ಕೂ ಆತನೇ ಚೈತನ್ಯಪ್ರದನು. ಇತರರು ಯಂತ್ರದ ಬೊಂಬೆಗಳು — ಆತನ ಕೈಗೊಂಬೆಗಳು. ಆತನು ಆಡಿಸಿದ ಹಾಗೆ ಪ್ರಪಂಚವು ಆಡುವುದು. ಒಂದು ಕಡೆ ಓಗೆ ಇನ್ನೊಂದು ಕಡೆ ಹಾಗೆ, ತಾನೇ ಜನರ ಮನಸ್ಸನ್ನು ಪ್ರೇರಿಸುವನು; ಮೋಹಗಳನ್ನು ಉಂಟುಮಾಡುವನು; ಪ್ರೀತಿಯನ್ನು ಹೆಚ್ಚಿ ಸುವನು; ಕ್ರೋಧಗಳನ್ನು ಹುರಿಗೊಳಿಸುವನು. ತನ್ನ ಉದ್ದೇಶಸಾಧನೆಗೆ ಬೇಕಾದಂತೆ ಎಲ್ಲರಿಗೂ ಆಸೆ, ಆಕಾಂಕ್ಷೆ, ಕಾರ್ಯಪ್ರವೃತ್ತಿಗಳುಂಟಾಗುವಂತೆ ಮಾಡಿ, ಒಬ್ಬರನ್ನು ಒಬ್ಬರ ಮೇಲೆ ಬುಗುರಿಗಳಂತೆ ಕಡೆದು ಬಿಟ್ಟು, ವೈರ ಗಳನ್ನು ಬಿತ್ತಿ ಬೆಳೆಯಿಸಿ, ತನಗೆ ಬೇಡವಾದುದನ್ನು ಉಳಿಸಿ ನಾಶಮಾಡುವನು. ಭೂಭಾರವನ್ನು ಇಳಿಸಲೆಂದೇ ಹುಟ್ಟಿದವನಾದುದರಿಂದ, ಯುಧಿಷ್ಠಿರನ ಸಾಮ ವೃತ್ತಿಯಿಂದ ಎಲ್ಲಿ ಸಂಧಿಯಾಗಿಬಿಡುವುದೊ ಎಂದು ಚಿಂತಿಸುತ್ತ ಭಯಪಡು ತ್ತಲೇ ಇದ್ದು, ಭೀಮದ್ರೌಪದಿಯರ ಅಭಿಪ್ರಾಯವನ್ನು ತಿಳಿದುಕೊಂಡ ಕ್ಷಣವೇ ಅವರಿಗೆ ಅಭಯವನ್ನಿತ್ತು, ತನಗೆ ಇಷ್ಟವಿಲ್ಲದ ಸಂಧಿಯನ್ನು ಸರ್ವ

ವಿಧದಲ್ಲಿಯೂ ಮುರಿದು ಬರುತ್ತೇನೆಂದು ಹೇಳಿ ಹೋಗಿ ಮುರಿದೇ ಬರುವನು! ಆತನ ಯೋಗ್ಯತೆಯೂ ಅತಿಮಾನುಷ ತೇಜಸ್ವಿತೆಯೂ ಎಲ್ಲರಿಗೂ ಗೊತ್ತು. ಶತ್ರುಗಳಾಗಿ ನಿಂತು ಚಲದಿಂದ ಹೋರಾಡಿಸಿದ ಶಿಶುಪಾಲ ದುರ್ಯೋಧನರಿಗೂ ಆತನ ನಿಜವಾದ ವೃತ್ತಾಂತವು ತಿಳಿದಿದೆ. ಹಿಂದಿನ ರಾವಣಾದಿಗಳಂತೆ ತಾವೂ ಆತನನ್ನು ಕೆಣಕಿ ಸಾಯಬೇಕೆಂದೂ ಆತನ ಕೈಯಿಂದ ಹತರಾದರೆ ತಮಗೆ ಮೋಕ್ಷನೆಂದೂ ಅವರು ಅರಿತಿದ್ದರು. ಕ್ಷತ್ರಿಯರು, ಬ್ರಾಹ್ಮಣರು, ಋಷಿಗಳು, ಹಿರಿಯರು, ಕಿರಿಯರು, ಹಗೆಯರು, ಕೆಳೆಯರು ಎಲ್ಲರೂ ಆತನ ಮಹಿಮೆಗೂ ಪ್ರತಿಭೆಗೂ ಬಾಗಿ ಶರಣೆಕ್ಕುವರು. ಆತನೋ! ಹೆಸರನ್ನು ನೆನಸಿಕೊಂಡ ಕ್ಷಣ ಭಕ್ತರೆದುರಿಗೆ ಸುಳಿದು ಒದಗಿದ ಕಷ್ಟಗಳಿಂದ ಅವರನ್ನು ಪಾರಾಗಿಸುವನು; ದಾಸನಂತೆ ಅವರಿಗಾಗಿ ದುಡಿಯುವನು. ದ್ರೌಪದಿ, ವಿದುರ, ಅರ್ಜುನ—ಇವರೇ ಸಾಕ್ಷಿ; ಪಾಂಡವರ ಬಂಡಿಯ ಬೋವನಾದುದೇ ಪ್ರಮಾಣ. ಆತನ ಮಹಿಮೆಯನ್ನು ಕೊಂಡಾಡಿ, ಪೂರ್ವ ಚರಿತ್ರೆಯನ್ನೆಲ್ಲಾ ರಾಜಸೂಯಕಾಲದಲ್ಲಿ ಎಲ್ಲರಿಗೂ ಬಿತ್ತರಿಸಿದ ಸತ್ಯದರ್ಶಿ ಭೀಷ್ಮನು, ಯುದ್ಧಕಾಲದಲ್ಲಿ ಆತನು ಚಕ್ರ ಹಿಡಿದು ತನ್ನ ಮೇಲೆ ಬರಲು, ಪರಮಭಕ್ತನಾಗಿ, ಆತನಿಗೆ ಶರಣಾಗಿ, ದೇವರಿಗಿಂತಲೂ ಭಕ್ತನೇ ಮಿಗಿಲೆಂದು ಹೇಳಿ, ಕೃಷ್ಣನಿಗೆ ಕವಿದಿದ್ದ ತಾಮಸವನ್ನೇ ಹರಿಸಿ ಆತನೇ ನಾಚಿ ಹಿಂದಿರುಗುವಂತೆ ಮಾಡುವನು. ದ್ರುಪದ, ವಿರಾಟ, ಧೃತರಾಷ್ಟ್ರ, ವಿದುರ, ಭೀಷ್ಮ, ಯುಧಿಷ್ಠಿರ ಇವರ ಭಕ್ತಿಯೇ ಭಕ್ತಿ! ನಿನ್ನ ಕೈಯೇನೂ ನಮ್ಮ ಮೇಲೆ ನಡೆಯದು ಎಂದು ಆತನೆದುರಿಗೇ ಅನಂತ ವಿಶ್ವಾಸದಿಂದ ನುಡಿಯುತ್ತಿರುವಂತಹ ವೀರ ಭಕ್ತರಿಗೆ ಅಧೀನನು ಆತನು. ಯುಧಿಷ್ಠಿರ ಭೀಷ್ಮಾದಿಗಳು ಅವನ ಕಾಲುಮುಟ್ಟಿ ನಮಸ್ಕಾರ ಮಾಡುವರು.* ದ್ರುಪದ ವಿರಾಟರು 'ನಿನ್ನ ಪಾದಗಳನ್ನು ತಲೆಯಲ್ಲಿ ಹೊತ್ತು ನೀ ನುಡಿದುದನ್ನು ನಡೆಯಿಸುವ ಭಟರು ನಾವು' ಎನ್ನುವರು.

ತನ್ನ ಕಾರ್ಯಸಾಧನೆಗಾಗಿ ಆತನು ಇದು ಮೇಲು ದಾರಿ ಇದು ಕೀಳು ದಾರಿ ಎಂದು ಯೋಚಿಸುತ್ತಿರಲಿಲ್ಲ; ಅನುಕೂಲ ಸಮಯಕ್ಕಾಗಿ ಕಾಯುತ್ತಿರಲಿಲ್ಲ. ಸಮಯವೂ ಕಾರ್ಯವೂ ಆತನನ್ನು ಹಿಂಬಾಲಿಸಬೇಕೇ ಹೊರತು ಆತನು ಅವನ್ನು ಅನುಸರಿಸುವವನಲ್ಲ. ದುಷ್ಟ ಶಿಕ್ಷಣಕ್ಕೂ ಭಕ್ತೋದ್ಧರ

* ಮಹಾಭಾರತದಲ್ಲಿ ಎಲ್ಲೆಡೆಗಳಲ್ಲಿಯೂ ವಯಸ್ಸಿನಲ್ಲಿ ಹಿರಿಯರಾದ ಭೀಷ್ಮ ಯುಧಿಷ್ಠಿರರಿಗೆ ಕೃಷ್ಣನೇ ಮೊದಲು ನಮಸ್ಕಾರ ಮಾಡುವ ವರ್ಣನೆ ಇದೆ.

ಣಕ್ಕೂ ಎಲ್ಲ ಮಾರ್ಗಗಳೂ ಸರಿಯೆ ಎಂದು ಆತನು ಸಮಯವನ್ನು ಸಾಧಿಸು ವನು. ನಮ್ಮ ಕಾಲದವರು ಯಾವುದನ್ನು ಅನ್ಯಾಯ, ಕೃಷ್ಣನಂತಹವನು ಹೀಗೆ ಮಾಡಬಾರದಾಗಿತ್ತು ( ಉದಾ—ಕರ್ಣಭೇದ ) ಎನ್ನುವರೊ ಅದನ್ನೂ ಮಾಡಿದನು. ಅವನ ಉದ್ದೇಶವನ್ನು ಅಳೆಯುವುದಾಗಲಿ ತೂಗುವುದಾಗಲಿ ನಮಗೆ ಹೇಗೆ ಸಂದೀತು! ಕೃಷ್ಣನ ಎದುರಿಗೆ ನಾವು ಯಾವ ಊರ ದಾಸರಿ ಗಳು! ಮಾಯೆಗಳನ್ನು ಕವಿಸಿದನು; ತಂತ್ರಗಳನ್ನು ಹೂಡಿದನು; ನಿರಪ ರಾಧಿಗಳನ್ನು ತೀರಿಸಿದನು; ಶೂರರನ್ನು ಲಕ್ಷ್ಯವಿಲ್ಲದೆ ಕೊಲ್ಲಿಸಿದನು. ಆದರೆ ಆತನು ದೇವರು — ಧರ್ಮಾಧರ್ಮ ಪುಣ್ಯಪಾಪಗಳ ಎಲ್ಲೆಗೆ ಎಟುಕದವನು. ಕೊಲ್ಲುವವರು ಯಾರು ಕೊಲ್ಲಿಸಿಕೊಳ್ಳುವವರು ಯಾರು? ವಿಶ್ವನಿಯಾಮ ಕನ ಇಚ್ಛೆ ಉದ್ದೇಶಗಳ ನೆಲೆಯನ್ನು ಯಾರು ಅರಿಯಬಲ್ಲರು? ಕೃಷ್ಣನ ಕಾರ್ಯದ ಎದುರು ಯಾವ ಅಡ್ಡಿಯೂ ನಿಲ್ಲದು. ಆತನು ನಿಂತು ಎಲ್ಲವನ್ನೂ ಮಾಡಿಸುವಾಗ್ಗೆ ಆ ಕಾರ್ಯಗಳ ಧರ್ಮಾಧರ್ಮ ಚರ್ಚೆ ಮನುಷ್ಯರಿಗೇಕೆ?* ಎಂಬಂತೆ ಒಂದೊಂದು ರೀತಿ ಒಬ್ಬೊಬ್ಬರನ್ನೆತ್ತಿಕಟ್ಟಿ—ಕೆಲವು ವೇಳೆ ಸತ್ಯ ದಿಂದ, ಕೆಲವು ವೇಳೆ ಧರ್ಮದಿಂದ, ಕೆಲವು ವೇಳೆ ಕೇವಲ ತನ್ನ ದಿವ್ಯಬಲ ದಿಂದ—ಮಾರ್ಗ ಉಪಾಯಗಳು ಯಾವುವಾದರೂ ಸರಿಯೆ— ಎಂದು ತನ್ನ ಕೆಲಸವನ್ನು ಸಾಧಿಸಿದನು. ನಾರಣಪ್ಪನು ಹಳ್ಳಿಯ ಶ್ರೀಮಂತ. ತನ್ನೂರು ತನ್ನ 'ಗಡ್ಡೆ'ಯಲ್ಲಿ ಬಳಕೆಯಾಗಿದ್ದ, ಅಷ್ಟೇನೂ ಗಂಭೀರವಲ್ಲದ, ಕೆಲವು ಮಾತುಗಳನ್ನೂ ಆತನ ಬಾಯಿಂದ ಆಡಿಸಿದ್ದರೂ ಸತ್ವತಃ ಆತನ ಮಾತು ಗಳೆಲ್ಲ, ನಡತೆಯೆಲ್ಲ ಕವಿಯ **ಈ** ದೃಷ್ಟಿರೀತಿಯಿಂದಲೇ ಶಾಸಿತವಾಗಿವೆ. ಕೃಷ್ಣನು ಎಲ್ಲಿ ಬಂದರೆ ಅಲ್ಲಿ ನಾರಣಪ್ಪನಿಗೆ ಮೈಮೇಲೆ ಎಚ್ಚರ ತಪ್ಪುವುದು. ಉತ್ಸಾಹದ ನೆರೆಯಲ್ಲಿ ಆತನು ಮೇರೆ ಮೀರುವನು. ಆತನು ಮಾಡಿದುದೆಲ್ಲ ಸರಿಯೆ. ಆತನಿಗೆ ಪ್ರತಿಯಾಗಿ ಯಾರಾದರೂ ನಿಲ್ಲಲಾಗಲಿ ವಾದಿಸಲಾಗಲಿ ಯತ್ನಿಸಿದರೆ, ಅವರಿಗೆ ಎಷ್ಟು ಎದೆ? ನಾರಣಪ್ಪನಿಗೆ ಹಿಡಿಸಲಾರದಷ್ಟು ಆಗ್ರಹ! ಅತಿ ಕಡಮೆಯೆಂದರೆ ಅಖಂಡಷಟ್ಪದಿಯನ್ನೆಳೆದು ಪ್ರಚಂಡವಾದ ಯಾವುದೋ ಒಂದು ಉಪಮಾನವನ್ನು ಹೂಡಿ ಅವರನ್ನು ಕೆಡವಿ ಒರಸಿ ಬಿಡುತ್ತಾನೆ.

* ಗೀತೆಯಲ್ಲಿ ಕೂಡ 'ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು' ಎಂಬ ಸ್ವಾತಂತ್ರ್ಯದಾನವಿದೆ ಅರ್ಜುನನಿಗೆ.

ಸರ್ವಶಕ್ತನಾದರೂ ಆತನ ಕೃಷ್ಣನು ದುರ್ಮದನಲ್ಲ, ನಿಷ್ಕರುಣಿಯಲ್ಲ, ಕಠಿಣನಲ್ಲ — ನವರಸಭರಿತನು, ತೇಜಸ್ವಿ. ಎಲ್ಲರ ಕಷ್ಟಗಳಿಗೂ ಮರುಗುವವನು. ಬಾಂಧವ್ಯಗಳ ಮೋಹದಲ್ಲಿ ಸಿಕ್ಕಿಕೊಂಡು ಒದ್ದಾಡುವ, ಒಳತೋಂಟಿಗಳಲ್ಲಿ ನರಳುವ ಪಾಂಡವ ಕರ್ಣಾದಿಗಳನ್ನು ನೋಡಿ ಮನಗರಗುವನು. ಮನಸ್ಸಿನಲ್ಲಿಯೇ ಅವರ ಗುಣಗಳಿಗೆ ಉತ್ಸಾಹಿಸುವನು. ಶತ್ರುಗಳಾದರೂ ತನಗೆ ಒಪ್ಪಿಗೆಯಾದವರ ಬಳಿಗೆ ಯಾರಿಗೂ ತಿಳಿಯದಂತೆ ಯುದ್ಧರಂಗದಲ್ಲಿ ಹೋಗಿ ನಿಜರೂಪದಿಂದ ಕಾಣಿಸಿಕೊಂಡು, ಕಣ್ಣೀರೊರಸಿ, ಅವರಿಗೆ ಅಭಯವಿತ್ತು ಬರುವನು; ತನ್ನ 'ಪಾದಾರವಿಂದ'ದಲ್ಲಿ ಸ್ಥಾನ ಕೊಡುವನು. ಆದರೆ ಅವಶ್ಯ ಕಾರ್ಯವಿರುವಾಗ ಈ ಮಾಯೆ, ಈ ಪ್ರೀತಿ ಬಾಂಧವ್ಯಗಳನ್ನು ತುಳಿದ ಹೊರತು ಕೆಲಸವು ನಡೆಯದಾದ ಕಾರಣ ಅವುಗಳನ್ನು ಅಡಗಿಸಿ ವ್ಯಾಪಕನಾಗಿ ಸಮಯಕ್ಕೆ ಬೇಕಾದಂತೆ ತನ್ನ ಬೊಂಬೆಗಳನ್ನು ಆಡಿಸುವನು ; ಕೆರಳಿಸುವನು, ಕೊಲ್ಲಿಸುವನು, ಗೆಲ್ಲಿಸುವನು.

ಇನ್ನೊಂದು ವಿಶೇಷ : ಕೃಷ್ಣನ ಪ್ರತಾಪಕ್ಕೆ ಎಲ್ಲರೂ ತಗ್ಗಲೇಬೇಕಾದರೂ ಆತನ ಬುದ್ಧಿಮಂತ್ರಗಳ ಮುಂದೆ ಯಾರ ಪೌರುಷವೂ ನಡೆಯದಾದರೂ ಎದುರಾಳಿಗಳ ಪರಾಕ್ರಮವನ್ನು ಕುರಿತು ಆತನಿಗೆ ಮೆಚ್ಚಿಕೆ ಬಹಳ. ಅವರ ಮಹಿಮೆಯನ್ನು ಎಂದಿಗೂ ತಗ್ಗಿಸುವುದಿಲ್ಲ. ಶತ್ರುಗಳ ಸಾಹಸವನ್ನು ಹೆಚ್ಚಿಸಿದಷ್ಟೂ ಕೃಷ್ಣನ ಸಾಧನೆಯನ್ನು (Achievement) ಹೆಚ್ಚು ಮಾಡುವ ಉದ್ದೇಶದಿಂದಲೇ ಅಲ್ಲ ನಾರಣಪ್ಪನು ಹೀಗೆ ವರ್ಣಿಸಿರುವುದು,— ಕೃಷ್ಣನು ಗುಣಗ್ರಾಹಿಯಾದುದರಿಂದ. ವೀರರ ಗುಣವನ್ನು ಅರಿತು ಪ್ರಶಂಸೆ ಮಾಡುವುದು ವೀರನಿಗೆ ಮಾತ್ರ ಸಾಧ್ಯ. ವೃಥಾ ಬಾಯಿಬಡಕನೇ ಶಿಶುಪಾಲ ! ಕರ್ಣನು ಯುದ್ಧದಲ್ಲಿ ಸಾಮಾನ್ಯನೆ ! ಅವರವರ ಗುಣಕಥನ ಕಾಲದಲ್ಲಿ ತುಂಬುಬಾಯಿಂದ ಅವರನ್ನು ಪ್ರಶಂಸೆ ಮಾಡುವ ಉದಾರಿ ಶ್ರೀಕೃಷ್ಣನು.

ಎಂತಹ ಸಮಯದಲ್ಲಿಯೇ ಆಗಲಿ ಆತನ ಆತ್ಮವಿಶ್ವಾಸಕ್ಕೆ ಚ್ಯುತಿಯಿಲ್ಲ. ಎಲ್ಲಿಯೂ ಸರಸವೇ, ಹಾಸ್ಯವೇ, ಸ್ವಾಸ್ಥ್ಯವೇ, ಬೇಕುಬೇಕಾದಂತೆ ಜನರನ್ನು ಪರಿಹಾಸ್ಯ ಮಾಡುತ್ತ ಯಾವ ಸೂತ್ರವನ್ನು ಹೇಗೆ ಎಳೆಯಬೇಕೊ ಹಾಗೆ ಎಳೆದುಕೊಳ್ಳುತ್ತ, ಎಲ್ಲವನ್ನೂ ದಕ್ಷತೆಯಿಂದ ನಿರ್ವಹಿಸಿದವನು ಅವನು. ಕೃಷ್ಣನಿಲ್ಲದೆ ಭಾರತವೇನು ? ಯಾರ ಪೌರುಷವೇನು ? ಏತಕ್ಕೆ ಬೆಲೆ ?

ಇದು ಎಲ್ಲಿಯ ವರೆಗೆ ಹೋಗುವುದೆಂದರೆ, 'ಕೃಷ್ಣಮೂಲಮನರ್ಥಾಯು' ಎಂಬ ಉಕ್ತಿಗೆ ಪೂರ್ತಿ ಸತ್ಯ ಬರುವಷ್ಟು ದೂರ; ಮುಂದೆ ಗಾಂಧಾರಿಯ ಶಾಪಕ್ಕೆ ಕೃಷ್ಣನು ಸತ್ಯತಃ ಒಳಪಡುವಷ್ಟು ದೂರ. ಈ ವಿಷಯವನ್ನು ನಾರಣಪ್ಪನು ಸೂಚಿಸಿ ಬಿಟ್ಟುಬಿಡುವುದಿಲ್ಲ. ಎಲ್ಲಿಯೂ ಸಂದಿಗ್ಧವೇ ಇಲ್ಲ. ಮಹಾರಾಜ, ಈಗ ಹೇಳು, ನಿಮ್ಮ ವಂಶದ ನಾಶ ಅಪಜಯಗಳಿಗೆ ಯಾರು ಕಾರಣ? ಅರ್ಜುನನೊ ಕೃಷ್ಣನೊ? ಎಂದು ತಾನೇ ಕೇಳಿ, ಒಂದು ಬಗೆಯಲ್ಲಲ್ಲದಿದ್ದರೆ ಇನ್ನೊಂದರಲ್ಲಿ ಎಲ್ಲ ಕರ್ತೃತ್ವವನ್ನೂ ಕೃಷ್ಣನಿಗೇ ಆರೋಪಿಸುವನು. ಅವನೊಬ್ಬನೇ ಕರ್ತೃ. ಸ್ಥೂಲವಾಗಿ ಕನ್ನಡ ಭಾರತದಲ್ಲಿ ಕೃಷ್ಣ ಚಾರಿತ್ರ್ಯದ ವರ್ಣನೆ ಹೀಗೆ.

ಮೂವರು ಭಾರತಕಾರರೂ ಕೃಷ್ಣನ ಕಾರ್ಯವನ್ನು ಸಾಮಾನ್ಯವಾಗಿ ಹೀಗೆ ವರ್ಣಿಸಿದ್ದಾರೆಂದು ಉದ್ಯೋಗಪರ್ವದ ಒಂದು ಪ್ರಸಂಗದಿಂದ ವಿವರಿಸಿದರೆ ಅವರ ದೃಷ್ಟಿಯಲ್ಲಿ ಆತನ ವ್ಯಕ್ತಿತ್ವವು ಎಂತಹುದೆಂಬುದು ವಿಶೇಷವಾಗಿ ನಟ್ಟು ನಿಂತೀತು.

ಮಹಾಭಾರತದ ಪ್ರಕಾರ, ಒಂದು ಕಡೆ ದ್ರುಪದಾದಿಗಳು ಕೃಷ್ಣನ ಸಲಹೆಯಂತೆ ಪಾಂಡವರ ಪರವಾಗಿ ಹಿರಿಯನಾದ ನಯಜ್ಞನಾದ ಪುರೋಹಿತನನ್ನು ಶಾಂತಿಸಂಧಾನಕ್ಕೆ ಕಳುಹಿರುವಾಗ ಇನ್ನೊಂದು ಕಡೆ ದುರ್ಯೋಧನನು ತನ್ನ ಸ್ವಭಾವಕ್ಕೂ ದುರಾಶಯಕ್ಕೂ ತಕ್ಕಂತೆ ಭೇದವನ್ನು ಹೊಡಲೆಳಸಿ, ತಾನು ಮೊದಲು ಕೃಷ್ಣನನ್ನು ಒಳಗುಮಾಡಿಕೊಂಡು ಪಾಂಡವರ ಬೆನ್ನುಮೂಳೆಯನ್ನು ಮುರಿಯಬೇಕೆಂದು ದ್ವಾರಾವತಿಗೆ ತೆರಳುವನು. ಇದನ್ನು ಬೇಹಿನವರಿಂದ ತಿಳಿದ ಯುಧಿಷ್ಠಿರನು ಇನ್ನು ಪ್ರಮಾದವಾದೀತೆಂದು ಅರ್ಜುನನನ್ನು ಅಲ್ಲಿಗೆ ಕಳುಹುವನು.

ಭೇದವನ್ನು ಬಗೆದ ದುರ್ಯೋಧನನು ಮೊದಲು ಹೋಗಿ ಕೃಷ್ಣನ ತಲೆದೆಸೆಯ ಪೀಠದಲ್ಲಿ ಕೂಡುವನು. ಉತ್ತರ ಕ್ಷಣದಲ್ಲಿ ಹೋದ ಅರ್ಜುನನು ಆತನ ಕಾಲ್ದೆಸೆಯಲ್ಲಿ ಕುಳಿತುಕೊಳ್ಳುವನು. ಕೃಷ್ಣನು ಎಚ್ಚರಗೊಂಡಾಗ ಅರ್ಜುನನೇ ಮೊದಲು ಕಾಣಿಸುವನು. ಆಮೇಲೆ ದುರ್ಯೋಧನನು ಕಂಡದ್ದು. ಹೀಗಿದ್ದರೂ ಮೊದಲು ಬಂದ ತನ್ನ ಕಾರ್ಯವನ್ನು ಮೊದಲು ಮಾಡಿಕೊಡಬೇಕೆಂದು ದುರ್ಯೋಧನನು ಅವಕಾಶಮಾಡಿಕೊಳ್ಳುವನು. ಕೃಷ್ಣನ ಬುದ್ಧಿಸೂಕ್ಷ್ಮ, ನಯಜ್ಞತೆ, ಚಾತುರ್ಯಗಳ ಪ್ರಕಾಶವು ಈಗ

ಹೇಗಾಗುವುದು ನೋಡಿ : ನೀನು ಮೊದಲೇ ಬಂದವನೆಂಬುದು ನಿಜವಾದರೂ ನಾನು ಮೊದಲು ಅರ್ಜುನನನ್ನು ನೋಡಿದೆ; ಅಲ್ಲದೆ ನಿಮ್ಮಿಬ್ಬರಲ್ಲಿ ಅರ್ಜುನನು ಕಿರಿಯನು ; ಕಿರಿಯರ ಕೆಲಸವನ್ನು ಮೊದಲು ಮಾಡಿಕೊಡಬೇಕಾದುದು ಶಿಷ್ಟಾಚಾರ. ಆದುದರಿಂದ ಅವನ ಕೆಲಸವನ್ನು ಮೊದಲು ಮಾಡಿಕೊಡಬೇಕು ಎಂದು ಆತನು ಹೇಳುವನು. ದುರ್ಯೋಧನನ ಮಾತುಗಳೂ ಈ ಸಮಯದಲ್ಲಿ ಅರ್ಥವತ್ತಾಗಿವೆ ; ಅವು ಕೃಷ್ಣನ ವಿಷಯದಲ್ಲಿ ಆತನಿಗಿದ್ದ ಪೂಜ್ಯಭಾವವನ್ನು ತೋರುವಂಥವೂ ಆಹುದು. ಎಲ್ಲಿ ಆತನು ಮೊದಲು ಅರ್ಜುನನಿಗೆ ಹೆಚ್ಚು ಸಹಾಯ ಮಾಡಿಬಿಡುವನೊ ಎಂದು ಹೆದರಿ ಉಪಾಯದಿಂದಲೂ ನಯದಿಂದಲೂ ತನ್ನ ಕೆಲಸವನ್ನು ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ : ಇಬ್ಬರಿಗೂ ನಿನ್ನ ಸಖ್ಯ ಒಂದೇ, ಬಾಂಧವ್ಯ ಒಂದೇ ; ನಾನು ಮೊದಲು ಬಂದಿರುವವನು ; ಮೊದಲು ಬಂದವರ ಕೆಲಸವನ್ನು ಸಂತರು ಮೊದಲು ಮಾಡಿಕೊಡುವರು.

> ತ್ವಂ ಚ ಶ್ರೇಷ್ಠತಮೋ ಲೋಕೇ ಸತಾಮದ್ಯ ಜನಾರ್ದನ
> ಸತತಂ ಸಂಮತಶ್ಚೈವ ಸದ್ವೃತ್ತಮನುಪಾಲಯ—

"ಸದ್ವೃತ್ತಮನುಪಾಲಯ" ಎಂದು ಹೇಳಿ ಭದ್ರಮಾಡಿಕೊಳ್ಳಲೆಳಸುತ್ತಾನೆ. ಕೃಷ್ಣನಿಗೆ ಈ ನಯದ ಒಳಗುಟ್ಟು ಅರ್ಥವಾಗದೆ ಇಲ್ಲ. ಆದುದರಿಂದ ಆತನು ನಿಷ್ಪಕ್ಷಪಾತದಿಂದ, ತನ್ನ ಸಹಾಯವನ್ನು ಎರಡು ಸಮಭಾಗ ಮಾಡಿ ಹಂಚುತ್ತೇನೆ ಎನ್ನುವನು. ತನ್ನ ನಾರಾಯಣೀ ಸೈನ್ಯದ ಶಕ್ತಿಯನ್ನು ವರ್ಣಿಸಿ—

> ತೇ ವಾ ಯುಧಿ ದುರಾಧರ್ಷಾ ಭವನ್ತ್ವೇಕಸ್ಯ ಸೈನಿಕಾಃ
> ಅಯುಧ್ಯಮಾನಃ ಸಂಗ್ರಾಮೇ ನ್ಯಸ್ತಶಸ್ತ್ರೋಽಹಮೇಕತಃ

ಎಂದು ತಿಳಿಸಿ,

> ಆಭ್ಯಾಮನ್ಯತರಂ ಪಾರ್ಥ ಯತ್ತೇ ಹೃದ್ಯತರಂ ಮತಂ
> ತದ್ವೃಣೀತಾಂ ಭವಾನಗ್ರೇ ಪ್ರವಾರ್ಯಸ್ತ್ವಂ ಹಿ ಧರ್ಮತಃ
> [ ಏತದ್ವಿದಿತ್ವಾ ಕೌನ್ತೇಯ ವಿಚಾರ್ಯ ಚ ಪುನಃ ಪುನಃ
> ತಾನ್ವಾ ವರಯ ಸಾಹಾಯ್ಯೇ ಮಾಂ ಸಾಚಿವ್ಯೇಽಥವಾ ಪುನಃ ]

ಎಂದು ಅರ್ಜುನನಿಗೆ ವರಣದ ಸ್ವಾತಂತ್ರ್ಯವನ್ನು ಕೊಟ್ಟು ಅವನ ದೃಢವನ್ನೂ ನಿಜವಾದ ಇಷ್ಟವನ್ನೂ—ನೂರ ಒಂದನೆಯ ಸಾರಿ—ಪರೀಕ್ಷೆ ಮಾಡಿಕೊಳ್ಳುವನು * ಪಾರ್ಥನಿಗೆ ಈ ಮೊದಲವಕಾಶವನ್ನು ಕಲ್ಪಿಸಿಕೊಟ್ಟುದರಿಂದ

* ಅಲ್ಲದೆ ನಯದಲ್ಲಿ ತನ್ನ ಮನೆಗೆ ಬಂದಿರುವ ದುರ್ಯೋಧನನ ಪರವಾಗಿಯೂ ಆತನು ನ್ಯಾಯದಿಂದ ವರ್ತಿಸಬೇಕಾಗಿದೆ.

ಸೂಕ್ಷ್ಮಬುದ್ಧಿಯುಳ್ಳ ಅವನಿಗೆ ಯಾವ ಕಡೆ ತೂಕವು ಹೆಚ್ಚೆಂಬುದು ತಿಳಿಯದೇ ಹೋಗುವುದಿಲ್ಲ. ತನಗೆ ಬೇಕಾದುದೇನೆಂಬುದನ್ನು ಆತನು ನಿಶ್ಚಯ ಮಾಡಿಕೊಂಡೇ ಬಂದಿದ್ದಾನಾದ್ದರಿಂದ ಪರೀಕ್ಷೆಯಲ್ಲಿ ಅರ್ಜುನನು ಉತ್ತೀರ್ಣನಾಗುವನು. ನಿಶ್ಶಸ್ತ್ರನಾದ ಕೃಷ್ಣನನ್ನೇ ಅರ್ಜುನನು ವರಿಸಲು (ಅಯುಧ್ಯಮಾನಃ ಸಂಗ್ರಾಮೇ ವರಯಾಮಾಸ ಕೇಶವಂ) ಆತನ ಆಸೆಯು ನೆಲೆಯು ಕೃಷ್ಣನಿಗೆ ಅರ್ಥವಾಗಿ ಸಂತೋಷವಾಗುತ್ತದೆ. ಇತ್ತ ಸೈನ್ಯವೆಲ್ಲಾ ತನಗೇ ಬಂದುದನ್ನು ನೋಡಿ ದುರ್ಯೋಧನನಿಗೆ ಹರ್ಷವಾಗುತ್ತದೆ. ತನಗೇ ತಿಳಿಯದಂತೆ ಕೃಷ್ಣನು ಕೌರವರಿಗೆ ಹೆಚ್ಚು ಸಹಾಯ ಮಾಡಿದನೆಂದು*— (ಕೃಷ್ಣಂ ಚಾಪಹೃತಂ ಜ್ಞಾತ್ವಾ ಸಂಪ್ರಾಪ ಪರಮಾಂ ಮುದಂ)—ವರ್ಣನೆ ಇದೆ. ತೃಪ್ತನಾಗಿ ಅವನು ಹೊರಟುಹೋದ ಮೇಲೆ ಇತ್ತ ಕೃಷ್ಣನು ಅರ್ಜುನನನ್ನು ಕೆದಕಿ ನಾರಾಯಣೀ ಸೈನ್ಯದಂತಹ ಮಹಾ ಸೈನ್ಯವನ್ನು ಬಿಟ್ಟು ನಿಶ್ಶಸ್ತ್ರನಾದ ನನ್ನನ್ನೇಕೆ ವರಿಸಿದೆಯೆಂದು ಕೇಳುವನು. ಈ ಪ್ರಸಂಗದಲ್ಲಿ ಕೃಷ್ಣಾರ್ಜುನರಿಬ್ಬರ ಯೋಗ್ಯತೆಯೂ ಉದಾತ್ತತೆಯೂ ಬೆಳಗುವುವು. ಆ ಸೈನ್ಯವನ್ನೆಲ್ಲಾ ನೀನು ನಾಶಮಾಡಬಲ್ಲೆ; ನಾನೂ ನಾಶಮಾಡಲು ಸಮರ್ಥನಾಗಿದ್ದೇನೆ. ಲೋಕದಲ್ಲಿ ನೀನು ಕೀರ್ತಿವಂತ; ನಾನೂ ಕೀರ್ತಿಕಾಮಿ. ಆದುದರಿಂದ ನಿನ್ನನ್ನು ವರಿಸಿದೆನು.

ಭವಾನ್ ಸಮರ್ಥಸ್ತಾನ್ ಸರ್ವಾನ್ನಿಹನ್ತುಂ ನಾತ್ರ ಸಂಶಯಃ
ನಿಹನ್ತುಮಹಮಪ್ಯೇಕಃ ಸಮರ್ಥಃ ಪುರುಷರ್ಷಭ
ಭವಾಂಸ್ತು ಕೀರ್ತಿಮಾಂಲ್ಲೋಕೇ ತದ್ಯಶಸ್ತ್ವಾಂ ಗಮಿಷ್ಯತಿ
ಯಶಸಾ ಚಾಹಮಪ್ಯರ್ಥೀ ತಸ್ಮಾದಸಿ ಮಯಾ ವೃತಃ
ಸಾರಥ್ಯಂ ತು ತ್ವಯಾ ಕಾರ್ಯಮಿತಿ ಮೇ ಮಾನಸಂ ಸದಾ
ಚಿರರಾತ್ರೇಪ್ಸಿತಂ ಕಾಮಂ ತದ್ಭವಾನ್ಕರ್ತುಮರ್ಹತಿ

'ನಿನ್ನಿಂದ ಸಾರಥ್ಯವನ್ನು ಮಾಡಿಸಿಕೊಳ್ಳಬೇಕೆಂದು ನನ್ನ ಇಷ್ಟದಲ್ಲಿ ಸರ್ವದಾ ಇದೆ. ಅದನ್ನು ನಡೆಯಿಸಿಕೊಡು ಸಾಕು.' ಎನ್ನುವುದರಲ್ಲಿ ಕೀರ್ತಿಕಾಮನಾದ ಅರ್ಜುನನು ಯುದ್ಧದಲ್ಲಿ ಇತರನ ಸಹಾಯವನ್ನು

* ಮಹಾಭಾರತದಲ್ಲಿ ಮೊದಲಿಂದ ಕಡೆಯವರೆಗೂ ದುರ್ಯೋಧನನಿಗೆ ವಸ್ತು ಮತ್ತು ಬಾಹ್ಯಶಕ್ತಿ ಸಂಗ್ರಹದಲ್ಲಿಯೂ ಪೌರುಷದಲ್ಲಿಯೂ ನೆಚ್ಚಿಕೆಯೆಂದು ಗೊತ್ತಾಗುವುದು.

ಕೇಳುವಹಾಗಿಲ್ಲ.* ಕೃಷ್ಣನಿಗಿರುವಂತಹ ಕೀರ್ತಿಯನ್ನು ತಾನು ಸಂಪಾದಿಸಬೇಕು. ಎಲ್ಲಿ ಆತನಿದ್ದರೆ ಅಲ್ಲಿ ಧರ್ಮ, ಕೀರ್ತಿ. ಕ್ಷತ್ರಿಯನು ಆದನ್ನಾರ್ಜಿಸಲು ಆತುರನಾಗಿರುವಾಗ ಕೃಷ್ಣನು ಆ ಸಾಧನೆಗೆ ಸಹಾಯಕನಾಗಿದ್ದರೆ ಸಾಕು. ಅಶ್ವಹೃದಯವನ್ನರಿತ ಕೃಷ್ಣನಂತಹ ಸಾರಥಿಯು ರಥವನ್ನು ನಡೆಯಿಸಿದರೆ ಶತ್ರುವನ್ನು ನಿಗ್ರಹಿಸಿ ತಾನು ಮಹತ್ಕೀರ್ತಿಯನ್ನು ಸಂಪಾದಿಸಬಲ್ಲೆನೆಂಬ ಅರ್ಜುನನ ಮಾತು ವೀರಯೋಗ್ಯವಾದುದು. ಇದಕ್ಕೆ ಕೃಷ್ಣನ ಉತ್ತರವು ಆತನ ಯೋಗ್ಯತೆಗೆ ತಕ್ಕುದಾಗಿದೆ:—

ಉಪಪನ್ನಮಿದಂ ಪಾರ್ಥ ಯತ್ಸ್ಪರ್ಧೇಥಾ ಮಯಾ ಸಹ
ಸಾರಥ್ಯಂ ತೇ ಕರಿಷ್ಯಾಮಿ ಕಾಮಃ ಸಂಪದ್ಯತಾಂ ತವ

ಎಂದು ಹೇಳಿ ಆಗಲೆನ್ನುವನು. ಅಂತಹ ಕೀರ್ತಿಯ ವಿಷಯದಲ್ಲಿ ಅವನೊಡನೆ ಸ್ಪರ್ಧೆ ಮಾಡುವವರು ತಾನೆ ಯಾರಿದ್ದಾರೆ? ಅರ್ಜುನನು ಸ್ಪರ್ಧಿಸಬೇಕೆಂದಿರುವಾಗ ನೆರವು ಕೊಡಲು ಕೃಷ್ಣನಿಗೆ ಸಂತೋಷವೇ ಅಲ್ಲವೆ? ಮಹಾಭಾರತ ಪ್ರಪಂಚಕ್ಕೆ ಒಪ್ಪುವ ಮಾತುಗಳು! ಶ್ಲಾಘ್ಯವಾದ ಕೀರ್ತಿ ಸ್ಪರ್ಧೆ!

ಪಂಪನು ಈ ಸನ್ನಿವೇಶವನ್ನು ಹೇಗೆ ಚಿತ್ರಿಸಿದ್ದಾನೆ ನೋಡೋಣ. 'ನಮಗೆ ಕೆಮ್ಮಗಿರಲಾರದು. ದುರ್ಯೋಧನನಪ್ಪೊಡೆ ಶ್ವೇತಕೃಷ್ಣಕಾರಕಂ. ಕೃಷ್ಣನಂ ತನಗೆ ಮಾಡದನ್ನೆಗಂ ಮುನ್ನಮೆ ಪನ್ನಗಶಯನನಂ ನಮಗೆ ಮಾಡುವುದುತ್ತಮಪಕ್ಷಂ' ಎಂದು ಯುಧಿಷ್ಠಿರಾದಿಗಳು ತಮ್ಮಲ್ಲಿ ಆಲೋಚಿಸಿ ಅರ್ಜುನನನ್ನು ದ್ವಾರಕಿಗೆ ಕಳುಹಲು ಅವನು ಅಲ್ಲಿಗೆ ಮೊದಲು ಹೋಗಿ 'ದುಗ್ಧಾಬ್ಧಿ ಧವಳಶಯ್ಯಾತಳದೊಳ್ ಮಱದೊಱಗಿದ ಮಧುಮಥನನನೆತ್ತಲಣ್ಮದೆ . . . ಕಾಲದೆಸೆಯೊಳುಸಿರದೆ ಕುಳ್ಳಿರೆ' ... 'ದುರ್ಯೋಧನನು ಮಾಗಳೆ ಬಂದು. . .ತಲೆದೆಸೆಯೊಳ್ ಕುಳ್ಳಿರೆ'—ಸ್ವಲ್ಪ ಹೊತ್ತಿನಲ್ಲಿಯೇ ಎಚ್ಚರಗೊಂಡ ಕೃಷ್ಣನು ತನ್ನ ಕಾಲುಗಳನ್ನೊತ್ತುತ್ತಿರುವ 'ವಿಜಯನನೆವಲಂಮುಂ ಕಂಡು ಬೞಿಕೆ' ನೃಪನನ್ನು ಕಂಡನು. ಇಬ್ಬರನ್ನೂ ಹರಸಿ ನನ್ನಿಂದ ಏನು ಕಾರ್ಯವಾಗಬೇಕೆಂದು ಅವರನ್ನು ಕೇಳಲು 'ಎಮ್ಮೆಮ್ಮಂ . . .

* ಈ ಅಂಶವು ಕೃಷ್ಣನಿಗೂ ತಿಳಿದಿದೆ. ಅರ್ಜುನನ ಪೌರುಷಕ್ಕೆ ಮಹಾಭಾರತದಲ್ಲಿ ಚ್ಯುತಿಯಿಲ್ಲ; ಆತನ ಸತ್ಯ ಧರ್ಮ ಪರಾಕ್ರಮಗಳಿಗೆ ಬಹುತರವಾಗಿ ಯಾವ ದೊಡ್ಡ ನೆಳಲೂ ಕವಿದಿಲ್ಲವೆನ್ನಬಹುದು.

ಕೆಯ್ಕೊಂಡು ಗೆಲಿಸಲ್ವೇಳ್ಕುಮೆಂದು' ಬಂದೆವು ಎನ್ನುವರು. ಇಲ್ಲಿ ಪಂಪನ ರೀತಿಯೇ ರೀತಿ! ನನ್ನ ಮನ್ನಣೆಗೆ ನೀವಿಬ್ಬರೂ ಸಮ. ವಿಜಯನನ್ನು ಮುಂಚೆ ಕಂಡೆನಾದುದರಿಂದ ಅವನಿಗೆ ನಾನು

ಎನ್ನಂ ಕೊಟ್ಟೆಂ, ನಿನಗಂ
ಪನ್ನಗಕೇತನ, ಚತುರ್ಬಲಂಗಳ ನಿತ್ತೆಂ

ಎಂದು ತಾನೇ ತೀರ್ಮಾನ ಮಾಡಿ ಬಿಡುವನು. ಅವರಲ್ಲಿ ಯಾರಿಗೂ ಯಾವ ವರಣ ಸ್ವಾತಂತ್ರ್ಯವೂ ಇಲ್ಲ. ಅರ್ಜುನನಲ್ಲಿ ಆತನಿಗಿದ್ದ ಪಕ್ಷಪಾತವು ಸ್ಪಷ್ಟ ವಾಗುವುದು. ತಾನು ಆಯುಧವನ್ನು ಹಿಡಿಯುವುದಿಲ್ಲ ಮುಂತಾದ ಮಾತೊಂದನ್ನೂ ಪಂಪನು ಕೃಷ್ಣನ ಬಾಯಿಂದ ಹೇಳಿಸುವುದಿಲ್ಲ.† ಆ ಮೇಲೆ ದುರ್ಯೋಧನನನ್ನು ಕಳುಹಿ ಕೊಟ್ಟು ತಾನು ಅರ್ಜುನನೊಡನೆ ವಿರಾಟನ ನಗರಕ್ಕೆ ಬಂದು ಮಂತ್ರಾಲೋಚನೆಗೆ ನೆರೆಯುವನು.

ಉಳಿದಿರುವುದು ನಾರಣಪ್ಪನ ಚಿತ್ರಕಲ್ಪನೆಯ ವಿವರಣೆ. ಸ್ಥೂಲವಾಗಿ ಆತನ ವರ್ಣನೆಯು ವ್ಯಾಸಭಾರತದಲ್ಲಿರುವಂತೆ ಇರುವುದಾದರೂ ಪಂಪನಲ್ಲಿ ರುವಂತೆ* ಅರ್ಜುನನೇ ಮೊದಲು ಹೋಗಿ ಭಕ್ತಿಯಿಂದ ಕೃಷ್ಣನ ಕಾಲ್ದೆಸೆ ಯಲ್ಲಿ ಕುಳಿತಿರುವನು. ದ್ವಾರಕಿಯನ್ನು ಸೇರುವ ಮುಂಚೆಯೇ ಶುಭಶಕುನ ಗಳಾಗಿ ಆತನ ಮನಸ್ಸು ಸಂತೋಷದಲ್ಲಿದ್ದಿತು. ಅವೂರು ಆತನಿಗೆ ಜೀವಾ-ತ್ಮರ ಮುಕ್ತಿಯ ನೆಲೆ. ದುರ್ಯೋಧನನು ಆ ಮೇಲೆ ಬಂದು ತಲೆದೆಸೆ ಯಲ್ಲಿ ಕೂಡುವನು. ಕೃಷ್ಣನು ಎಚ್ಚತ್ತು ಮೈಮುರಿದು ಎದ್ದಾಗ ಮೊದಲು ಅರ್ಜುನನನ್ನೂ ಆ ಮೇಲೆ ದುರ್ಯೋಧನನನ್ನೂ ನೋಡಿ ಇಬ್ಬರಿಗೂ ವೀಳೆಯ ಕೊಟ್ಟು ತಾನೂ ಹಾಕಿಕೊಂಡು ಅವರ ಬರವಿನ ಉದ್ದೇಶವನ್ನು ಕೇಳಲು ದುರ್ಯೋಧನನು ಧರಣಿಗಾಗಿ ದಾಯಾದಿಗಳಾದ ತಾವು ಕಾದಾಡುವರೆಂದೂ ಇಬ್ಬರಿಗೂ ಸಮಬಂಧುವಾದ ಕೃಷ್ಣನು 'ನಮ್ಮಿಬ್ಬರಿಗೆ ಬಲವಾಗಬೇಕೆಂ'ದೂ ಹೇಳುವನು. ಯುದ್ಧವು ಸರ್ವಥಾ ಯೋಗ್ಯವಲ್ಲ, ಅಪಕೀರ್ತಿಕರ, ದುರ್ಜನರ

† ಮುಂದೆ ಭೀಷ್ಮನು 'ಪಿಡಿಯೆಂ ಚಕ್ರಮನೆಂಬ ಚಕ್ರಿಯನ್' ಎಂಬ ಪದ್ಯದಲ್ಲಿ ಇದು ಸೂಚಿತಮಾತ್ರವಾಗುವುದು.

* ಆತನಿಗೆ ಕಥೆಯೇ ಹಾಗೆ ತಿಳಿದಿತ್ತೊ, ಅಥವಾ ಆತನು ಪಂಪನನ್ನು ಅನುಸರಿಸಿ ದನೋ, ಅಥವಾ ಭಕ್ತಿಯನ್ನು ಹೆಚ್ಚು ಸ್ಫುಟಗೊಳಿಸುವುದಕ್ಕೆ ಈ ರೀತಿ ಆತನು ಮಾಡಿವಾನೋ ಎಂಬುದು ಯೋಚಿಸತಕ್ಕದ್ದು.

ಮಂತ್ರವನ್ನು ಕೇಳಿ ಸರ್ವನಾಶ ಮಾಡಬೇಡ, ನೀವು ಅನ್ಯೋನ್ಯವಾಗಿ ಬದುಕುವುದೇ ಚೆಂದ, ತನಗೆ ಪರಮ ಸಂತೋಷ ಎಂದು ಎಷ್ಟು ಬಗೆಯಲ್ಲಿ ಹೇಳಿದರೂ ಕೇಳದೆ, 'ಧರ್ಮಶ್ರವಣಕೋಸುಗ ಬಾರೆವಾವ್ ಪಾರ್ಥಿವರೆ ಪಂಥದ ಕದನ ವಿದ್ಯಾಕಾಮುವೆಮಗಾಯ್ತು,' ಸಹಾಯವಾಗಬೇಕು ಎಂದು ದುರ್ಯೋಧನನು ಉತ್ತರ ಕೊಡುವನು. ಕೃಷ್ಣನು ಅರ್ಜುನನ ಅಭಿಮತವನ್ನು ಕೇಳುವನು. ಆತನು ದುರ್ಯೋಧನನ ಮತವೇ ತನ್ನ ಮತವೆಂದೂ, ಕೃಷ್ಣನ ಅನುನಯವೇ ನಯವೆಂದೂ ಬಹು ಬುದ್ಧಿಯ ವಿನಯದಿಂದ ಹೇಳಿ ತನಗೆ ಯಾವ ಸ್ವಾತಂತ್ರ್ಯವೂ ಇಲ್ಲವೆನ್ನುವನು. ಆಗ ಕೃಷ್ಣನು ತನ್ನನ್ನೊಂದು ಕಡೆಯೂ ಸೈನ್ಯಾದಿಗಳನ್ನು ಇನ್ನೊಂದೆಡೆಯೂ ತೂಕವಿಟ್ಟು, ತಾನು ಆಯುಧ ಹಿಡಿಯುವುದಿಲ್ಲವೆಂದು ಹೇಳಿ, ಯಾವುದು ಇಷ್ಟೆಯಿದ್ದರೆ ಅದನ್ನು ಸ್ವೀಕರಿಸಬಹುದೆಂದು ಅರ್ಜುನನಿಗೆ ಹೇಳುವನು. ಅರ್ಜುನನು ಸಾರಾಸಾರವನ್ನು ತಿಳಿದವನು; ಮುಖ್ಯವಾಗಿ ಕೃಷ್ಣನ ಗುಟ್ಟನ್ನು ಬಲ್ಲವನು. ಕೇಳಬೇಕೆ? ಕೃಷ್ಣನನ್ನೇ ಕೋರುವನು. ಆದರೆ ಅವನ ವರಣ ಕಾರಣವು ಬಹಳ ಸ್ವಾರಸ್ಯವಾಗಿದೆ! ತಾವು ಬಡವರೆಂದೂ ಅಷ್ಟು ದೊಡ್ಡ ಸೈನ್ಯವನ್ನು ಸಾಕಲಾರೆವೆಂದೂ ಸಿರಿವಂತನಾದ ದುರ್ಯೋಧನನು ಅದನ್ನು ಹೊರೆಯಬಲ್ಲನೆಂದೂ ತನಗೆ ಕೃಷ್ಣನೇ ಸಾಕೆಂದೂ ಹೇಳಿ ಭಕ್ತಿಯಿಂದ ಕೈಮುಗಿಯುವನು! ದುರ್ಯೋಧನನು:— 'ನೀವು ಸುಖದಲಿ ಪಾಂಡವರನುಜ್ಜೀವಿಸುವುದು . . . . .ನಮಗೆ ಉಳಿದ ಯದುಭೂಪಾಳಿಯನು ಕೃಪೆಮಾಡಬೇಕು' ಎಂದು ಕೇಳಿ 'ಕಡೆಯಲಾವೇ ಹೊರಗು' ಎಂದು ಮುರವೈರಿಯ ಪಕ್ಷಪಾತವನ್ನು ಹಂಗಿಸುವನು. ಅಲ್ಲದೆ ಆಗ ಮಾಡಿದ ವಾಗ್ದಾನಕ್ಕೆ ತಕ್ಕಂತೆ 'ಹೊಕ್ಕಿರಿಯಲಾಗದು' ಎಂದು ಕೃಷ್ಣನಿಗೆ ಹೇಳುವನು.

ನಾರಣಪ್ಪನೂ ಆತನ ಕೃಷ್ಣನೂ ಸರಸಿಗಳು ಇಷ್ಟಕ್ಕೇ ಬಿಡುವರೆ? ಹಿಂದೆ ಕೋಟಿ ದಾನವರನ್ನೇನೊ ಕೊಂದೆವು, ನಿಜ. ಆದರೆ ಈಗ ಮಿಸುಕಲಾರೆವು; ಚಕ್ರ ಭಂಡಾರಿಸಿತು; ಮುನ್ನಿನ ಜವ್ವನದ ಬಲ ಮುಸುಳಿತು; ನಾವು ಉಂಡಾಡಭಟ್ಟರು ಎಂದು ನಗುತ್ತ ಕೃಷ್ಣನು ಹೇಳಿದುದನ್ನು ಕೇಳಿ ದುರ್ಯೋಧನನು 'ಖರೆ, ಲೇಸೆ'ಂದು ಹೊರಡುವನು. ಕೋಟಿ ದೈತ್ಯರನ್ನು ಕೊಂದ ಸೂಚನೆಯಂತೂ ಅರ್ಥವತ್ತಾಗಿದೆ. ಮುಂದಿನ ವಿಗ್ರಹಕ್ಕೆ ಅದು ಸಂಚಕಾರ.

ಇದಾದ ಮೇಲೆ ಸಕಲ ಸೈನ್ಯವನ್ನೂ ಬಿಟ್ಟು ತನ್ನನ್ನು ವರಿಸಿದ ಅರ್ಜುನನ ಮಂಕನ್ನು ಕುರಿತು ಆತನು ಪರಿಹಾಸ್ಯಮಾಡುವನು. ಅರ್ಜುನನು ಅದೇ ಗರುಡಿಯಾಳು; ಕೃಷ್ಣನ ವರಸೆಗಳನ್ನೆಲ್ಲಾ ಬಲ್ಲನು. ತನ್ನ ಸಹೋದರರಿಗೂ ಆತನ ಶಕ್ತಿಯು ಎಷ್ಟೆಂದು ಗೊತ್ತಿರುವುದೆಂದು ಉತ್ತರ ಕೊಡಲು ಕೃಷ್ಣನು ಅಲ್ಲಿಗೂ ಒಂದು ಹೆಜ್ಜೆ ಮುಂದೆ ಹೋಗುವನು. 'ನಾವು ಬರಿಗೈಯವರು; ಅಲ್ಲಿ ನಮಗೆ ಕೆಲಸವಿಲ್ಲ; ಸುಮ್ಮನೆ ಉಂಡು ಕುಳ್ಳಿಹರಲ್ಲ; ಕದನದಲ್ಲಿ ಹಂಗಾಗಿರೆವು; ನೀವು ನನ್ನನ್ನು ದೇವನೆಂದು ಬಗೆವಿರಿ, ತಮ್ಮಲ್ಲಿ ದೇವತನ ಲವವಿಲ್ಲ; ನಾವು ಬಾರೆವು; ಬಂದು ಮಾಡುವುದೇನು?' ಎಂದು ಪರೀಕ್ಷೆ ಮಾಡುವುದನ್ನು ಕಂಡು ಅರ್ಜುನನು 'ನೀರಿಗೆ ಪಂಚೀರಾಗಿ' ದೇವರೇ ಏಕೆ! ದೇವರದೇವ ರೊಡೆಯರು; ಆ ಮಾತು ಸಾಕು; ನಾವು ಭಕ್ತರು. . . . . . ಮುಂತಾದ ಮಾತುಗಳಿಂದ ಆತನ ಕಾಲಿಗೆರಗಿ ಸಾರಥಿಯಾಗಿ ತನ್ನನ್ನು ರಕ್ಷಿಸ ಬೇಕೆಂದು ಕೇಳಿಕೊಂಡು ಕೃಷ್ಣನನ್ನು ಒಪ್ಪಿಸುವನು.

ಭಾರತಕಾರರಲ್ಲಿ ಕೃಷ್ಣನ ವ್ಯಕ್ತಿತ್ವವು ಈ ನಿದರ್ಶನದಲ್ಲಿ ಹೇಗೆ ಬೆಳಗುವುದೊ ಅದೇ ಕಳೆಯಲ್ಲಿಯೇ ಅವರು ಬಣ್ಣಿಸಿರುವ ಪ್ರತಿಯೊಂದು ಸನ್ನಿವೇಶದಲ್ಲಿಯೂ ಬೆಳಗುವುದು. ಕನ್ನಡ ಭಾರತಗಳಲ್ಲಿ ಆತನ ಸ್ವರೂಪವು ನಮ್ಮ ಕಣ್ಣೆದುರಿಗೆ ಹಬ್ಬಿ ಬೆಳೆದು ಸಂಪೂರ್ಣವಾಗುವುದಿಲ್ಲ. ಮೊದಲು ಯಾವ ರೀತಿ ರೂಪಗೊಂಡು ಕಾಣುವುದೋ ಕಡೆಯವರೆಗೂ ಹಾಗೆಯೇ ನಿಲ್ಲುವುದು. ಮಹಾಭಾರತದಲ್ಲಿ ಹಾಗಲ್ಲ. ಸ್ವಲ್ಪ ಸ್ವಲ್ಪವಾಗಿ ಆತನ ಪ್ರಭಾವವು ಕಾಣಲು ಆರಂಭವಾಗಿ ಆತನು ಸರ್ವವ್ಯಾಪಕನಾಗುವ ದೃಶ್ಯವು ಕಟ್ಟೆನಿಲ್ಲುವುದು. ದೂರದ ಸಮುದ್ರದ ಅಂಚಿನಲ್ಲಿ ಸಣ್ಣ ಚುಕ್ಕೆಯಾಗಿ ಕಾಣುತ್ತಿದ್ದ ಹಡಗು ರೇವಿನಲ್ಲಿರುವ ನಮ್ಮ ಬಳಿಗೆ ಬರುಬರುತ್ತ ಹೇಗೆ ದೊಡ್ಡದಾಗಿ ಕಡೆಗೆ ಬಂದರಿನಲ್ಲಿ ನಮ್ಮ ಎದುರಿಗೆ ಬಂದು ನಿಂತಾಗ ಅದರ ಹೊರತು — ಅಲ್ಲಿನ ರಚನೆ, ರೀತಿ, ಜೀವಸಂಪತ್ತು, ಕಾರ್ಯಶಕ್ತಿ ಮುಂತಾದುವು ಹೊರತು— ಬೇರೆ ಯಾವುದೂ —ಕಡೆಗೆ ಸುತ್ತಲ ಸಮುದ್ರ ಕೂಡ—ಹೇಗೆ ಕಣ್ಣಿಗೆ ಕಾಣಿಸದೆ ಹೋಗುವುದೋ ಹಾಗೆ ಸಮಗ್ರವಾಗಿ ಬೆಳೆಯುವುದು. ಆತನು ಧರ್ಮಬಂಧು. ವ್ಯಕ್ತಿಗುಣ ಕಾರ್ಯದಕ್ಷತೆ ಶೀಲಚಾರಿತ್ರಗಳಿಂದ ಅಮಾನುಷ ತೇಜಸ್ಸನ್ನು ಬೆಳಗಿ, ಸರ್ವತೋಮುಖವಾದ ವ್ಯಾಪಾರದಿಂದಲೂ ವೀರ್ಯಕೀರ್ತಿಗಳಿಂದಲೂ ವೀರಾಧಿವೀರರನ್ನು ಬೆರಗುಮಾಡಿ, ಜ್ಞಾನಪೌರುಷ ಕ್ರಿಯಾಶಕ್ತಿಗಳಿಂದ ಸರ್ವ

ಶ್ರೇಷ್ಠನೆಂದು ಅಗ್ರಪೂಜೆಮಾಡಿಸಿಕೊಂಡ ಮಹಾನುಭಾವನು. ಪಂಪಭಾರತದಲ್ಲಿ ಶ್ರೀಕೃಷ್ಣನು ಆದಿಪುರುಷನ ಅವತಾರನಾದರೂ ಕೇವಲ ವಿಕ್ರಮಾರ್ಜುನನ ದಿವ್ಯಸಖನು, ಮಂತ್ರಿ. ನಾರಣಪ್ಪನ ಭಾರತದ ಪ್ರಕಾರ ಭೂಭಾರವಿಳಿಸಲು ಜನ್ಮವೆತ್ತಿ ಖಳಮಂಡಲವನ್ನೆಲ್ಲಾ ಒರಸಿ ತನ್ನ ಕಾರ್ಯವನ್ನು ಮಾಡಿಕೊಂಡ ಭಕ್ತಬಂಧು ಮಹಾವಿಷ್ಣು. ಆತನೇ ಮಹಾಭಾರತಕ್ಕೆ ಸೂತ್ರಧಾರ; ಕಥೆಯ ಒಬ್ಬನೇ ನಾಯಕ; ಎಲ್ಲ ಚೈತನ್ಯಕ್ಕೂ ಮೂಲ; ಎಲ್ಲರ ಪ್ರವೃತ್ತಿಗಳಿಗೂ ಕಾರಣ; ಎಲ್ಲ ಪ್ರಯತ್ನಗಳ ಗುರಿ; ಎಲ್ಲ ಆಸೆಗಳ ನೆಲೆ. ಅವನಿಲ್ಲದೆ ಭಾರತವಿಲ್ಲ.

---

# ಅಲ್ಲಮ ಪ್ರಭು

ವೀರಶೈವ ಧರ್ಮ ತಲೆಯೆತ್ತಿ ಜನದ ಮನವನ್ನು ತಿದ್ದಲು ತೊಡಗಿದಾಗ ಈ ದೇಶದ ಬದುಕಿಗೆ ಒಂದು ಹೊಸ ಕಾವೂ, ತಿಳಿವೂ, ಕಾಂತಿಯೂ, ಶ್ರದ್ಧೆ ಸಿದ್ಧಿಗಳೂ ಬಂದವು. ಒಣಗಿ ಬಂಜೆಯಾಗಿದ್ದ ನೆಲ, ಹಸರು ಹೂ ಹಣ್ಣು ಬಿಟ್ಟಿತು. ಸಮಾಜದಲ್ಲಿ ಒಂದು ಬಗೆಯಾದ ಹೊಸಜೀವ ಸಂಚಾರವಾಗಿ ತೋರಿಕೆಯಾವುದು ನಿಜವಾವುದು, ಗುರಿಯಾವುದು ಸಾಧನೆಯಾವುದು, ಅಬ್ಬರವಾವುದು ನಿಷ್ಠೆಯಾವುದು, ಒರಟಾವುದು ನಯವಾವುದು--ಎಂಬ ವಿವೇಕ ಜನಕ್ಕೆ ಬಂದಿತು. ಧಾರ್ಮಿಕ ಜೀವನದಲ್ಲಿಯೂ ಬಿಡುಗಡೆಯ ದಾರಿಯಲ್ಲಿಯೂ ನಡೆಯುವವರು ಯಾವ ಬಗೆಯಲ್ಲಿ ತೊಳಲುತ್ತಾರೆ, ತೊಳಲನ್ನು ದಾಟಿಕೊಳ್ಳುವ ಮಾರ್ಗ ಯಾವುದು–ಎಂಬ ಸಂಗತಿ ಪುನಃ ಸಾಮಾನ್ಯರೆಲ್ಲರಿಗೂ ತಿಳಿಯುವಂತೆ ಹರಡಿ ಬಂತು ನೂರಾರು ಸಾವಿರಾರು ವರ್ಷಗಳಿಂದ ಈ ದೇಶದಲ್ಲಿ ಮುಕ್ತಿ ಸಾಧನೆಗಾಗಿ ಪ್ರಚಾರದಲ್ಲಿದ್ದ ಜ್ಞಾನ, ಭಕ್ತಿ, ಕರ್ಮ, ವೈರಾಗ್ಯಗಳ ನಿಜ ಸ್ವರೂಪ ಮರೆತು ಹೋಗಿ ಜಡತೆ ಒಣಸಂಪ್ರದಾಯಗಳಲ್ಲಿ ಆ ದಾರಿಗಳು ಮರೆಯಾಗಿಹೋಗಿದ್ದುದರಿಂದ ಆಗಿನ ಹೊಸ ಶ್ರದ್ಧೆಯನ್ನೂ ಸ್ವಚ್ಛವಾದ ರೀತಿಯಲ್ಲಿ ಜೀವನಕ್ಕೆ ಬೆರಸಬೇಕೆಂಬ ಪ್ರಯತ್ನ ಹುಟ್ಟಿತು. ಸುಕೃತಶಾಲಿಯಾದ ಕನ್ನಡನಾಡಿನಲ್ಲಿ ವಿಶೇಷವಾಗಿ ಅಲ್ಲಮ, ಬಸವೇಶ್ವರ, ಸಿದ್ಧರಾಮ, ಚೆನ್ನಬಸವ, ಮಹಾದೇವಿಯಕ್ಕ ಮುಂತಾದವರು ಹುಟ್ಟಿ ಬಂದು ತಮ್ಮ ಬದುಕಿನಿಂದಲೂ ಮಾತಿನಿಂದಲೂ ಸಂಗತಿ ಉಪದೇಶಗಳಿಂದಲೂ ಜನದ ಬದುಕನ್ನು ನೇರ್ಪಡಿಸಿದರು. ಅವರ ಪ್ರಯತ್ನದಿಂದ ಹನ್ನೆರಡು-ಹದಿಮೂರನೆಯ ಶತಮಾನಗಳಲ್ಲಿ ಭಾರತದ ಸನಾತನಧರ್ಮ ಪುನಃ ಚೊಕ್ಕವಾಗಿ ಬೆಳಗುವಂತಾಯಿತು.

ಅದೇ ಕಾಲದಲ್ಲಿಯೇ, ಇನ್ನೂ ಸ್ವಲ್ಪ ಮುಂದಕ್ಕೂ, ಭಕ್ತಿ ಪಂಥಗಳು ನಾನಾ ಬಗೆಯಾಗಿ ದೇಶದಲ್ಲಿ ಹರಡಿದವು. ಶೈವ ಪಂಥದ ಜೊತೆಗೆ ವೈಷ್ಣವ, ಶ್ರೀವೈಷ್ಣವ ಪಂಥಗಳೂ ಬೇರೊಂದು ರೀತಿಯಲ್ಲಿ ಸಮಾಜದ ಪರಿಶುದ್ಧಿ ಕಾರ್ಯವನ್ನು ಕೈಕೊಂಡು ದೊಡ್ಡ ಉಪಕಾರ ಮಾಡಿದವು. ಆದರೆ ಮೇಲ್ಮಟ್ಟದ ಜನರೊಬ್ಬರಿಗಲ್ಲದೆ ಸಾಮಾನ್ಯ ವರ್ಗಗಳ ಉದ್ಧಾರಕ್ಕಾಗಿ ಕೇವಲ ಕನ್ನಡ

ದಲ್ಲಿ ಮೊದಲು ಪ್ರಚಾರ ನಡೆದುದು ವೀರಶೈವ ಸಂಬಂಧದಲ್ಲಿ. ಮೇಲೆ ಹೇಳಿದ ಕರ್ಮ, ಭಕ್ತಿ, ಜ್ಞಾನ ಈ ದಾರಿಗಳಲ್ಲಿ ನಡೆದ ವಿರಕ್ತ ಶರಣರ ಕೀರ್ತಿ ಮತ್ತು ಕಾರ್ಯಕ್ಷೇತ್ರ ಕನ್ನಡನಾಡಿನಲ್ಲಿ ನೆಟ್ಟು ಫಲಕಾರಿಯಾಯಿತು. ಅವರಲ್ಲಿ ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ಮಹಾ ವ್ಯಕ್ತಿಗಳು ; ದೊಡ್ಡ ತನದ ಬೇರೊಂದು ಮುಖ ಕಾಣದೆ ಇದ್ದರೆ ಪ್ರಪಂಚದ ದೊಡ್ಡತನವೆಲ್ಲಾ ಅವರಲ್ಲಿಯೇ ಖಂಡಿತವಾಗಿ ಅಡಕವಾಗಿ ಮುಗಿದಿದೆ, ಅವರಿಗೆ ಮೀರಿದ ಭಕ್ತರು, ಮಹಾತ್ಮರು ಇರಲಾರರು ಎಂದು ಹೇಳಬಹುದಾದಷ್ಟು ದೊಡ್ಡ ವ್ಯಕ್ತಿಗಳು ಅವರು. ಅಲ್ಲಮಪ್ರಭುವಿನ ಪರಿಚಯವಿಲ್ಲದವರಿಗೆ ಮೇಲೆ ತಿಳಿಸಿದ ಇತರ ಮಹಾ ಪುರುಷರ ಮೂರ್ತಿತ್ವವೇ ಸರ್ವಶ್ರೇಷ್ಠವಾಗಿ ಕಾಣುವ ಸಂಭವ ವಿತ್ತು. ಅವರಲ್ಲಿ ಕೂಡ ಯಾರೇ ಆಗಲಿ, ಅಲ್ಲಮಪ್ರಭುವಿದ್ದುದರಿಂದ ಎರಡ ನೆಯ ಎಣಿಕೆಗೆ ಸಂದರೇ ಹೊರತು, ಸ್ವಂತವಾಗಿ ಗುಣಕರ್ಮಸಾಧನ ಬಲ ಗಳಿಂದ ಬದುಕಿನ ಮೇಲ್ಮಟ್ಟವನ್ನು ಸೇರಿ ಗುರುಪದವಿಗೆ ಏರಿದ್ದವರು. ಅವರ ಲ್ಲಿದ್ದ ಗುಣಗಳನ್ನೇ ಅರ್ಥಮಾಡಿಕೊಳ್ಳುವುದು ಸಾಮಾನ್ಯರಿಗೆ ಸಾಧ್ಯವಿಲ್ಲದೆ ಇರುವಾಗ, ಅವರಿಗೆ ಬೆಲೆಕಟ್ಟಿ ಅವರಲ್ಲಿರಬಹುದಾದ ಅತಿರೇಕಗಳನ್ನೂ ಕುಂದುಗಳನ್ನೂ ಜೊಳ್ಳು ಅಪೂರ್ಣತೆ ಕಾರ್ಪಣ್ಯಗಳನ್ನೂ ಕಂಡು ತೋರಿಸುವ ಶಕ್ತಿ ಯಾರಿಗೆ ಉಂಟು ? ಸಂಸಾರದ, ಧರ್ಮದ, ಸಾಧನದ, ಸಿದ್ಧಿಯ, ಮುಕ್ತಿಯ ಎಲ್ಲ ಲಕ್ಷಣಗಳನ್ನೂ ಸಮಗ್ರವಾಗಿ ಅರಿತಿದ್ದ ಅಲ್ಲಮಪ್ರಭು ಇವ ರೆಲ್ಲರಲ್ಲಿಯೂ ಓಡಿಯಾಡಿ ತನ್ನ ಮಾತು ಕತೆ ನಡವಳಿಕೆಗಳಿಂದ ಎಲ್ಲದಕ್ಕೂ ಹೆಚ್ಚಿನ ಬೆಳಕನ್ನು ಬೀರಿದುದರಿಂದ ಅವರೆಲ್ಲರ ಕಾಂತಿಗಿಂತ ಮೀರಿದ ಕಾಂತಿ- ಅವೆಲ್ಲವನ್ನೂ ಆಳವಡಿಸಿಕೊಂಡ ಕಾಂತಿ ಒಂದು ಇದೆ ಎಂಬುದರ ಪರಿಚಯ ಆ ಕಾಲಕ್ಕೆ ಆಯಿತು. ಆದುದರಿಂದ ಗುರುಗಳ ಗುರುವಾಗಿ, ಜ್ಞಾನಿಗಳಲ್ಲಿ ಜ್ಞಾನಿ ಯಾಗಿ, ಮುಕ್ತರಲ್ಲಿ ವಿರಕ್ತರಲ್ಲಿ ಪ್ರಥಮನಾಗಿ, ಯಾವ ಅಹಂಕಾರವನ್ನೂ ಇಟ್ಟುಕೊಳ್ಳದೆ ಸರ್ವಸಮಭಾವದಿಂದ ಎಲ್ಲರಲ್ಲೂ ನಡೆದುಕೊಂಡು ತನ್ನದೇ ಆದ ಪ್ರೇಮ ಔದಾರ್ಯ ಕರುಣೆಗಳಿಂದ ಜನಕ್ಕೆ ಅನುಗ್ರಹ ಮಾಡಿದ ಹಿರಿಯನು ಅಲ್ಲಮಪ್ರಭು. ಚಾಮರಸನ **ಪ್ರಭುಲಿಂಗಲೀಲೆ**ಯಲ್ಲಿ ಒಂದು ವಿಶೇಷ ಲಕ್ಷಣದಿಂದ ಆತನ ಜೀವನಚರಿತ್ರೆ ವರ್ಣಿತವಾಗಿದೆ. ಹರಿಹರನ **ಪ್ರಭು ದೇವರ ರಗಳೆ**ಯಲ್ಲಿಯೂ, ಪ್ರಭುವಿನ ವಚನಗಳಲ್ಲಿಯೂ, **ಶೂನ್ಯ ಸಂಪಾದನೆ**ಯಲ್ಲಿಯೂ, ಇತರ ಕಡೆಗಳಲ್ಲಿಯೂ, ಕಂಡು ಬರುವ ಪ್ರಭುವಿನ

ವ್ಯಕ್ತಿ ಲಕ್ಷಣ ಒಂದೊಂದು ಬಗೆಯದು; ಚಾಮರಸನ ಗ್ರಂಥದಲ್ಲಿ ಎದ್ದು ಕಾಣುವ ಮೂರ್ತಿ ಬೇರೊಂದು ಬಗೆಯಲ್ಲಿ ಸುಂದರವಾದುದು, ಶುದ್ಧವಾದುದು, ಉನ್ನತವಾದುದು. ಅದರಂತೆ ತಿರುಳನ್ನೂ ಆತನ ಮೂರ್ತಿತ್ವವನ್ನೂ ಅಚ್ಚಳಿಯದಂತೆ ಕಾಣಿಸುವ ಸಂತಕಥೆಗಳು ನಮ್ಮ ನಾಡಿನಲ್ಲಿ ಹಲವಿಲ್ಲ. ಒಂದು ರೀತಿಯಲ್ಲಿ ನೋಡಿದರೆ ವೀರಶೈವ ಸಂತರ ಚರಿತ್ರೆಗಳಲ್ಲಿ ಪ್ರಭುಲಿಂಗ ಲೀಲೆ, ಅತಿ ನಿರ್ಮಲವಾದುದು, ಪ್ರಸನ್ನವಾದುದು.

ಅಲ್ಲಮಪ್ರಭು, ಚಾಮರಸನ ದೃಷ್ಟಿಯಲ್ಲಿ, ಶಿವನೇ. ಆತನಿಗೆ ಮೀರಿದು ದಿಲ್ಲ, ಸೇರದುದಿಲ್ಲ, ಅಶಕ್ಯವಾದುದಿಲ್ಲ, ಹೊರಗಾದುದಿಲ್ಲ. ಹುಟ್ಟಿದ ಕ್ಷಣದಿಂದ ಹಿಡಿದು ಗ್ರಂಥದಲ್ಲಿ ವರ್ಣಿತವಾಗಿರುವ ಕಡೆಯ ಪದ್ಯದವರೆಗೂ ಕಾಣುವ ಆತನ ಮೂರ್ತಿ ಅಲೌಕಿಕವಾದದ್ದು. ಸಾಮಾನ್ಯರಂತೆ ಆತನು ನಡೆದರೂ ನುಡಿದರೂ ಪ್ರೀತಿಸಿದರೂ ಕೆರಳಿದರೂ ಅಥವಾ ಹಾಗೆ ಕಂಡರೂ ಅದು ಲೋಕಾನುಗ್ರಹಕ್ಕಾಗಿ. ಅಷ್ಟೇ ಹೊರತು ಆತನಿಗೆ ಅದರಿಂದ ಯಾವ ಪ್ರಯೋಜನವೂ ಉದ್ದೇಶಸಾಧನೆಯೂ ಇಲ್ಲ. ಶಿವನೇ ಆದವನಿಗೆ, ನಾಮ ರೂಪ ಕ್ರೀ ಕಲಾಪ ವಿಹೀನನಾಗಿ ಬಯಲಿಗನಾಗಿ ಜ್ಯೋತಿಸ್ವರೂಪನಾದ ಅದ್ವೈತಮೂರ್ತಿಗೆ, ಯಾವುದು ಗುಣ? ಯಾವುದು ಕರ್ಮ? ಯಾವುದು ಯೋಗ? ಯಾವುದು ಮುಕ್ತಿ? ಆದರೂ, ಅವರ ಸತ್ಕರ್ಮ ಪರಿಪಾಕದಿಂದ, ಸುಜ್ಞಾನಿ ನಿರಹಂಕಾರರಿಗೆ ಮಗನಾಗಿ ಹುಟ್ಟಿದ ಶಿವನು ಅಲ್ಲಮರೂಪದಲ್ಲಿ ಮಗುವಾಗಿ ಕಂಡರೆ, ಏನು ಎಲ್ಲರಂತೆ ಮಗುವೆ ಅವನು? ಭಕ್ತರಿಗೆ ಅವರವರ ಭಕ್ತಿಯಂತೆ ಕಾಣಿಸಿಕೊಂಡು ವರಗಳನ್ನು ಕೊಡಬೇಕಾದರೆ ಅವರವರಿಗೆ ಬೇಕಾದಂತೆ ನುಳಿದಾನು ಮಾತ್ರ. ಅವರಲ್ಲಿ ಬೆರೆಯಲಾರ. ಮಾಯೆ ಕಾಮ ದಿಂದ ಆತನನ್ನು ಬಯಸಿ ಬಳಲಿದಾಗ ಪ್ರಿಯವೇಷಿಯಾದರೂ ಕಾಮಿಯಾಗಿ ಒಲಿದಾನೆ? ಕತ್ತಲೆಯಂತಿರುವ ಕಾಮವೆಲ್ಲಿ? ಸೂರ್ಯನಂತಿರುವ ಆತನ ನಿಷ್ಕಾಮವೆಲ್ಲಿ? ಹಳಹಂಚೆಲ್ಲಿ, ಪರುಷಮಣಿಯೆಲ್ಲಿ?

ಲೋಕಾನುಗ್ರಹಾರ್ಥವಾಗಿ ದೇಶ ದೇಶ ಸಂಚಾರ ಮಾಡುವಾಗ ಹಿರಿಯರು, ಕಿರಿಯರು, ಸಾಧಕರು, ಏಕಾಂತ ನೇಮಿಗಳು, ಭಕ್ತರು, ನೊಂದ ವರು, ಸೊಕ್ಕಿದವರು, ಯೋಗಿಗಳು, ತ್ಯಾಗಿಗಳು, ಅನುಭವಿಗಳು, ಒರಟರು, ಮಾಯೆಯ ಜಂಜಡ ಬಿಟ್ಟವರು, ಹೆಂಗಸರು, ಗಂಡಸರು, ಎಲ್ಲ ಬಗೆಯ ಜನರೂ ಸಿಕ್ಕಿದರು. ಅವರ ಬಳಕೆಯಲ್ಲಿ ಪ್ರಭು ತೋರಿಸಿದ ನಡವಳಿಕೆ

ಆತನಿಗೆ ದೇವತನವನ್ನು ತಂದುಕೊಡುವುದು. ಸಂಸಾರದಿಂದಲೂ, ಕಾರ್ಪಣ್ಯ ದಿಂದಲೂ, ಅಜ್ಞಾನದಿಂದಲೂ ಬಿಡುಗಡೆ ಹೊಂದಿದವನಾದರೂ ಆತನಿಗೆ ಅಹಂಕಾರವಿಲ್ಲ. ಇತರರು ಕೀಳೆಂಬ ಕಲ್ಪನೆ ಇಲ್ಲ. ತಾನು ವಿರಕ್ತನಾದರೂ ರಕ್ತರನ್ನು ಕುರಿತು ಮಾತನಾಡುವಾಗ ಆತನ ಮನಸ್ಸಿನದು ನಯವಾಗಿ ಗಂಭೀರವಾಗಿ ಕರುಣಾಮಯವಾದ ದಾರಿ. ಗೊಗ್ಗಯ್ಯ ಗೋರಕ್ಷಾದಿಗಳಿಗೆ ತಿಳಿವಳಿಕೆ ಕೊಡುವಾಗ ಆತನು ಕಾಣುವ ನುಡಿಯುವ ಪ್ರಕಾರ ಒಂದು ಬಗೆಯದು. ಅಜಗಣ್ಣನ ಶಿವೈಕ್ಯತೆ, ಮರುಳಶಂಕರ ದೇವರ ಸಿದ್ಧಿ ಸ್ವರೂಪ ವನ್ನಾಗಲಿ ಅನಿಮಿಷಯ್ಯನ ಲಿಂಗೈಕ್ಯತೆ ಅಥವಾ ಮಹಾದೇವಿಯಕ್ಕನಿಗೆ ಅನುಗ್ರಹಮಾಡುವ ಸಂದರ್ಭದಲ್ಲಾಗಲಿ ತೋರುವ ದಾರಿ ಮತ್ತೊಂದು. ತನ್ನ ಅಣ್ಣನ ನಿಧನದಿಂದ ಕಂಗಾಲಾಗಿ ವಿಶ್ವಾಸ ಒಡೆದು ಮನದ ನೋವು ಹೆಚ್ಚಿ ಕರುಳು ಹಿಂಡುವಂಥ ಸ್ಥಿತಿಯಲ್ಲಿ ಮುಕ್ತಾಯಕ್ಕನಿರುವಾಗ ಆಕೆಯೊಡನೆ ಅಲ್ಲಮನು ನಡೆದುಕೊಂಡ ರೀತಿ ಬೇರೆಂದು ಬಗೆಯದು; ಸಿದ್ಧರಾಮ ಬಸವೇಶ್ವರರಿಗೆ ತಿಳಿವಳಿಕೆ ಹೇಳಿ ಅವರಿಗೆ ಒಲಿದ ಆತನ ಸ್ವರೂಪ ಮತ್ತೊಂದು ಬಗೆಯದು. ಅವನಿಗೂ ಚೆನ್ನಬಸವನಿಗೂ ನಡೆದ ಮಾತಿನ ನಿಲವು ಇನ್ನೊಂದು ವಿಶೇಷದ್ದು. ಆದರೆ ಆ ಎಲ್ಲ ಜ್ಞಾನಿಯ ಮಾರ್ಗ; ಮುಟ್ಟಿದೋರುವ ಶಿವಮಾರ್ಗ. ಎಲ್ಲ ಸಂಬಂಧಗಳಲ್ಲಿಯೂ ಆತನ ಮನಸ್ಸು ಮಾತ್ರ ಪ್ರಶಾಂತವೇ, ತಿಳಿಯೇ. ಆ ಮಹಾತ್ಮನ ನಡತೆಯ ನಯ ಒಂದು ಸಲವೂ ಕೆಡಲಿಲ್ಲ. ಆತನ ಕರುಣೆ, ಕ್ಷಮೆ, ಅತ್ಯಪೂರ್ವವಾದವು. ತಂದೆ ಮಗುವನ್ನು ಕಾಣುವಂತೆ, ಗೆಳೆಯನು ಗೆಳೆಯನಿಗೆ ಒಲಿಯುವಂತೆ ಯಾವಾಗಲೂ ಒಲಿಯುವನು. ತಾನು ಹಿಂದೆ ನಿಂತು ಅವರಿಗೇ ಹಿರಿಮೆ ಕೊಟ್ಟು ಅವರೇ ದೊಡ್ಡವರೆಂದು ಮೆರಸು ವನು; ಅವರ ಲೋಪ ದೋಷಗಳಿಗೆ ಮರುಗಿ ಕರುಣೆ ತೋರುವನು; ಗುಣ ಗಳನ್ನು ಮೆಚ್ಚಿಕೊಳ್ಳುವನು; ಯೋಗ್ಯತೆಯನ್ನು ಕೊಂಡಾಡುವನು; ಕೈ ಹಿಡಿದು ಮೇಲೆತ್ತುವನು; ಸಮಾಧಾನ ಹೇಳುವನು. ಅತಿ ಕಟುವಾದ ಪ್ರಸಂಗ ಬಂದಾಗಲೂ ಆತನ ನಡತೆಯಲ್ಲಿ ನಿಷ್ಠುರವಿಲ್ಲ. ಯಾವುದನ್ನು ಕಂಡರೂ ಆತನಿಗೆ ದ್ವೇಷವಿಲ್ಲ; ಎಲ್ಲದರ ಬೆಲೆಯೂ ತಿಳಿದಿದೆ. ಬದುಕಿನಲ್ಲಿ ಎಲ್ಲಕ್ಕೂ ಅದರದರ ಸ್ಥಾನಉಂಟೆಂಬ ಅರಿವಿದೆ. ಅವರವರ ಸ್ಥಿತಿ, ಸಂಸ್ಕಾರ, ಶಕ್ತಿಗಳಿಗೆ ತಕ್ಕಂತೆ ಅವರವರು ಮುಂದಕ್ಕೆ ನಡೆಯಬೇಕಾಗಿರುವ ಕಾರಣ ಯಾವುದನ್ನೂ ಒಂದೇ ಏಟಿಗೆ ವ್ಯತ್ಯಾಸಮಾಡಿಬಿಡಬೇಕೆಂಬ ಆತುರವಿಲ್ಲ;

ಹಟವಿಲ್ಲ. ಯಾವ ಯೋಗವಾಗಲಿ ವಾದವಾಗಲಿ ಠೇಂಕಾರವಾಗಲಿ ಎದುರಿಗೆ ಆತನ ಬಹುಕಾಲ ನಡೆಯದು, ನಿಲ್ಲದು. ಅವೆಲ್ಲ ತಮ್ಮ ದುರ್ಬಲತೆ ಮುರಿದು ಆತನ ಪಾದಮೂಲದಲ್ಲಿ ಬಿದ್ದು ಶರಣಾಗುತ್ತಿದ್ದುವು; ವಿರೋಧವಾಗಿ ನಡೆದವರೂ ಕೆಲವೇ ಕ್ಷಣಗಳಲ್ಲಿ ಆತನ ಮಹೋನ್ನತಿಯನ್ನು ಕಂಡು ಆತನನ್ನು ಆರಾಧಿಸುವ ಬಗೆಗೆ ಮುಟ್ಟುತ್ತಿದ್ದರು. ಆತನ ಮನಸ್ಸು, ಮಾತು, ನಡತೆ, ವರ್ಚಸ್ಸು, ಆತ್ಮಗುಣ ಎಲ್ಲವೂ ಒಂದು ಉನ್ನತಿಯ ಎರಕದ್ದು. ಸಿದ್ಧಿಯ ಹದದಲ್ಲಿ, ಸರಳ ಸುಂದರವಾದ ನಿರಹಂಕಾರದ ಪ್ರಿಯವಾದ ಒಂದು ರೀತಿಯಲ್ಲಿ ಕಾಣುತ್ತಿದ್ದುದರಿಂದಲೇ ಆತನಿಗೆ ಒಗ್ಗದ ಮನೋಧರ್ಮವೇ ಉಳಿಯಲಿಲ್ಲ ವೆನ್ನಬಹುದು. ಆತನ ಸತ್ವ ತಾನಾಗಿಯೇ ಹಬ್ಬಿ ಜನರನ್ನು ತಿಳಿವಳಿಕೆಗೆ ತರುತ್ತ ಪರಿಣಾಮಕಾರಿಯಾಗುತ್ತಿತ್ತು. ಆದುದರಿಂದ ಪ್ರತಿಯೊಬ್ಬರೂ ತಮ್ಮ ಇಷ್ಟದೇವರನ್ನೇ ಆತನಲ್ಲಿ ಕಂಡರು. ತಮ್ಮ ಆದರ್ಶದಲ್ಲಿ ಯಾವ ಕನಸುಗಳನ್ನು ನೇದುಕೊಂಡು, ಇದು ಶಿವನೆಂದು ಅಂದುಕೊಂಡಿದ್ದರೊ ಅವರ ಮೂರ್ತಿಸ್ವರೂಪ ಅಲ್ಲಮನೆಂದು ಮನಗಾಣುತ್ತಿದ್ದರಾದ ಕಾರಣ ಆತನ ಗೆಲವು ಸಂಪೂರ್ಣವಾಯಿತು. ಆತನ ಪ್ರಭಾವ ಅವರ ತಿಳಿವನ್ನು ತಿಳಿಮಾಡಿ ಉದ್ಧಾರ ಮಾಡಿತು. ಒಮ್ಮೆ ಆತನ ಪರಿಚಯವಾಯಿತೆಂದರೆ ಅವರ ಬಾಳಿನ ಹದವೇ ಬೇರೆಯಾಗುತ್ತಿತ್ತು.

ಪ್ರಭು ಆಡಿದ ಮಾತು ಕಠಿನವಲ್ಲ; ಆತನ ಉಪದೇಶದ ದಾರಿ ನೇರ ವಾದದ್ದು; ಉಪಯೋಗಿಸುವ ಸಾಮ್ಯ ಸಾಮತಿಗಳು ಎಲ್ಲರಿಗೂ ಅರ್ಥವಾಗು ವಂಥವು; ಮಾರ್ಗದ ಕಷ್ಟಗಳನ್ನು ಪರಿಹರಿಸುವ ಉಪಾಯವನ್ನು ತಾನೇ ತೋರಿಸಿಕೊಡುವನು. ಮೆಟ್ಟಿಲುಮೆಟ್ಟಿಲಾಗಿ ಕ್ರಮವಾಗಿ ಸಿದ್ಧಿಗೂ ಜ್ಞಾನಕ್ಕೂ ಏರಬೇಕಾದೀತೆಂಬುದನ್ನು ಸ್ಪಷ್ಟಪಡಿಸಿದನು.* ಎಂಥ ಭಕ್ತರ ಭಕ್ತಿ, ಯೋಗಿಗಳ ಯೋಗ, ವಿರಕ್ತರ ವಿರಕ್ತಿಯಲ್ಲಿಯೂ ಒಡಕು ಹೇಗೆ ಕಂಡೀತು, ಅಹಂಕಾರ ಮಾಯೆ ಹೇಗೆ ಅವನ್ನು ಬೆಂಡು ಮಾಡಿ ಯಾವು ಎಂಬುದನ್ನು ತೋರಿಸಿದನು. ಬೆಂಡನ್ನು ತೇಲಿಸುವ ಅಂಥ ಸಮಯ ಗಳಲ್ಲಿ ಕೂಡ ಆತನು ಯಾವ ದರ್ಪವನ್ನೂ ವಿಜೃಂಭಿಸನು. ತನ್ನ

* ಷಟ್‌ಸ್ಥಲದ ಸಾಧನೆಯ ವಿಶೇಷವೇ ಇದು. 'ಸಿಂತಲ್ಲಿ ಷಟ್‌ಸ್ಥಲವ ಕಾಂಬ' ಶಕ್ತರು ಇರಬಲ್ಲರಾದರೂ ಸಾಮಾನ್ಯ ದಾರಿ ಇದು.

ಯಾವ ಗರುವಿಕೆಯನ್ನೂ ಅವರ ಮೇಲೆ ಹೊರಿಸನು. ಎಲ್ಲರ ಸಿದ್ಧಿಗೂ ಬಣ್ಣ, ಬೆಲೆ ಕಟ್ಟಬಲ್ಲ ಒರೆಗಲ್ಲು ಆತ.

ಅಲ್ಲಮನು ಸೊನ್ನಲಾಪುರದಲ್ಲಿ ಸಿದ್ಧರಾಮನನ್ನು ಕಂಡ ಒಂದು ಸಂದರ್ಭವನ್ನೂ ಅವರವರಿಗೆ ನಡೆದ ವಾಗ್ವಾದವನ್ನೂ ಸಂಗ್ರಹಿಸಿ ಅದರ ಶುಭಪರಿಣಾಮವನ್ನು ಸ್ಥೂಲವಾಗಿ ತೋರಿಸಲು ಮುಂದೆ ಯತ್ನಿಸಿದೆ.

ಸಿದ್ಧರಾಮನು ಕರ್ಮಯೋಗಿ, ಸಂನ್ಯಾಸಿ. ಸಂಸಾರ ಬೇಡವೆಂದು ಅದನ್ನು ತೊರೆದು ಯತಿಯಾಗಿದ್ದವನು. ಯೋಗಮಾರ್ಗದಲ್ಲಿ ಬಹುದೂರ ಹೋಗಿ ಸಾಕ್ಷಾತ್ ಶಿವನ ಮುಕ್ಕಣ್ಣ ಶಕ್ತಿಯನ್ನು ಪಡೆದುಕೊಂಡು ಪ್ರಖ್ಯಾತನಾಗಿದ್ದವನು. ಸಾವಿರಾರು ಜನ ಶಿಷ್ಯರಿಗೆ ಗುರುವಾಗಿ ಸುತ್ತಲ ಪ್ರಪಂಚಕ್ಕೆ ಮಾರ್ಗದರ್ಶಕನಾಗಿದ್ದವನು. ತಿಳಿವಳಿಕೆ, ಧರ್ಮ, ಶಕ್ತಿ ಇವುಗಳಲ್ಲಿ ಆತನನ್ನು ಮೀರಿದವರಿಲ್ಲವೆಂದು ಅಲ್ಲೆಲ್ಲ ತಿಳಿವಳಿಕೆಯಿತ್ತು. ಆತನೂ ತಿಳಿದಿದ್ದನು. ದೇವಾಲಯವನ್ನು ಕಟ್ಟಿಸಿ ಅದರ ಸುತ್ತ ತೋಟ, ಪಕ್ಕದಲ್ಲಿ ಕೆರೆ ನಿರ್ಮಾಣ ಮಾಡಿ ಆತನ ಲೌಕಿಕ ಕೀರ್ತಿ ಹೆಚ್ಚುವುದರಲ್ಲಿತ್ತು. ಇಂಥ ಕಾರ್ಯಗಳ ನಡುವೆ ಸಿದ್ಧರಾಮನು ಸಿಕ್ಕಿಕೊಂಡಿರುವಾಗ, ಮುಳುಗಿದಂತಿದ್ದಾಗ ಅಲ್ಲಮಪ್ರಭು ಸೊನ್ನಲಾಪುರಕ್ಕೆ ಬರುತ್ತಾನೆ. ಶಿಷ್ಯವೃಂದದ ಉತ್ಸಾಹವನ್ನೂ, ಒಡ್ಡರು ಕಲ್ಲುಕುಟಿಕರ ಸಂಭ್ರಮವನ್ನೂ, ಕೆರೆ, ದೇವಾಲಯಗಳನ್ನು ಕಟ್ಟಿಸುವ ಸಿದ್ಧರಾಮನ ಸಡಗರವನ್ನೂ ನೋಡಿ ಬೆರಗಾಗುತ್ತಾನೆ.

ನೂಲ ಸಂಕಲೆಗಳಿದು ಕನಕದ
ಕೋಳವಸು ಕಾಲಿಂಗೆ ಕೀಲಿಪ
ಕಾಳುಮತಿಯುಪನಂತೆ ಸತಿ ಸುತ ಕೂಟ ಭಯವೆಂದು
ಬಾಳಿಕೆಯನತಿಗಳೆದು ಮರಳಿಯು
ಬೋಳುಮುಂಡೆಯ ಕೀರ್ತಿಗೋಸುಗ
ಕೋಳುಹೋದನೆ ರಾಮನೆನುತಲ್ಲಮನು ಬೆಜಗಾದ

ಆತನಿಗೆ ಕರುಣೆ ಬರುತ್ತದೆ. ಹೆಂಡಿರುಮಕ್ಕಳ ಚಿಕ್ಕ ಸಂಸಾರವನ್ನು ಬಿಟ್ಟು ಈ ದೊಡ್ಡ ಸಂಸಾರವನ್ನು ಸಿದ್ಧರಾಮನಂಥವನು 'ಖ್ಯಾತಿ ಪೂಜಾಲಾಭದಿಚ್ಛೆಯಿಂದ' ಕಟ್ಟಿಕೊಂಡನಲ್ಲಾ, ಈ ಭ್ರಾಂತಿ ಇವನಿಗೆ ಹೇಗೆ ಹೋದೀತು, ಇಂಥವನೇ ಹೀಗಾದ ಮೇಲೆ ಮಾಯೆ ಮತ್ತಾರನ್ನು ಬಿಡುತ್ತದೆ, ಈತನನ್ನು ತಿರುಗಿಸಬೇಕು, ತಿದ್ದಬೇಕು -- ಎಂದು ಮನಸ್ಸಿನಲ್ಲಿ

ಸಂಕಲ್ಪಮಾಡಿಕೊಳ್ಳುವನು. ಆದುದರಿಂದಲೇ ಅಲ್ಲಿನ ಕೆಲಸದ ವಿಚಾರ ಮಾಡುತ್ತ ಮಾಡುತ್ತ ಸಿದ್ಧರಾಮನ ಸಂಬಂಧವಾಗಿ ಒಂದೆರಡು ಅಪಚಾರದಂತೆ ಕಾಣುವ ಮಾತುಗಳನ್ನು ಆತನ ಶಿಷ್ಯರ ಮತ್ತು ಭಕ್ತರ ಮುಂದೆ ನುಡಿದನು. ಸೊಣ್ಣಲಿಗೆಯ ಗುರುವಿಗೆ ಯಾವನೋ ಪಾರಿಹೋಕನಿಂದ ಅಮರ್ಯಾದೆ ಆಗುತ್ತಿರುವುದನ್ನು ಕಂಡು ಕೆರಳಿದ ಗುಡ್ಡರು ಪ್ರತಿಭಟಿಸಿ ಆತನಿಗೆ ಎಚ್ಚರಿಕೆ ಕೊಟ್ಟರು; ಆತನು ಕೇಳದಾದನು. ಸಿದ್ಧರಾಮನನ್ನು ಒಡ್ಡರಾಮನೆಂದೇ ನುಡಿಯುತ್ತಿರಲು ಇವನ ಮೇಲೆ ಕಲ್ಲುಮಳೆ ಕರೆದರು, ಕೆಟ್ಟಮಾತನ್ನಾಡಿದರು, ಬಿಗಿದು ಕಟ್ಟಹೋದರು. ಇದಾವುದರಿಂದಲೂ ಅಲ್ಲಮನಿಗೆ ತೊಂದರೆಯಾಗಲಿಲ್ಲ. ಅವರ ಕೋಪ ಕೆರಳಿದಷ್ಟೂ ಆತನು ಶಾಂತನಾದಂತೆ ಕಂಡಿತು. ಆತನ ಆತ್ಮವಿಶ್ವಾಸ ಹೆಚ್ಚುವುದು ಕಾಣಿಸಿತು. ಇದನ್ನು ಕಂಡು ಆಶ್ಚರ್ಯಚಕಿತರಾದ ಅವರು ಒಳಗೇ ಕಳವಳಗೊಂಡರು. ಅಭೂತಪೂರ್ವವಾದ ಈ ಸಂಗತಿಯನ್ನು ಗುರು ಸಿದ್ಧರಾಮನಿಗೆ ತಿಳಿಸಿದರು.§

ಗುರುಗಳಿಗೆ ಹೇಳಿ ನಿಂದಕನಿಗೆ ಶಿಕ್ಷೆಮಾಡಿಸುವವರೆಗೂ ತಮ್ಮ ಕೋಪ ಆರುವುದಿಲ್ಲವೆಂದು ಹೇಳುತ್ತಿರುವ ಶಿಷ್ಯರಿಂದ, ಯಾವನೋ ಒಬ್ಬ ಜಂಗಮ ತನ್ನನ್ನು ಹೀಯಾಳಿಸುತ್ತಿದ್ದಾನೆ ಎಂಬ ಸಂಗತಿ ಸಿದ್ಧರಾಮನಿಗೆ ತಿಳಿದು ಆತನು ಸಿಡಿಮಿಡಿಗೊಂಡನು. ಅಹಂಕಾರದ ದರ್ಪದಿಂದ ಆಡಬಾರದ ಮಾತುಗಳನ್ನು ಆಡುತ್ತ ಗರ್ಜಿಸುತ್ತ ಅಲ್ಲಮನ ಎದುರಿಗೆ ಅವನು ಬರುವ ಘಟ್ಟ, ಅವನೇ ಹಾಗೆ ನುಡಿದನೋ ಕೇವಲ ಕವಿಕಲ್ಪನೆಯೋ ಇದು ಯಾರಿಗೆ ಗೊತ್ತು? ಕವಿ ನಿರ್ಮಿತಿ ಹೀಗೆ. ಅಂದು ಅದನ್ನು ಕೇಳಿದವರಾರು? ಬರೆದಿಟ್ಟವರು ಯಾರು? ಕೃಷ್ಣ ರಾಮರ ಮಾತು ಅವರನ್ನು ನಿರ್ಮಾಣ ಮಾಡಿದ ವ್ಯಾಸ ವಾಲ್ಮೀಕಿಗಳ, ಈರ್ವನ ಇತರ ಕವಿಗಳ ನಿರ್ಮಿತಿ ಎರಡನೆಯದು. ಸಿದ್ಧರಾಮನು ಬಂದ ಹುರುಪಿನಲ್ಲಿ ತನ್ನನ್ನು ಜರೆದವನು ಜಂಭಾರಿಯಾದರೇನು, ದನುಜಾರಿಯಾದರೇನು, ಮಾರಿ ಕಾಮಾರಿಯೇ ಆದರೇನು, ಇವನಿಗೆ ತಕ್ಕ ಶಾಸ್ತಿ ಮಾಡುವೆನೆಂಬ ಸೊಕ್ಕಿದ್ದಿತು. ಇದನ್ನು ಕಂಡು ಅಲ್ಲಮನಿಗೆ ಬೇಸರ.

§ ಜನ ಕಲ್ಲು ಕರೆದದ್ದು, ನಿರ್ದೇಹನಂತೆ ನಿಂತ ಅಲ್ಲಮನಿಗೆ ಅದು ತಾಗದೆ ಆತನು ನಗುತ್ತ ಕಲ್ಲರಾಶಿಯ ಮೇಲೆ ನಿಂತದ್ದು ಒಂದು ಪವಾಡವೆನ್ನೋಣ. ಪವಾಡವನ್ನು ಒಪ್ಪದವರು ಒಂದು ಅಲಂಕಾರದ ಅಥವಾ ಭಾವದ ಸಂಕೇತವೆನ್ನೋಣ. ಹೇಗಾದರೂ ಇರಲಿ. ಅಂಥ ಸಂದರ್ಭದಲ್ಲಿ ಕಾಣುವ ಅಲ್ಲಮನ ನಡತೆ ಮುಖ್ಯ.

ಸಂಸಾರಿಗಳಿಗಿಂತ ಸಿದ್ಧರಾಮನ ನಡತೆ, ಯೋಗ್ಯತೆ ಕೀಳಾಯಿತಲಾ ಇಂಥ ಯತಿತ್ವವನ್ನು ಸುಡು ಎಂದೂ, ಯೋಗಿಯಾದವನಿಗೆ ಇಷ್ಟು ರೋಷ ಆವೇಶ ಏತಕ್ಕೆ ಎಂದೂ ನಗುತ್ತ ಅಲ್ಲಮನು ಕೇಳುತ್ತಾನೆ. ತಮ್ಮ ಗುರುವನ್ನು ಜರೆದದ್ದನ್ನು ಕಂಡು ಶಿಷ್ಯರು ಕಲ್ಲು ಕರೆಯಲು ಐಂದ್ರಜಾಲಿಕನಂತೆ ಅವುಗಳಿಂದ ಪಾರಾದ್ದೂ, ತನ್ನ ಯತಿತ್ವವನ್ನು ಭಂಗಿಸುತ್ತ ಎದುರಿಗೆ ಪರಿಹಾಸ್ಯ ಮಾಡುತ್ತಿರುವುದೂ ಸಿದ್ಧರಾಮನ ಕೋಪವನ್ನು ಹೆಚ್ಚಿಸಿದುವು. ಉದ್ರೇಕಗೊಂಡು ತನ್ನಲ್ಲಿ ಆ ಜೊಂಬತನ ನಡೆಯದೆಂದು ಅಣಕಿಸಿ ಮಾತುಗಳನ್ನಾಡಿದನು. ಅಲ್ಲಮನು ಅದಕ್ಕೂ ತಗ್ಗಲಿಲ್ಲವೇನು,—ಯೋಗಿಗೆ ಹುಟ್ಟಿದ ಈ ಕೋಪಸಂಪ್ರದಾಯವನ್ನು ಕುರಿತು ಎತ್ತಿಯಾಡಿ ಇನ್ನಷ್ಟು ಕೆದಕಿ ಮಾತನಾಡುವನು. ಸಿದ್ಧರಾಮನ ಆವೇಶ ತಲೆಗೇರಿತು. ಯೋಗಸಾಧನೆಯಿಂದ ಪಡೆದಿದ್ದ ಉರಿಗಣ್ಣನ್ನು ತೆರೆದು 'ನಿನ್ನನ್ನು ಸುಟ್ಟೇನು ಜೋಕೆ' ಎಂದು ಆವನು ಅಲ್ಲಮನನ್ನು ಬೆದರಿಸುವನು. ಅಲ್ಲಮನಿಗೆ ನಗು ಬಂತು. ತಡೆಯಲಾಗದೆ "...ನೊಸಲ ಕಣ್ಣಿನ ಬೇಗೆಯಲಿ ಮುನ್ನೆನಿತ ಕೊಂದೆಯೊ, ಯೋಗಿಯಹುದ್ದೆ ನೀನು ಹಿಂಸಾಧರ್ಮಕರ್ಮದಲಿ; ರಾಗದಿಂದುರಿದೇಳುತಿಹ ಭವರೋಗ ನಿನ್ನೊಳು ಮಾತನಾಡಲಿಕಾಗದೆನುಗೆ" ಎನ್ನುತ್ತ ಅಲ್ಲಮನು ನುಡಿಯಲು ಸಿದ್ಧರಾಮನಿಗೆ ತಾಳ್ಮೆ-ಮಿತಿ ಮೀರಿತು. ಆತನ ಕಣ್ಣು ತೆರೆದು, ಲೋಕಸುಡುವಂತೆ ಕಿಚ್ಚು ಬರುತ್ತಿರಲು ಸುತ್ತಿನ ಜನ ದಿಕ್ಕೆಟ್ಟಿತು. ಬೇಗೆಗೀಡಾದ ಜನ ಸಿದ್ಧರಾಮನನ್ನು ಆಕ್ಷೇಪಣೆ ಮಾಡಿ ಒದರಿತು. ಅಲ್ಲಮನಿಗೆ ಮಾತ್ರ ಯಾವ ಕೇಡೂ ಆಗಲಿಲ್ಲ. ಜಗತ್ತಿನ ಕಷ್ಟವನ್ನು ಕಡಮೆ ಮಾಡಬೇಕೆಂದು ಆತನು ಸಿದ್ಧರಾಮನ ಹಣೆಬೆಂಕಿಯನ್ನು ತನ್ನ ಕಾಲಿಂದ ಅಡಗಿಸಿ ಶಾಂತಗೊಳಿಸುವನು. ಶಕ್ತಿಯ ಬಲದಿಂದ ಮದಿಸುವ ಪ್ರಬಲರ ಕೋಪವು ಪ್ರಪಂಚಕ್ಕೆ ತಾಳಲಾಗದ ಕಷ್ಟ ಕೊಡುತ್ತಿರುವಾಗ ಅಲ್ಲಮನಂಥ ಕೃಪಾಶೀಲರಲ್ಲದೆ ಬೇರೆ ಯಾರು ಆ ಬೇಗೆಯನ್ನು ಶಮನಮಾಡಬೇಕು ? ಲೋಕೋದ್ಧಾರವಾಗಬಹುದಾದ ರೀತಿಯಾದರೂ ಬೇರೆ ಯಾವುದಿದೆ ? ಹಿಂದೆ ಶಿವನು ಹಾಲಾಹಲವನ್ನು ಕಡಿದು ಲೋಕಗಳನ್ನು ಕಾಪಾಡಿದ್ದು ಹೀಗೆ ತಾನೆ ?

ಪ್ರಚಂಡನಾಗಿ, ಅಮಂಧ್ಯವೆಂದು ತಾನೂ ಜನವೂ ತಿಳಿದಿದ್ದ ತನ್ನ ಯೋಗಶಕ್ತಿ ಮುರಿದು ಬಿದ್ದುದನ್ನು ನೋಡಿ ಸಿದ್ಧರಾಮನ ಕಣ್ಣು ತೆರೆಯಿತು. ಅಲ್ಲಮನು ನಿಜವಾಗಿ ಯಾರೋ ಮಹಾತ್ಮನಿರಬೇಕು ಎಂಬ ಅರಿವು

ಮೊಳೆತು ವಿವೇಕಕ್ಕೆ ತಿರುಗಿತು. ತ್ರಿಮೂರ್ತಿಗಳಿಗೂ ಮೀರಿದ ತನ್ನ ಆರಾಧ್ಯ ದೇವತೆ, ನಿರ್ಲೇಪನಾದ ಕಪಿಲಸಿದ್ಧ ಮಲ್ಲೇಶನೇ ತನ್ನ ಪರೀಕ್ಷೆಗಾಗಿ ಹೀಗೆ ಬಂದಿರಬೇಕು, ಬೇರೆಯಲ್ಲವೆಂಬ ತಿಳಿವಳಿಕೆ ನಟ್ಟಿತು. ಇದು ಮೂರನೆಯ ಘಟ್ಟ. ಆಗ ಆತನಿಗೆ ಆದ ಪಶ್ಚಾತ್ತಾಪ ಎದೆ ಕರಗಿಸುವಂಥದು. "ಕುರಿಗಳಿಗಿಂತ ನಿಕೃಷ್ಟನಾದೆನಲ್ಲಾ; ತನ್ನ ದೇವನೇ ತನಗೆ ಒಲಿದು ಬಂದಿರುವಾಗ ಮಾಯೆಯಲ್ಲಿ ಮರೆತೆನೇ" ಎಂದು ಒಳಗೆ ಮರುಗುತ್ತ ಅಲ್ಲಮನೆಡೆಗೆ ಬಂದು ಶರಣುಹೋಗುವನು. ಆಗ ವ್ಯಕ್ತಪಡುವುದು ಅಲ್ಲಮನ ನಿಜಗುಣ.

ಮನದೊಳಗೆ ನಸುನಗುತಲೀ ಮೂ
ರ್ಖನ ಗುಣಂಗಳನೇನ ಮಾಡುವೆ
ನೆನುತಲಲ್ಲಮ ಸರ್ವಜೀವದಯಾಪ್ರದಾಯಕನು
ತನುಜ ಸಾಕೇಳೇಳು ಖ್ಯಾತಿಯು
ನೆನಹು ನಮ್ಮೊಳಗಿಲ್ಲವೆನುತಲಿ
ವಿನಯದಿಂದೆತ್ತಿದನು ರಾಮನ ವಿಮಲಮಸ್ತಕವ

ಸರ್ವಜೀವ ದಯಾಪ್ರದಾಯಕನು — ಎಂಬ ಸಂಪ್ರದಾಯದ ಮಾತು ಒಣ ಮಾತಲ್ಲ ಇಲ್ಲಿ ಸಾರ್ಥಕವಾದದು. ಪುಸ್ತಕದ ತುಂಬ ಅಲ್ಲಮನ ಈ ಬಗೆಯ ದಿವ್ಯವಾದ ನಡತೆಯ ಪ್ರಭಾವವಿದೆ. ಸಿದ್ಧರಾಮನೇನೊ ತಪ್ಪು ಒಪ್ಪಿಕೊಂಡ. ಆದರೆ ಅವನ ಬುದ್ಧಿ ತಿಳಿಯಾಗಲಿಲ್ಲ. ಸಾಮಾನ್ಯರೀತಿ ಬೀದಿಜಂಗಮನ ವೇಷದಲ್ಲಿ ಬಂದರೆ ನನಗೆ ಹೇಗೆ ತಿಳಿಯಬೇಕು? ಜಾವಳಿಗನೆಂದು ಬಗೆದು ನಾವು ಬಳಲಿದೆವು ಕರುಣಿಸಿ ಕಾಪಾಡಬೇಕು ಎಂದು ಬೇಡುತ್ತಾನೆ. ಅಲ್ಲಮನ ಉತ್ತರ ಅವನ ಯೋಗ್ಯತೆಗೆ ತಕ್ಕುದಾಗಿದೆ. ಯೋಗಿಗೆ ಲಕ್ಷಣ ಸರ್ವಸಮದೃಷ್ಟಿ; ಅದು ಇಲ್ಲದಿದ್ದರೆ ಯೋಗತನ ಸಿದ್ಧಿಸದು ಎಂದು ಆತನು ಸಿದ್ಧರಾಮನಿಗೆ ತಿಳಿಯಹೇಳುವನು. ಎಲ್ಲೋ ಕೆಲವರಿಗೆ, ತನ್ನವರಿಗೆ, ಪ್ರಿಯರಿಗೆ, ಗೋಬ್ರಾಹ್ಮಣರಿಗೆ ಶಾಂತಿಗಳಾಗಲಿ ಎಂದು ಹಾರೈಸಿ ಉಳಿದವರನ್ನು ಮರೆಯುವುದು ಪಕ್ಷಪಾತ ಎಂದನು. ಸಿದ್ಧರಾಮನಿಗೆ ಈ ಮತ್ತೊಂದು ಪೆಟ್ಟುಬಿತ್ತು. ತನ್ನ ಅವಿವೇಕದ ಅರಿವಾಯ್ತು. ಈ ಅವಿವೇಕವನ್ನು ಸಮಂಜಸ ಮಾಡಿಕೊಳ್ಳುವಂತೆ ಸಿದ್ಧರಾಮನು 'ನಮ್ಮಲ್ಲಿ ಇನ್ನೂ ಉತ್ತಮ ಅಧಮ ಎಂಬ ಪಕ್ಷಪಾತ ಉಳಿದಿದೆ. ಸರ್ವರನ್ನೂ ಸಮಚಿತ್ತದಲ್ಲಿ ಕಾಣುವ ಅರಿವು ನೀನೊಲಿದಿತ್ತರೆ ಮಾತ್ರ ಬರುವುದು ಎಂದು ನಿವೇದನ ಮಾಡಿಕೊಳ್ಳುವನು.

ಈ ಸಮಯದಲ್ಲಿ ಪುನಃ ಅಲ್ಲಮನ ಉತ್ತರ ಅವನ ವಿಶೇಷ ಗುಣವನ್ನು ಹೊರಹೊಮ್ಮಿಸುವುದು. ಸ್ವಲ್ಪ ಸ್ವಲ್ಪವಾಗಿ ಸಾಧನಮಾಡಿದರೆ ಸಮಬುದ್ಧಿ ಕುದುರುವುದು. ಚಿತ್ತಶುದ್ಧಿಯಲ್ಲಿ ಯೋಗಮಾರ್ಗವನ್ನು ಅರಿತರೆ, ಜೊತೆಗೆ ಎಲ್ಲದರಲ್ಲಿಯೂ ವಿರಕ್ತಿಯನ್ನು ಪಡೆದರೆ ಬಳಿಕ ಸಮತೆ ಸಮಾಧಿಯಾಗುತ್ತವೆ. ಒಂದು ಬಾರಿಗೆ ಆಗುತ್ತದೆಯೇ ಎಂದು ಅಲ್ಲಮನು ಹೇಳಿದುದರಲ್ಲಿ 'ಒಂದು ಕುಪ್ಪಳಿಕೆಗೆ ಕೈಲಾಸ ಮುಟ್ಟುವೆವು' ಎಂಬ ವಾದದ ನಿರಸನ ಕಾಣುವುದು.

ಮುಂದೆ ಇನ್ನೂ ಒಂದು ಘಟ್ಟ ಉಂಟು. ಈ ಘಟ್ಟದಲ್ಲಿ ಸಿದ್ಧರಾಮನ ಶಕ್ತಿ ಸಂಪತ್ತು ಕರಗಿ, ಭ್ರಮೆ ಮುರಿದು, ಪರಿಶುದ್ಧವಾದ ಶರಣಾಗತಿ ಆತನಿಗೆ ಫಲಿಸುವುದು. ತನ್ನ ಒಲುಮೆಯ ಪರಮಸಾಧ್ಯನಾದ ಮಲ್ಲಿಕಾರ್ಜುನ ಸ್ವಾಮಿಯೇ ಈ ರೂಪದಲ್ಲಿ ಬಂದಿದ್ದಾನೆಂದು ಖಂಡಿತಪಟ್ಟು ಓಗ್ಗಿ ಸಿದ್ಧರಾಮನು ಸಂಭ್ರಮದಲ್ಲಿ 'ದೇವಾ! ನಿಮ್ಮಯ ದರ್ಶನ ಸ್ಪರ್ಶನವೇ ಸರ್ವ ಸಮಾಧಿಯೆನಗೆ' ಎಂದು ಹೇಳುವನು, 'ಮನು ಮುನಿ ತ್ರಿದಶರಿದಿರೇ ಕೇಳಿನ್ನು' ಮನವೊಲಿದು ನಿಮ್ಮ ಮಲ್ಲಿಕಾರ್ಜುನನ ನೋಡಲು ಬಿಜಯ ಮಾಡುವುದೆನುತ ತನ್ನಯ ಮಠಕೆ ಕರೆದನು. ಯತಿಯ ಮಮತೆ, ಮಂಕು ಇನ್ನೂ ಪೂರ್ತಿ ಮುರಿದಿಲ್ಲ, ಮತಿ ಕುದುರಿಲ್ಲ ಎಂದು ಅಲ್ಲಮನಿಗೆ ತಿಳಿಯುವುದು. ಪ್ರಭು ಆಡುವ ಮುಂದಿನ ಮಾತುಗಳು ಸಾತ್ವಿಕ ಜ್ಞಾನದ ಪರಾಕಾಷ್ಠೆಯನ್ನು ಮುಟ್ಟಿ ಬೆಳಕು ಕೊಡುವಂತಹವು.

ಬಿಡು ಮರುಳೆ ಮನೆಯೇನು ಮಠವೇ
ನಡವಿಯೇನೂರೇನು ಬೇರೆಲೊ
ದೆಡೆಗಳುಂಟೇ ಸರ್ವಗತನಾದಾ ಮಹಾತ್ಮಂಗೆ
ನುಡಿದುದೇ ಶಿವತತ್ವದಾಗಮ
ನಡೆದುದೇ ಶಿವಮಾರ್ಗ ಶರಣರ
ತೊಡಕು ತಾಸೀಪರಿ ಕಣಾ ರಾಮಯ್ಯ ಕೇಳೆಂದ

ಸಿದ್ಧರಾಮನಿಗೂ ಅವನ ಮೂಲಕವಾಗಿ ಪ್ರಪಂಚಕ್ಕೂ ಈ ಮಾತುಗಳಿಂದ ಅಲ್ಲಮನ ಉಪದೇಶವೇನು, ಅವನ ಜೀವಗುಣ ಯಾವ ಹದವು, ಆತನ ಸಿದ್ಧಿ ಎಷ್ಟು ಸಂಪೂರ್ಣವಾದುದು ಎಂಬುದು ತಿಳಿದುಬರುತ್ತದೆ. ಇದರ ಮೇಲೆ ಸಿದ್ಧರಾಮನಿಗೆ ಮಾತಿಲ್ಲ. ಆತನು ಅಲ್ಲಮನಿಗೆ ಪೂರ್ತಿಯಾಗಿ ಶರಣಾಗಿ, ಆತನ ಅನುಗ್ರಹವನ್ನು ಪಡೆಯುವನು. ಉಪದೇಶವಾಯಿತು.

ಹಲವು ಬಿನ್ನಹಕಂಜುವೆನು ಕೋ
ಟಲೆಗೆ ನಾನಿನ್ನಾರೆ ಕರ್ಮದ
ಕಳವಳಕೆ ಬೇಸತ್ತೆ ಖಂಡಜ್ಞಾನ ಮಾರ್ಗದಲಿ
ಹೊಲಬುಗೆಟ್ಟೆನು ನಿನ್ನ ಪಾದದ
ನೆಲೆಯ ಕಾಣದೆ ದೇವ ನೀನೇ
ಸಲಹೆನುತಲಲ್ಲಮಗೆ ವ್ಯೆಯಿಕ್ಕಿದನು ರಾಮಯ್ಯ
ಮತ್ತೆ ಕರುಣಿಸಿ ಪೆರೆನೊಸಲ ಹಿಡಿ
ದೆತ್ತಿ ಬಾರೆಂದೆನುತ ತನ್ನಯ
ಹತ್ತಿರಕೆ ಕರೆದಾತನನು ಕೈವಿಡಿದು ಕುಳ್ಳಿರಿಸಿ
ಹೆತ್ತ ತಂದೆಯು ಮಾನ ಪರಿಯಲಿ
ಪುತ್ರನನು ಬೋಳೈಸುವಂತಿರೆ
ನಿತ್ಯನಲ್ಲಮ ಸಿದ್ಧರಾಮನನೊಲಿದು ಮನ್ನಿಸಿದ

ಕಾಳಿಕೆ ಹಿಂಗಿದ ಹೊನ್ನಂತೆ ಸಿದ್ಧರಾಮ ಶಿವಯೋಗಿಯು ಅಂತರ್ಮಾರ್ಗದ ಸ್ವರೂಪವನ್ನು ಏಕಾಂತದಲ್ಲಿ ಗುರುವಿನಿಂದ ಪಡೆದು ಕೊಂಡನು. ಮೊದಲೇ ತಿಳಿದವನಾದ್ದರಿಂದ ಆತನಿಗೆ ವಿವರವಾದ, ವಿಸ್ತಾರವಾದ ಉಪದೇಶ ಬೇಕಾಗ ಲಿಲ್ಲ. 'ಕಾಗುದುರೆಗಾದರೆ ಶಿಕ್ಷೆಗಳಾಗಬೇಕು ; ಗರುವ ಜಾತ್ಯಶ್ವಕ್ಕೆ ಒಂದೇ ರಾಯರಾಹುತನ ರಾಘೆವಾಘೆ ನಾಕು ; ಶಬ್ದಾಗನುಗಳ ಶಿಕ್ಷೆ ನಿನಿಗಿನ್ನೇತಕ್ಕೆ' ಎಂದು ಅಲ್ಲಮಪ್ರಭು ಸಿದ್ಧರಾಮನನ್ನು ತಿರುಗಿಸಿದನು. ಇದು ಅಲ್ಲಮನ ಮಾರ್ಗ. ಸಿದ್ಧರಾಮಪ್ರಸಂಗ ಅಲ್ಲಮನ ಗುಣವನ್ನೂ ಸಾತ್ವಿಕವನ್ನೂ ಬೋಧನ ಮಾರ್ಗವನ್ನೂ ಉತ್ತಮ ರೀತಿಯಲ್ಲಿ ತೋರಿಸಿಕೊಡುವ ಒಂದು ಪ್ರಸಂಗ.

ಹೀಗೆ ಆಡಿ ಕೆಲರಿಗೆ ಕರುಣದಲಿ ಮಾ
ತಾಡಿ ಕೆಲರಿಗೆ ಸುಡಿಸಿ ಕೆಲರಿಗೆ
ನೋಡಿ ಕೆಲರಿಗೆ ಜರೆದು ಕೆಲರಿಗೆ ಜಡಿದು ಕೆಲಬರಿಗೆ
ಹಾಡಿ ಕೆಲರಿಗೆ ಹರಸಿ ಕೆಲರಿಗೆ
ಕೂಡಬಲ್ಲನು ನಿತ್ಯಸುಖವನು
ರೂಢಿಯೊಳು ಘನಮಹಿಮನೆಮ್ಮಯ ಗುರು ಮಹೇಶ್ವರನು

ಅಲ್ಲಮನಂಥವರ ಮೂರ್ತಿಪರಿಚಯವನ್ನು ಕನ್ನಡ ಸಾಹಿತ್ಯ ಮಾಡಿ ಕೊಟ್ಟಿದೆ. ಇಂಥ ಮಹನೀಯರು ಹುಟ್ಟಿ ಆ ರೀತಿ ಬಾಳಿದ್ದರಿಂದಲೇ ನಮ್ಮ ಸಂಸ್ಕೃತಿಗೆ ದೊಡ್ಡತನ ಬಂದಿರುವುದು. ಮುಂದೂ ಹೀಗೆಯೇ ಇಂಥ ಬದುಕು ಸಿದ್ಧಿಗಳಿಂದಲೇ ಈ ನಾಡು ಉಳಿಯುವುದು.

# ಶ್ರೀಚೆನ್ನಕೇಶವನ ಅಂತಃಪುರಗೀತೆ

ಶ್ರೀ. ಡಿ. ವಿ. ಗುಂಡಪ್ಪನವರ ಜನಸೇವೆ ಸಾಹಿತ್ಯಸೇವೆ ಎರಡೂ ಬಹುಮುಖವಾದವು. ಜನಜೀವನಕ್ಕೆ ಸಂಬಂಧಿಸಿದಂತೆ ಬರಸಿ ಬರೆದು ಮಾತನಾಡಿ ಸ್ನೇಹಗಳನ್ನು ಬೆಳಸಿ ಅವರು ನಾನಾ ಉಪಕಾರ ಮಾಡಿದ್ದಾರೆ. ಸಭೆಗಳಲ್ಲಿ ವಾದಿಸಿ, ಸಲಹೆಕೊಟ್ಟು, ಸಂಸ್ಥೆಗಳನ್ನು ಕಟ್ಟಿ ನಡಸಿ ಅನೇಕ ಬಗೆಯ ಕ್ರಿಯಾತಂತ್ರಗಳಲ್ಲಿ ನೆರವಾಗಿದ್ದಾರೆ. ಹಾಗೆಯೇ ತಮ್ಮ ಪದ್ಯ, ಗೀತ, ನಾಟಕ, ಪ್ರಬಂಧ, ದೇಶಭಕ್ತರ ಜೀವನಚರಿತ್ರೆ, ವೃತ್ತಪತ್ರಿಕೆ, ರಾಜಧರ್ಮಾದಿ ವಿಚಾರವಿಮರ್ಶೆಗಳ ಮೂಲಕವೂ ತಿಳಿವಳಿಕೆಯನ್ನು ದಾನಮಾಡಿದ್ದಾರೆ. ನಮ್ಮ ನಾಡಿನ ಸ್ಥಿತಿಯಲ್ಲಿ, ಯಾವ ರಾಜಕೀಯ ಮತಪಕ್ಷಗಳಿಗೂ ಸೇರದ ಖಾಸಗಿ ವ್ಯಕ್ತಿಯೊಬ್ಬರು ಜನಜೀವನದ ಸಂಪನ್ನತೆಗಾಗಿ ಸ್ವತಂತ್ರವಾಗಿ ಏನೇನು ಮಾಡಬಹುದೋ ಅದನ್ನು ಮಾಡಿ ಒಂದು ಬದುಕಿಗೆ ಸಾಕಾಗುವಷ್ಟು ದುಡಿದಿದ್ದಾರೆ. ಈ ಹಿರಿಯರು ಈಚೆಗೆ ಬರೆದಿರುವ ಒಂದು ಕೃತಿಯನ್ನು ಕುರಿತು ಎರಡು ಮಾತು.

ಅಂತಃಪುರಗಳು ಇಂದು ಮಾಯವಾಗುತ್ತಿವೆ. ಅವುಗಳನ್ನು ನಡಸುವುದು, ಅವನ್ನು ಕುರಿತು ನುಡಿಯುವುದು ಸವಿಯಾಗದೇನೊ. ಲೋಕಧರ್ಮಕ್ಕೆ ವಿರೋಧವೂ ಹೌದು. ಆದರೆ ಇದು ಹಿಂದಿನ ಕಾಲದ ಸಂಗತಿ; ಅದರಲ್ಲಿಯೂ ಬೇಲೂರು ಶ್ರೀಚೆನ್ನಕೇಶವ ದೇವರ ಅಂತಃಪುರದ ವಿಚಾರ. ಭಕ್ತಿ ಸಂಪ್ರದಾಯದಲ್ಲಿ ದೇವರೊಬ್ಬನೇ ಗಂಡಂತೆ; ಉಳಿದ ಜೀವರೆಲ್ಲ ಆವನ ಪ್ರೀತಿಯ ಹೆಣ್ಣುಗಳು. ಆದ್ದರಿಂದ ಆತನ ಅಂತಃಪುರದ ಮೃದು ಊಳಿಗವನ್ನು ನಾವು ಕೀರ್ತಿಸಬಹುದು. ಹಾಗೂ,—ಕವಿಕಲ್ಪನೆಗೆ ಯಾರಡ್ಡಿ ಏನಿದೆ?

ಸಾಹಿತ್ಯ ಬರಿಯ ವಿನೋದ, ವಿಲಾಸ ಮಾತ್ರ ಅಲ್ಲ. ಉತ್ತಮ ಜೀವನಕ್ಕೆ ಸಾಧನ, ಒಂದು ಉಪಯುಕ್ತಿ; ಉತ್ತೇಜಕ, ಉತ್ಪಾದಕ, ಶಕ್ತಿ; ಒಳಬದುಕಿನ ಮಹಾವಾಣಿ; ಅದರ ಪ್ರವಾದಿ ಎಂಬ ಮಾತು ಗುಂಡಪ್ಪನವರಿಗೆ

ಹೆಚ್ಚು ಪ್ರಿಯ. ಅದು ಚಿಗುರು, ಹೂವೇ ಅಲ್ಲ. ಹಣ್ಣೂ ಬಿತ್ತೂ ಹೌದು; ಸವಿ ಮಾತ್ರವೇ ಅಲ್ಲ, ಷಡ್ರಸ; ನವರಸಗಳ ರಂಗ. ಅದೊಂದು ಶಕ್ತಿ. ಇಷ್ಟೇ ಅಲ್ಲ; ಒಂದು ಸೌಭಾಗ್ಯದ ಸಿದ್ಧಿ. ಜೀವನ ಪರಿಪಾಕಕ್ಕೂ ಬಹುಮುಖ ಸಿದ್ಧಿಗೂ ಅಗತ್ಯವಾದ್ದು. ಉತ್ತಮ ಸಂಸ್ಕಾರದ ಪ್ರತಿಫಲನ ಅದು — ಎಂಬುದು ಅವರ ನಂಬಿಕೆ. ಅಲ್ಪರಂಜನೆಯಿಂದ ಅವರಿಗೆ ತೃಪ್ತಿಯಿಲ್ಲ. ಯಾವ ಯೋಚನೆ, ಮಾತು, ನಡತೆ, ಕ್ರಿಯೆ, ಜೀವನದ ಸಂತೋಷವನ್ನು ಮೆರಸು ವುವೋ ಹೃದ್‌ಭಾವ ಚಿದ್‌ಭಾವ, ಆನಂದ ಭಾವಗಳನ್ನು ಬರಿಸಿ, ಸರಸ ಜೀವನಕ್ಕೆ ಪೋಷಣೆಕೊಡುವುವೊ ಆ ಎಲ್ಲದರ ನಿರ್ಮಾಣ, ಪ್ರಚಾರ, ಭೋಗ, ವಿಮರ್ಶೆಗಳ ಕಡೆಗೂ, ಶುಚಿ ರುಚಿಯ ಕಡೆಗೂ, ಅವರ ಒಲವು ಹೆಚ್ಚು. ಅವರ ಕವಿತೆಯಲ್ಲಿ ಎಂದೇ ಆಗಲಿ ಶ್ರದ್ಧೆ, ಅರ್ಥಪುಷ್ಟಿ, ಬುದ್ಧಿಯ ವಿಲಾಸ ಪ್ರಧಾನ. ಅವರ ಕೃತಿಬಂಧ ಬಿಗಿ; ಬಳಸುವ ಮಾತು ಆರಿಸಿದ್ದು. ಬೇಕೆನ್ನಿಸಿದಾಗ ತಿಳಿಯಾಗಿ ಸುಲಭವಾಗಿ ಬರೆಯಬಲ್ಲರಾದರೂ ಪ್ರೌಢಿ, ಖಚಿ ತತೆ, ಬಂಧ ಗೌರವಗಳಿಗೇ ಅವರಲ್ಲಿ ಪ್ರಾಬಲ್ಯ. ಪದ್ಯಗಳು ಬಹುಮಟ್ಟಿಗೆ ಸಂಸ್ಕೃತವೃತ್ತ, ಕನ್ನಡ ಕಂದಗಳು. ಅಲ್ಲಿ ಸಮಸ್ತಪದಗಳ ತಾಂಡವ ವಿಶೇಷ; ನಡುಗನ್ನಡ ಹಳಗನ್ನಡಗಳ ರೀತಿಗೆ ಪಕ್ಷಪಾತ. ಈ ಪದ್ಯರೂಪಗಳನ್ನು ಬಳ ಸುತ್ತಿರುವುದು ಬಹುಮಟ್ಟಿಗೆ ಇಂದು ಇವರೊಬ್ಬರೇ ಎನ್ನಬಹುದು.

ವಾಗ್ವೈಖರಿ, ಶಬ್ದಸೌಷ್ಠವಗಳಿಗೆ ಮೆಚ್ಚಿ ಶಬ್ದವಿಲಾಸ ಚಮತ್ಕಾರ ಗಳನ್ನು ಮೆರಸುವವರ ಸಂತತಿ ಅಳಿಯುತ್ತಿದೆಯೆಂದು ಅವರಿಗೆ ಕೊರಗು. ಅವರ ಕೃತಿಗಳಲ್ಲಂತೂ ವೈದರ್ಭಿಗಿಂತ ಪಾಂಚಾಲಿ, ಗೌಡೀರೀತಿಗಳ ಮನಸ್ಸು ಹಲವಾರು ಕಡೆ ಕಾಣಿಸೀತು. ಸಾಗುವಾನಿ ಬೇಕಾದರೆ ಅದು ಬಲಿತು ಗಡು ಸಾದಷ್ಟೂ ಪ್ರಯೋಜನಕರವಲ್ಲವೆ ? ತೆಂಗಿನ ಗೊಂಚಲು ಬೇಕೆನ್ನಿಸಿದರೆ ಆಕಾಶಕ್ಕೆ ತಾನೇ ನಿಲುಕಬೇಕು ! ಕುಸುಮ, ಕಿಸಲಯಗಳಿಗೆ ಆಸೆ ಪಡುವವರು ಈ ಮರಗಳನ್ನು ಬಯಸಬಾರದು. ಲತೆಯ ಹಬ್ಬುಗೆ ದ್ರಾಕ್ಷಿ ಗೊಂಚಲಿನ ಮಧುರ ಮೃದುಲತೆ ರಸಪ್ರಾಚುರ್ಯಗಳನ್ನು ಬಗೆದರೆ ಈಡೇರದು.

ಈ ವರೆಗೆ ಸೌಂದರ್ಯಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಅಂಶಗಳನ್ನು ಒಂದು ಗದ್ಯಗ್ರಂಥದಲ್ಲಿ ಅವರು ವಿವರಿಸಿದ್ದಾರೆ. 'ನಿವೇದನ'ವೆಂಬ ಕವಿತಾ ಮಂಜರಿಯಲ್ಲಿ ಬೇಲೂರಿನ ಶಿಲಾಬಾಲಿಕೆಯರನ್ನು ಕುರಿತೇ ಹಲವು ಸೀಸ ಪದ್ಯಗಳೂ ಗೀತಗಳೂ ಅಚ್ಚಾಗಿವೆ. ಅಲ್ಲಿ ಸೌಂದರ್ಯದ ಸಮಸ್ಯೆಯೂ,

ಜೀವ ದೇವರ ಸಂಬಂಧದಲ್ಲಿ ಅದರ ಸ್ಥಾನನಿರ್ದೇಶವೂ ಅನುವಾದವೂ ಆಗಿವೆ. ಕಲೆಯೂ ಚೆಲುವೂ ಜನದ ಮನಸ್ಸನ್ನು ದೈವದಿಂದಲೂ ಧರ್ಮದಿಂದಲೂ ಏಕೆ ತನ್ನ ಕಡೆಗೆ ಸೆಳೆಯುತ್ತವೆ? ಸೆರೆ ಹಿಡಿಯುತ್ತವೆ? ಉದ್ವೇಗ ಉಂಟು ಮಾಡುತ್ತವೆ? ಸೌಂದರ್ಯಮುದ್ರಿಕೆಯರಾದ ಶಿಲಾಬಾಲೆಯರ ಸ್ಥಾನ ವೇನು ದೇವಮಂದಿರದಲ್ಲಿ, ಧರ್ಮಜೀವನದಲ್ಲಿ ಎಂಬ ಪ್ರಶ್ನೆ ಹುಟ್ಟಿ, ನೀವೇಕೆ ಹೊರಗೆ? ಇಲ್ಲ, ಹೀಗೆ? ದೇವರಿಗೆ ನೀವು ಬೇಡವೆ? ನಿಮ್ಮ ಲಾಸಲಾವಣ್ಯ ಗಳು ಅವನಿಗೆ ಪ್ರಿಯವಲ್ಲವೆ? ನೀವೂ ಕಲೆಯೂ ಬೇಡವಾದವನು ರಸಿಕ ಹೇಗಾದಾನು? ಅಥವಾ ತಾನು ಕಾಣಿಸಿಕೊಂಡರೆ ನಿಮ್ಮ ಲಾಸಲಾವಣ್ಯ ಧರೆಯಿಂದ ಮಾಯವಾದಾವೆಂದು ನಿಮ್ಮ ಮೇಲಿನ ಕರುಣೆಯಿಂದ ತಾನು ಅಡಗಿದ್ದಾನೊ? ನಿಮಗೆ ನಮಗೆ ಕಾಣಿಸದೆ ತಾನು ನೋಡಿ ಆನಂದಿಸುತ್ತಿ ದ್ದಾನೊ? ಎನ್ನಿಸುವುದು

ಬಿದಿಯ ಕರಚಾತುರಿಯೊಳಸಿತಿನಿತು ಸುಳಿದು ಸರಿವ
ಮನುಜ ಮಾನಸದೊಳತಿ ಚಿತ್ರದಿಂ ಚಲಿಸಿ ಮೆರೆವ
ಭುವನ ಜೀವನ ನಸ್ಮಕಮ್ಮತಬಿಂದುಗಳನೆರೆವ

ಪರತತ್ತ್ವ 'ಮಾಧುರಿಯನಿನಿಸು' ತೋರುವ ಕಲಾಮೂರ್ತಿಗಳ ಅಂತರಂಗ ವನ್ನು ರಸಿಕರು ಬಲ್ಲರು. ಆನಂದ, ಪ್ರೇಮ, ಜೀವನಾಧಾರತೆ ಇವಲ್ಲವೆ ದೇವರ ಲಕ್ಷಣಗಳು? ಇವುಗಳಿಗೆ ಕಾರಣವಾದ ಈ ಕಲಾಕೃತಿಗಳಿಂದ ಸೊಗಸು ಹಾಯುವುದು. ಬಾಳ ದಾರಿ ಸುಗಮವಾಗುವುದು. ಅದೇ ದೇವರಿಗೆ ನಿಮ್ಮಂಥ ಚೆಲ್ವ ಕೃತಿಗಳು ಸಲ್ಲಿಸುವ ಸೇವೆ, ಬಾಳಲ್ಲಿ ನಿಮ್ಮ ಕಾರ್ಯ ಎನ್ನು ವರು. ವಿಶ್ವತಂತ್ರ ರಹಸ್ಯಬೋಧನದ ಉತ್ಸಾಹವಿದು. ವಿಶ್ವಶಿಲ್ಪಿಯ ಸಭೆ ಯಲ್ಲಿ ಉಚಿತವೇ ಸರಿ. ಇದರಿಂದ ಲೋಕಹರುಷ ಬೆಳೆಯಲಿ. ಜನದಲ್ಲಿ ಸೌಹಾರ್ದ, ಆರ್ದ್ರತೆ ಹರಡಲಿ ಎನ್ನುವರು. ಕುದಿವ ಲೋಕಕ್ಕೆ ನೀವು ಮುದದ ತಣಿವನ್ನು ಬೀರಿ, ಜನದ ಮತಿವಿಕಾರ ಅಳಿಯಲಿ, ಸರಸತೆ ಲೋಕಕ್ಕೆ ಊಡಿ ಬರಲಿ ಎಂಬುದು ಆಶಯು.

ಆ ಮಾತು ನುಡಿದು ಇಂದಿಗೆ ೨೦–೨೫ ವರ್ಷ ಕಳೆದಿವೆ. ಆದರೂ ಅದೇ ವಿಷಯ ಅವರ ಮನಸ್ಸನ್ನು ಈಗ ಇನ್ನೂ ಆಳವಾಗಿ ಇನ್ನೂ ಹದವಾಗಿ ನೆನೆದಿದೆ. ಅಲ್ಲಿನ ಶಿಲಾಕಲ್ಪದ ಅನುಭವ ಈ ಗೀತಗಳಲ್ಲಿ ಹೆಚ್ಚು ಭಾವ ಮಯವಾಗಿ ಗಾನಮಯವಾಗಿ ವಿಸ್ತಾರವಾಗಿ ಆಗಿದೆ.

ದೇವರು ಆನಂದಮಯ. ಆತನ ಸೌಂದರ್ಯ ತರಂಗತರಂಗವಾಗಿ ಎಲ್ಲೆಲ್ಲಿಯೂ ಚಿಮ್ಮಿದೆ. ಚೆಲ್ಲಿದೆ. ಲೋಕದಲ್ಲಿ, ಭಾವದಲ್ಲಿ, ಜೀವದಲ್ಲಿ, ಕೃತಿಯಲ್ಲಿ, ನಯಸಾಧನೆಗಳಲ್ಲಿ ಕಾಣುವುದೆಲ್ಲ ಆ ಆನಂದಭಾಸವೇ. ಅದೇ ಸೌಂದರ್ಯ. ಈ ಸೌಂದರ್ಯದ ಕಡಲನ್ನು ಜಕ್ಕಣಾಚಾರ್ಯನೂ ಅವನ ಗೆಳೆಯರೂ ಕಡೆದು ಈ ಅಮೃತಬಿಂದುಗಳನ್ನು ದೊರಕಿಸಿಕೊಟ್ಟಿದ್ದಾರೆ. ಚೆನ್ನಕೇಶವನ ಅಂತಃಪುರದ ಈ ಚೆಲುವೆಯರು ಚಂದ್ರ, ಲಕ್ಷ್ಮಿ, ವಾರುಣಿ, ಅಮೃತ, ಕಲ್ಪವಲ್ಲರಿಗಳಿಗೆ ಸಾಟಿ. ಅವುಗಳಂತೆಯೇ ಮೋಹಕರು; ಸೌಭಾಗ್ಯ ಸಾಧಕರು. ಅವರ ಮೇಳಗೀತ, ನಾಟ್ಯ, ವಿನೋದ; ಅವರ ಜಲ್ಪ, ಮಂದಹಾಸ; ಅವರ ಶೃಂಗಾರ, ಬಿನ್ನಾಣ, ಬಹುರೂಪಿಯಾದ ಅನುರಾಗ-ದ್ಯೋತಕಗಳು; ಬ್ರಹ್ಮಸಂಜ್ಞಾಪಕಗಳು. ಮುಗ್ಧತೆ ಸರಳತೆಯಿಂದಾಗಲಿ ಕುಟಿಲತೆಯಿಂದಾಗಲಿ ಅವರು ಬೇಡುತ್ತಿರುವುದು ಅವನ ಕೃಪಾಪ್ರಸಾದವನ್ನೇ. ಅವರ ಬದುಕು ಅವನ ಸಂತೋಷದಲ್ಲಿ. ಅವನ ವಿರಹ ಅಸಹನೀಯ—ತಮ್ಮ ನಿಲವು, ಭಂಗಿ, ಭಣಿತಿ, ಕಲಾವಿಲಾಸ ಎಲ್ಲ ಆತನಿಗೆ ಅರ್ಪಿತ.

ಈ ಶೃಂಗಾರ ಭಾವಗಳಲ್ಲಿ ದೈವಕ್ಕೂ ಮಾನುಷಕ್ಕೂ ಇರುವ ಸಂಬಂಧವನ್ನು ಸೌಂದರ್ಯತತ್ವದ ಮೂಲಕ ಮುನ್ನುಡಿಯಾಗಿ ೨೫ ಪದ್ಯಗಳಲ್ಲಿ ಕವಿ ತಿಳಿಸುತ್ತಾರೆ. ಸೌಂದರ್ಯವಿಜಯವೆಂಬ ೫ ಪದ್ಯಗಳಲ್ಲಿ ಉಪಸಂಹಾರ ಮಾಡುತ್ತಾರೆ. ೫೩ ಮುದ್ದು ಹೆಸರುಗಳನ್ನಿಟ್ಟು ಈ ಶಿಲ್ಪಚತುರೆಯರನ್ನು ಕರೆದು ವರ್ಣಿಸಿ ಅವರೊಬ್ಬೊಬ್ಬರಿಗೂ ಒಂದೊಂದು ಹಾಡು ಹಾಡಿ ದೇವನಿಗೆ ಅವರ ನಿವೇದನೆಯನ್ನು ಅರುಹುತ್ತಾರೆ. ದೇವನ ಪ್ರಸಾದ ದೊರೆಯುವುದೆಂದು ಅವರಿಗೆ ಭರವಸೆ ಕೊಡುತ್ತಾರೆ. ವಿವಿಧ ವೃತ್ತಗಳಲ್ಲಿ, ರಾಗತಾಳಗಳಲ್ಲಿ ಈ ನಡೆ ನುಡಿ ಗಾನ ವರ್ಣನೆ ನಡೆಯುವುವು. ೪ ಅಕ್ಷರಗಳ ದೇವರಮ್ಯ ವೃತ್ತದಿಂದ ಹಿಡಿದು ೨೨ ಅಕ್ಷರಗಳ ದೊಡ್ಡ ವೃತ್ತಗಳಿವೆ. ಸಾಂಗತ್ಯವಿದೆ. ಅಪರೂಪವಾದ ಅನೇಕ ವೃತ್ತಗಳ ಬರವಣಿಗೆಯನ್ನು ಇಲ್ಲಿ ಒಂದೇ ಕಡೆ ಕಾಣಬಹುದು. ಕರ್ಣಾಟಕ ಸಂಗೀತ ಸಂಪ್ರದಾಯದಲ್ಲಿ ಉತ್ತಮರಾದವರ ಹಾಡುಗಾರಿಕೆಯನ್ನು ಈ ೫೦ ವರ್ಷಗಳ ಕಾಲ ಕೇಳಿ ಅನುಭವಿಸಿರುವ ಅವರು ತಮಗೆ ಒಪ್ಪಿ ರುಚಿಸಿದ ಧಾಟಿ ತಾಳಗಳಲ್ಲಿ ಹಾಡಿಕೊಂಡು ನಮಗೆ ಆ ಜಾಡು ತೋರಿಸಿದ್ದಾರೆ. ಉಭಯಕಾರರಲ್ಲದ್ದರಿಂದ ಬಹುಶಃ, ಸ್ವರತಾಳಗಳ ಪ್ರಸ್ತಾರ ಹಾಕಿ ತಿಳಿಸಿಲ್ಲ. ನಡುವೆ ಒಂದು ಕಡೆ ಭಸ್ಮಮೋಹಿನಿ

ಯರ ಪ್ರಸಂಗ ಬಂದು ಮೋಹಿನಿ ಭಸ್ಮಾಸುರರ ಭೀಷಣ-ಸುಂದರ ನಾಟ್ಯ-ಗೀತವನ್ನು ರಚಿಸಿದ್ದಾರೆ.

ಇದೆಲ್ಲ ಕೃತಿಯ ಹೊರವ್ಮೈಚೆಲುವನ್ನು ವರ್ಣಿಸಿದಂತಾಯಿತೇ ಹೊರತು ಅವುಗಳ ಗುಣ ಸ್ವರೂಪವನ್ನೂ ಸ್ವಾರಸ್ಯವನ್ನೂ ತಿಳಿಸಿದಂತಾಗಲಿಲ್ಲ. ಮೊದಲ ನಾಂದಿಯಲ್ಲಿ ದೇವಾಲಯದ ಸ್ಥಾಪನೆಯ ಚರಿತ್ರೆ, ಅದನ್ನು ಕ್ರಿ. ಶ. ೧೧೧೭ ರಲ್ಲಿ ಕಟ್ಟಿಸಿದ ವಿಷ್ಣುವರ್ಧನನ ಉನ್ನತಿಯನ್ನೂ ಆತನು ಮೆರೆದ ಸಮನ್ವಯಧರ್ಮವನ್ನೂ ಶಾಸನಗಳಿಂದಲೂ ಪ್ರಾಚೀನ ಶ್ಲೋಕಗಳಿಂದಲೂ ತೋರಿಸಿ, ಪ್ರತ್ಯಂಗಕ್ಕೂ ಚಿತ್ರಶೋಭೆ ಬರುವಂತೆ ಪುಟ ಪುಟದ ಅಲಂಕಾರ ಮೆರಸಿದ್ದಾರೆ. ಆ ರಾಜನ ಭಕ್ತಿಯೂ ರಸಿಕತೆಯೂ ಕಲಾಭಿನಿವೇಶವೂ ಇಲ್ಲದಿದ್ದರೆ ಈ ದೇವಾಲಯವೆಲ್ಲಿ? ಆತನ ಮತ್ತು ಶಾಂತಲೆಯ ಸಂಸಾರ ದಲ್ಲಿ ಸರಸಸೌಭಾಗ್ಯ ಬೆಳೆಯದಿದ್ದಿದ್ದರೆ ಈ ಚೆಲುವಿನ ಬೆಳೆಗೆ ಅವಕಾಶವೆಲ್ಲಿ? ಅವರ ಆಶ್ರಯದಲ್ಲಿ ಈ ಅಮರ ಕೃತಿಗಳನ್ನು ನಿರ್ಮಿಸಿದ ಜಕ್ಕಣನ ಶಿಲಾ ಕಲ್ಪವು ಅನಂತ ಸಂತೋಷದಾಯಿ.

ಕೇಳಿ, ನೋಡಿ, ಅನುಭವಿಸಿ. ಏನು ಕೋಲಾಹಲ! ಕೇಶವರಂಜನಾತುರ ವಾದ ಈ ಚೆಲುವಿನ ಸಂಭ್ರಮ! ಒಳಗಿದ್ದು ಕೇಶವನು ಎಲ್ಲವನ್ನೂ ನೋಡು ತ್ತಿದ್ದಾನೆ. ಈ ಸರಸಸಂರಂಭ ಸಂತತವಾಗಿ ನಡೆದಿದೆ. ತನ್ನ ಕಣ್ಣಿಗೆ ಕಂಡಂತೆ, ಉಳಿಯಲ್ಲಿ ರೂಪುಗೊಂಡಂತೆ ಕಾಣಿಸಿದ ಶಿಲ್ಪಿಗೂ, ಮಾಡಿಸಿದ ಅರಸನಿಗೂ, ಅವರು ಕಂಡಂತೆ ನಮಗೂ, ನಾಳೆಯವರಿಗೂ ಕುಂದದ ಆನಂದ ವಾಗಿ ಚಿರನವ್ಯವಾಗಿ, ಅಮರ ಸಂಕೇತವಾಗಿ ಈ ಕಲಾಮಂಡಲ, ಈ ದಿವ್ಯಾನುಭವ ನಿಂತಿದೆ. ಅಲ್ಲಿ ಅಡಗಿರುವುದು ದೇವೋಪಾಸನ ದೀಕ್ಷೆಯೆನ್ನಿ, ಲಾವಣ್ಯಾರ್ಥ ವಿಕಾಸವೆನ್ನಿ; ಸಂತುಷ್ಟಜೀವೋತ್ಸವವೆನ್ನಿ; ಧರಾಸ್ವರ್ಗೈಕ ಸಂಸಿದ್ಧಿಯೆನ್ನಿ. ಇದು ಕಲೆಯ ಪರಿಷತ್ತು. ಚೆಲುವಿನ ಔತಣ.

ಸೌಂದರ್ಯದ ಅರ್ಥವ್ಯಾಪ್ತಿ ದೊಡ್ಡದು. ಅದರ ಸ್ವರೂಪವನ್ನು ಶ್ರೀಯುತರು ಇಲ್ಲಿ ಚೆನ್ನಾಗಿ ತಿಳಿಸಿದ್ದಾರೆ. ಆದರೆ ಅದರ ಎಲ್ಲ ಮುಖಗಳನ್ನೂ ತೋರಿಸುವುದು ಯಾವೊಬ್ಬ ಕವಿಗೂ ಯಾವ ಒಂದು ಕಾಲಕ್ಕೂ ಶಕ್ಯವಲ್ಲ. ಕಲೆ ಹುಟ್ಟಿದಲ್ಲೆಲ್ಲ ಅದು ಕಾಣುವುದು. ಇಲ್ಲಿ ಆಸ್ತಿಕರಾದ ಒಬ್ಬ ಕವಿಗೆ ಶೃಂಗಾರ ಸನ್ನಿವೇಶಗಳ ಮಧುರಭಾವದಲ್ಲಿ ಇನಿಯನಾದ ಭಗವಂತನಿಗೆ ಅರ್ಪಿತವಾದಂತೆ ರೂಪುಗೊಂಡಿರುವ ಪ್ರಸಂಗದ ವರ್ಣನೆ ಮಾತ್ರ ಇದೆ.

ಸೌಂದರ್ಯತತ್ವಕ್ಕೂ ಅದರ ಒಪ್ಪಿಕೆಗೂ ದೈವದ ಅಸ್ತಿತ್ವದ ಮೂಲಸ್ಥಾಪನೆ ಬೇಕೆ? ಆಸ್ತಿಕದರ್ಶನ ಒಂದರ ಆಧಾರವಿಲ್ಲದೆ ಅದಕ್ಕೆ ನೆಲಸು ಸಾರ್ಥಕತೆ ಇಲ್ಲವೆ? ಆಗವೆ? ಎಂಬ ಪ್ರಶ್ನೆಗಳು ಇಲ್ಲಿ ಸಲ್ಲವು. ನಂಬಿರುವ ಒಂದು ದೊಡ್ಡ ಮನಸ್ಸು ಅದರ ನಿವೇದನೆಯ ಗೂಢವನ್ನೂ ಗಾಢವನ್ನೂ ಇಲ್ಲಿ ವಿವರಿಸಿಜೀವ, ಲೋಕ, ದೇವ — ಈ ಸಂಬಂಧವನ್ನು ಕಲಾದೃಷ್ಟಿಯಿಂದ ಕಾಣಿಸುತ್ತದೆ.

ಕಾವ್ಯಾಲಯದ ಗೆಳೆಯರಾದ ಶ್ರೀ ಚಿದಂಬರಂ ಅವರು ಈ ಗ್ರಂಥವನ್ನು ಅತ್ಯಂತ ಸುಂದರವಾಗಿ ಪ್ರಕಟಿಸಿ, ಪ್ರಕಟನ ಕಲೆಗೆ ಒಂದು ಅಲಂಕಾರ ವಿಶೇಷವನ್ನು ದೊರಕಿಸಿದ್ದಾರೆ. ಅಷ್ಟು ಲಕ್ಷಣವಾಗಿದೆ; ಪುಸ್ತಕದ ಅಚ್ಚು ಕಟ್ಟು.

# ಶ್ರೀನಿವಾಸರ ಕವಿತೆ

ಉತ್ತಮವಾದ ಸಣ್ಣ ಕತೆಗಳನ್ನು ಮೊದಲು ಬರೆದು ಹೆಸರಾದುದು ಶ್ರೀನಿವಾಸರಿಗೆ ಒಂದು ಬಗೆಯಲ್ಲಿ ಅನ್ಯಾಯವಾಯಿತು : ಅವರ ಇತರ ಕೃತಿಗಳ ಕಡೆಗೆ ಜನದ ಕಣ್ಣು ಅಷ್ಟಾಗಿ ತಿರುಗಲಿಲ್ಲ. ತಿರುಗಿದಾಗ, ಒಂದು ಬಗೆಯ ಚೆಲುವಿಗೆ ಮನಸೋತು, ಇನ್ನೊಂದಕ್ಕೆ ಸುಲಭವಾಗಿ ಒಲಿಯದೆ ಗೌರವ ಕೊಡದಂತೆ ಮಾಡಿತು. ಅದು ಅವರ ಇತರ ಕೃತಿಗಳ ದೋಷವಲ್ಲ. ಅವರವೇ ಸಣ್ಣಕತೆಗಳ ಉತ್ಕೃಷ್ಟತೆಯ ಫಲ. ಸತ್ಕರ್ಮದಿಂದ ಕೂಡ ದುಷ್ಫಲ ಬರಬಲ್ಲುದೆಂಬಂತೆ ಇದೆ, ಈ ಪರಿಪಾಕ. ಕತೆ ಕವಿತೆಗಳ ಜೊತೆಗೆ ಅವರು ನಾಟಕಗಳನ್ನು ಬರೆದಿದ್ದಾರೆ, ವಿಮರ್ಶೆಯನ್ನು ಬರೆದಿದ್ದಾರೆ. ಶ್ರೀನಿವಾಸರ ಕವಿತೆಯನ್ನು ಕುರಿತು ಇಲ್ಲಿ ನಾಲ್ಕು ಮಾತು ಹೇಳುತ್ತೇನೆ. ಸದ್ಯಕ್ಕೆ ಕವಿತೆಯೆಂದರೆ, ಪದ್ಯರಚನೆ ಹಾಡು ಎರಡನ್ನೂ ಒಳಗೊಳ್ಳಲಿದೆ ಈ ಕೆಲವು ನಿಮಿಷಗಳ ಪ್ರಸಂಗ. [ಇದು ಮುಗಿದ ಮೇಲೆ ನನ್ನ ಕಿರಿಯ ಗೆಳೆಯರಾದ ಗಣಪತಿಯವರು ಶ್ರೀನಿವಾಸರ ಒಂದೆರಡು ಪದ್ಯಗಳನ್ನೂ ಒಂದೆರಡು ಹಾಡುಗಳನ್ನೂ ಹಾಡಿ ತೋರುತ್ತಾರೆ. ಗೀತಗಳ ಓಟವನ್ನು ಅಲ್ಲಿ ಕಾಣಬಹುದು.]

ಶ್ರೀನಿವಾಸರ ಮನಸ್ಸು ಬಹುಮುಖವಾಗಿ ಜೀವನದ ಅನುಭವವನ್ನೂ ಸಂಸ್ಕಾರವನ್ನೂ ಪಡೆದದ್ದು. ಬಡತನದ ಕಷ್ಟ, ಸಿರಿತನ, ಪದವಿ, ಅಧಿಕಾರಗಳ ಸುಖ, ದರ್ಪ ಎರಡನ್ನೂ ಶ್ರೀನಿವಾಸರು ಕಂಡವರು. ಬಗೆಬಗೆಯ ಅಂತಸ್ತಿನ ಜನರ ಸುಖದುಃಖಗಳನ್ನು ಅವರೊಡನೆ ಬೆರೆತು ಅರಿತಿರುವವರು. ಹಳ್ಳಿಗರು, ಪಟ್ಟಣಿಗರು, ಸರಕಾರಿ ಅಧಿಕಾರಿಗಳು, ವರ್ತಕರು, ಮೃದುವೃತ್ತಿಗಳವರು, ನ್ಯಾಯಶಾಲೆಗಳಿಗೆ ಬರುವವರು — ಎಲ್ಲರೂ ಅವರಿಗೆ ಪರಿಚಿತರು. ಲೆಕ್ಕ, ಕಾಗದ, ವ್ಯಾಪಾರ, ಸಂಚಾರ, ಭಾಷಣ, ಕಾವ್ಯರಚನೆ, ಸಂಘಸಂಸ್ಥೆಗಳ ವಿಚಾರ, ಬೀದಿಯ ಜನದ ವಿನೋದ, ವಿರಸ — ಎಲ್ಲದರ ದರ್ಶನವೂ ಅವರ ಬಾಳಹದವನ್ನು ರೂಪಿಸಿದೆ. ಆ ಎಲ್ಲದರ ನಡುವೆಯೂ ಇಣಿಕಿ ತೋರುವುದು ಮಾನವಜೀವನದ ಯಾವುದೋ ಮುಖ, ಸಂದೇಶ; ಅದರ ಹಿಂದಿರುವ ದೇವರ ಸಂಕೇತ ಎನ್ನುವರು. ಮಾನವನ ಬಾಳು ಸೋಕಿದ ಎಲ್ಲ ತಾವಿನಲಿ

ನೋವು ನಗೆ ಈ ಪರಿ ಕಾದಿದೆ ರಸಸೃಷ್ಟಿಗೆ ಎನ್ನುವರು ಅವರು. ಅವರ ಬಾಳಲ್ಲಿ ಮುಕ್ತಿಗಿಂತ ಭಕ್ತಿಭಾವಕ್ಕೆ ಪ್ರಾಧಾನ್ಯ. ಜನರನ್ನೂ ವಿಷಯಗಳನ್ನೂ ಜೀವನದ ಒಳ, ಹೊರ, ಸುತ್ತಲ ಹಲವಾರು ಮುಖಗಳನ್ನೂ ಕುರಿತು ಬೇರೆ ಬೇರೆಯಾಗಿಯೂ ಒಟ್ಟಿಗೂ ಯೋಚನೆ ಮಾಡಿರುವ ಅವರಿಗೆ ಬಾಳಿನ ತುಂಬು ಕಾಣಿಸುವ ಹಾಗೆ ಇತರ ಹಲವು ಮೇಧಾವಿಗಳಿಗೆ ತಿಳಿಯದೆನ್ನಬೇಕು. ತಿಳಿದ ಹಲವರು ಸಾಹಿತ್ಯಪ್ರಪಂಚಕ್ಕೆ ಸುಳಿದಿಲ್ಲ. ಸುಳಿದವರೆಲ್ಲ ತಮ್ಮ ಜೀವನಾನುಭವದ ವಿಸ್ತಾರ, ವಿವಿಧತೆ ತೋರುವಂತೆ ಬರೆದಿಲ್ಲ. ಒಬ್ಬಿಬ್ಬರನ್ನು ಬಿಟ್ಟು. ಇವರ ಕವಿತೆಯಲ್ಲಿ ಆ ವಿಸ್ತಾರ, ಆ ವಿವಿಧತೆ ಇವೆ. ಒಂದು ಮಾತಿನಲ್ಲಿ ಹೇಳಬಹುದಾದ ಅಂಶವೆಂದರೆ ಅದು ಒಂದು ಅಖಂಡ ವ್ಯಕ್ತಿತ್ವ: ಉಳಿದ ಯಾರ ಬರವಣಿಗೆಯಲ್ಲಿಯೂ ಸಮಗ್ರವಾದ ಸುಸಂಗತವಾದ ಒಂದು ಬದುಕಿನ ಎಲ್ಲ ಮುಖಗಳೂ, ನೋಟ ನುಡಿತಗಳೂ ಇವರಲ್ಲಿ ಸಿಕ್ಕುವಂತೆ ಸಿಕ್ಕವು; ಇವರಲ್ಲಂತೆ ಸಾಕಲ್ಯದಿಂದ ಬದುಕಿನ ಹದ, ನಯ ಪ್ರತಿಫಲಿಸಿಲ್ಲ. ಇವರಿಗೆ ನೋವು, ಕಷ್ಟ, ಪಾಪ, ಕ್ರೌರ್ಯ, ಅನ್ಯಾಯ, ಅಸಮತೆಗಳ ಅನುಭವವಿಲ್ಲವೆನ್ನುವವರೂ ಅವರನ್ನು ಮೃದು, ಮಡಿ ಎನ್ನುವವರೂ ಇವರ ಕೃತಿಗಳನ್ನು ಸರಿಯಾಗಿ ಓದಿಲ್ಲವೆನಿಸುತ್ತದೆ. ಇಷ್ಟು ನಿಜ : ಇವರು ಅಂಥವನ್ನೂ ವಿಗಡವಾಗಿ, ಕಿರಿಚಿ ಹೇಳುವುದಿಲ್ಲ; ಹಲ್ಲುಮಸೆದು, ಕರ್ಕಶವಾಗಿ ನುಡಿದು, ಆವೇಶಗೊಂಡು ಅಬ್ಬರಿಸುತ್ತ, ಅಕ್ಷರ ಮತ್ತು ಪದ ಡಂಬರಗಳನ್ನು ಕೃತಿಗಳಲ್ಲಿ ತುಂಬುವುದಿಲ್ಲ. ಇಲ್ಲಿ ಮಾತು, ನಡತೆ, ಮೃದು; ವೇಷ ಸೌಮ್ಯ. ಶ್ರೀನಿವಾಸರ ಮಾರ್ಗ ತಾಳ್ಮೆಯ ಮಾರ್ಗ. ದೃಷ್ಟಿ, ನಾಲ್ಕು ಕಡೆಯೂ ನೋಡಿ ಅರಿತು ಸತ್ಯವನ್ನು ಕಾಣಿಸುವ ದೃಷ್ಟಿ. ಹೀಗಾಗಿ, ಅವರ ಕೃತಿಯಲ್ಲಿ, ವಿಜೃಂಭಣ, ವಾಗ್ಘೋರಣೆ, ಸಮಸ್ತಪದಗಳ ಆಟೋಪ ಕಾಣಬಹುದಾದ ಕರ್ಕಶ ಸನ್ನಿವೇಶಗಳಲ್ಲಿಯೂ ಅವರ ನುಡಿ ಹಿಡಿತದಲ್ಲಿಯೇ ನಯದಲ್ಲಿಯೇ ನುಡಿಯುವುದು. ಅವರ ಬರವಣಿಗೆಯಲ್ಲಿ ಶಕ್ತಿಯಿಲ್ಲವೆಂದು ದೂರು ಹೊರುವ ಮಟ್ಟಿಗೆ ಅದು ನಯವಾಗುವುದು. ಬೆಡಗಿನ ಪದಗುಂಫನ, ಮೆಳೆಗಟ್ಟಿದ ಪದಸಂಘಟನೆ ಪ್ರೌಢಿಗಳನ್ನು ಅವರಲ್ಲಿ ಕಾಣಲಾಗದು. ಹಾಗೆಯೇ ಬಿಗಿಪೆಂದು ಹೆಸರಿಟ್ಟು ಆ ಬಿಗುವಿಗೆ ಅರ್ಥವನ್ನೂ ರಸವನ್ನೂ ನಯವನ್ನೂ ಬಲಿಕೊಡುವ ಅಭ್ಯಾಸವೂ ಒಲವೂ ಅವರಿಗಿಲ್ಲ. ಯಾರ ಬರವಣಿಗೆಯಲ್ಲಿಯೂ ಎಲ್ಲವೂ ಚೆನ್ನಾಗಿರುವುದು ಶಕ್ಯವಿಲ್ಲ. ಅತ್ಯುತ್ತಮ ಕವಿಗಳ ಬರವಣಿಗೆಯಲ್ಲಿಯೇ ಅಸಮತೆಯಿರುತ್ತದೆ.

ಇದನ್ನು ಬಲ್ಲವರು ಯಾರೇ ಆಗಲಿ ಶ್ರೀನಿವಾಸರ ಉತ್ತಮ ಕವಿತೆಯಲ್ಲಿ ಒಂದು ವಿಶೇಷ ಒನಪನ್ನೂ ನುಣುಪನ್ನೂ ಅರ್ಥಸುಭಗತೆಯನ್ನೂ ಕಾಣ ಬಲ್ಲರು.

ಅದರ ಒಂದೆರಡು ಲಕ್ಷಣಗಳನ್ನು ವಿವರಿಸುತ್ತೇನೆ.

ಅವರ ಅನುಭವಪ್ರಪಂಚದ ವ್ಯಾಪ್ತಿ ಬಹು ದೊಡ್ಡದು. ಅತ್ಯಲ್ಪ ಸಂಗತಿಗಳಿಂದ ಹಿಡಿದು — ಒಂದು ಎಲೆ, ಒಂದು ಹುಳು, ಹಕ್ಕಿ, ಮೇಕೆ, ಕೋಣ, ನೀರ ಮೇಲಿನ ಹಾವಸೆ, ಹಳ್ಳಿಯ ಮುದುಕಿ, ಗೌಡ, ಮೂಕ, ಹೆಳವ ರಿಂದ ಹಿಡಿದು — ಒಂದು ದೇಶ, ಜನ, ರಾಜನೀತಿ, ವೇದಾಂತ, ಕಲೆ, ವಿಧಿ, ಇಹಪರ, ದೇಶದೇಶಾಂತರ, ಕಾಲಕಾಲಾಂತರ, ಹಿರಿಯರ ಕವಿಗಳ ವಿಜ್ಞಾನಿ ಗಳ ವಿಮರ್ಶೆ, ಜೀವನವ್ಯಾಪಾರದ ತೊಡಕು ತೊಳಲುಗಳ ವರೆಗೂ ಅದು ಹರಡಿ ಹಬ್ಬಿದೆ. ಅವರ ಪ್ರೀತಿಯ ಕಣ್ಣಿಗೆ ದೊಡ್ಡದು ಚಿಕ್ಕದು ಎಂಬ ಭಿನ್ನತೆ ಯಿಲ್ಲ. ಎಲ್ಲದರ ಒಳಗೂ ಒಂದೇ ಜೀವದ ಪ್ರವಾಹವನ್ನೂ ಸ್ಫುರಣೆಯನ್ನೂ ಅವರ ಮನಸ್ಸು ಕಾಣುತ್ತದೆ. ಆದ್ದರಿಂದ ಭಗವಂತನ ಶಕ್ತಿಯ ಅಥವಾ ಕಳೆಯ ಒಂದಂಶವನ್ನೊ ವಿಲಾಸವನ್ನೊ ಪ್ರತಿಯೊಂದರಲ್ಲಿಯೂ ಕಾಣುವರು. ಇಲ್ಲಿ ಕೂಡ ಅವರ ಮೇಲೆ ದೂರು ಹೊತ್ತಿದೆ — ದೇವರು, ಭಗವಂತ, ಈ ಶಕ್ತಿಯ ಅಂಶ, ಅವರ ಗ್ರಂಥಗಳಲ್ಲಿ ಅತಿಯಾಗಿದೆಯೆಂದು. ಏಕಿರಬಾರದು ?– ವಿಶ್ವಾಸದಲ್ಲಿ ಬೇರಿಟ್ಟು ಅದು ಅವರ ಬಾಳನ್ನು ಪರಿಮಳಿಸುತ್ತಿದ್ದರೆ ? ಕಾವ್ಯಭಾವವನ್ನೂ ಆಳಗೊಳಿಸಿದರೆ ? ದೂರಿನ ಸತ್ಯಾಸತ್ಯತೆ ಹೇಗೇ ಇರಲಿ, ಅವರ ಕೃತಿಯಲ್ಲಿ ಭಕ್ತಿಪದ್ಯಗಳು ಹಲವು; 'ಬಿನ್ನಹ'ದ [ಮತ್ತು 'ಮನವಿ'ಯ] ತುಂಬ ಬಹುಮಟ್ಟಿಗೆ ಅವೇ. ಇತರ ಅನೇಕ ಪದ್ಯಗಳಲ್ಲಿ ಅವರ ದೃಷ್ಟಿಯ ಹಿಂದೆ ದೇವರ ವಿಲಾಸವೂ ಪ್ರಭಾವವೂ ಕೈಗುಣವೂ ಕಾಣುತ್ತವೆ. ಆ ಎಲ್ಲ ಸಂದರ್ಭದಲ್ಲಿಯೂ ಸುಮಾರು ನಮ್ಮಲ್ಲಿ ಸಾಂಪ್ರದಾಯಿಕವಾಗಿ ಬಂದ ದೈವ ತತ್ವದ ಪ್ರತಿಪಾದನೆಯೂ ವರ್ಣನೆಯೂ ಇರುತ್ತವೆ. ಈಗಿನ ಕಾಲದವರ ಯೋಚನೆಯ ಸಾರ ಅಂಶವೆಲ್ಲ ಅವರ ಕಲ್ಪನೆಯ ಹಿಂದೆ ಇರುತ್ತದೆಯಾದರೂ ಅವರು ಬಳಸುವ ಮಾತು, ಹೋಗುವ ದಾರಿ, ಬೆಳಸುವ ಕಲ್ಪನೆ ಸಾಂಪ್ರ ದಾಯಿಕವಾಗಿ ಮಾತ್ರವೇ ಕಂಡು, ಕೆಲವರಿಗೆ ಸವೆದ ನಡೆಯಂತೆ ಕಾಣಿಸ ಬಲ್ಲದು. ಆದರೆ ಅಂಥ ಕೃತಿಗಳಲ್ಲಿ ಉಕ್ತವಾದ ಭಾವವನ್ನೊ ಅರ್ಥದ ಒಯ್ಯಲನ್ನೊ ನೋಡಿದರೂ ಅಲ್ಲಿ ಆಳ, ಶ್ರದ್ಧೆ, ಪ್ರಾಮಾಣಿಕತೆ ಇವೆ.

ಹೊಸಕಾಲದ ದೃಷ್ಟಿಯಲ್ಲಿನ ಹಲವಂಶಗಳನ್ನು ಅರಗಿಸಿಕೊಂಡಿರುತ್ತದೆ. ಹೊಸದಾಗಿ ಸ್ವಂತ ಬಾಳಲ್ಲಿ ತಾವು ಅರಿತಂತೆ ಕಾಣಿಸಲು ಹಾತೊರೆಯುತ್ತಿರುವ ಒಂದು ಜೀವಭಾವ ಕಾಣುತ್ತದೆ. 'ಬರುತಲಿಹನು' 'ಸದ್ಯ' 'ವ್ಯಾಕುಲ' 'ವೈಶಾಖದಲ್ಲಿ' ಮುಂತಾದವುಗಳಲ್ಲಿ ಒಂದು ನವಕಾಲದ ಬಣ್ಣ, ಕಳೆ ಇವೆ.

ಒಡನೆಯೇ ಇನ್ನೊಂದಂಶವನ್ನು ಹೇಳಬೇಕು. ಯಾವಾಗ ದೈವತತ್ವವನ್ನೂ ಈ ಬಗೆಯ ಆಸ್ತಿಕತೆಯನ್ನೂ ಒಪ್ಪಿದೆವೊ ಆಗ ಅದಕ್ಕೆ ಎಲ್ಲ ಅರ್ಪಿತ, ಎಲ್ಲವೂ ಅದರ ಆಜ್ಞೆಗೆ ಹೆಜ್ಜೆಯಿಟ್ಟೀತು ಮಾತ್ರ, ಅದರ ಪ್ರಭಾವ ಧರ್ಮ ಪ್ರಭಾವ, ಎಂದಾಗುತ್ತದೆ. ಜಗತ್ತಿನ ಸ್ಥಿತಿಗತಿಗಳನ್ನು ಕುರಿತು ಟೀಕೆಯೂ ನಮ್ಮ ಕಲ್ಪನಾವಿಲಾಸಗಳ ಬಣ್ಣ ರೀತಿಗಳೂ ಮಾರ್ಪಡುತ್ತವೆ. ದೇವರ ವ್ಯಾಪಾರ ಎಲ್ಲೆಲ್ಲಿಯೂ ಕಾಣುವುದೆಂದಾಗ ಕೆಟ್ಟದಕ್ಕಿಂತ ಒಳ್ಳೆಯದರ ಕಡೆಗೇ ಚೆಲುವುಗಳ ಕಡೆಗೇ ಹೆಚ್ಚು ಬೆರಳು ತೋರಿಸುತ್ತ ಮನಸ್ಸು ಸಮಾಧಾನ ನುಡಿಯುತ್ತ ಹೋಗುವುದು. ಅನುಕೂಲಕಲ್ಪನೆಗೂ ವ್ಯಾಖ್ಯಾನಕ್ಕೇ ಮನಸ್ಸು ಎಳೆಯುವುದು. ಹಳಸಿದುದು ಕೊಳೆತುದು ಇವುಗಳ ಕಡೆ ಮನಸ್ಸು ಹೋಗದು. ಅವರಿಗೆ ಕಾಣುವುದು ದೇವರ ಪ್ರೇಮ, ಜಗತ್ತಿನ ಚೆಲುವು — ಸೌಭಾಗ್ಯ. ಬಂದ ಎಲ್ಲ ತೊಂದರೆಯೂ ಕಷ್ಟವೂ ಅವನಿಗೆ ಅರ್ಪಿತ, ಅವನು ನೋಡಿಕೊಳ್ಳುವನು ಎಂಬ ನಂಬಿಕೆ ಅವರ ಎಲ್ಲ ತಾಪವನ್ನು ಹರಿಸುವುದು. ಎದೆ ತಲೆಗಳ ಮೇಲಿನ ಭಾರವನ್ನು ಇಳಿಸುವುದು. ಒಂದು ಮಟ್ಟದಲ್ಲಿ ಅವರು ನುಡಿಯುವ ಮಾತು ತೆಂಗಾಳಿಯಂತೆ ಮೃದು, ಆಪ್ಯಾಯಕರ, ಸುಗಂಧಪೂರಿತ; ಜೀವನನನ್ನು ಹರಸಿ, ಕ್ಷಣಿಕದಲ್ಲಿ ಪರಸತ್ವವು ತಳಿರುವಂತೆ ಮಾಡುವಂಥಾದ್ದು. ಮರಣ ಮರಣವಲ್ಲ, ಅದರಲ್ಲಿ ಜೀವನದ ಮೊಳಕೆಯಿದೆ, ಸುಖದಲ್ಲಿಯೂ ಪರಮಾತ್ಮನುಂಟು ಎಂಬ ಮಾತು ನಾನು ತಿಳಿದಂತೆ ಇನ್ನಾರ ಕೃತಿಯಲ್ಲಿಯೂ ಹೊಸಕನ್ನಡದ ಮೊದಲ ಕವಿಗಳಲ್ಲಿ ಬಂದಿರಲಿಲ್ಲ. ಅವರ 'ಬಿನ್ನಹ'ದ ಕೋಗಿಲೆಯ ದನಿಯಲ್ಲಿ ಭರವಸೆಯ ಒತ್ತಡವಿದೆ. ಎಲ್ಲೆಲ್ಲಿಯೂ ಚೆಲುವು ದೊರೆಯಾಳುತ್ತಿದೆ — ಎಂಬ ಸಂತೋಷವನ್ನು ಅವರು ಬೀರುತ್ತಾರೆ.

ದಿನದಿನದ ಸಾಮಾಜಿಕ ಜೀವನದ ಕಷ್ಟ ಕಾರ್ಪಣ್ಯಗಳ ಕಡೆ ಅವರ ಕವಿ ಮನಸ್ಸು ಉಗ್ರವಾಗಿ ವ್ಯಗ್ರವಾಗಿ ತಿರುಗಲಿಲ್ಲ. ಆದರೆ ನೋವಿನ ಅನುಭವ, ಬದುಕಿನ ವಿಕಾರ, ಭೀಕರತೆ, ಆಭಾಸಗಳು ಅವರ ಕಾವ್ಯಕ್ಕೆ ಬರಲಿಲ್ಲವೆಂದು ಹೇಳಕೂಡದು ಎಂದೆನಲ್ಲವೆ? ಅವರು ಕಾಣಿಸುವ ಸುಂದರ ದರ್ಶನದ ಜೊತೆಗೆ

ಸಮಾಜದ ಹಲವು ವಿಷಮಚಿತ್ರಗಳನ್ನೂ ತೋರಿಸಿದ್ದಾರೆ. ಮದಲಿಂಗನ ಒಡೆದ ಸರಸ, ಒಲವು; ದುಷ್ಟರು ಬಲಾತ್ಕಾರದಿಂದ ಕೆಡಿಸಲು ಮೈಲಿಗೆಯೂ ಎಂಜಲೂ ಆದ ಚಿಕ್ಕಮಲ್ಲಮ್ಮನ ಒಡಲ ಸೌಭಾಗ್ಯ; ಹೆಂಗಸಿನ ಗುಣಕ್ಕೇ ಶಕ್ತಿಗೇ ಹೀನತೆಕಾಣಿಸುವಂತೆ, ಆಕ್ಷೇಪಣೆ ಮಾಡುವಂತೆ ಆದ ಬುದ್ಧನ ತ್ಯಾಗ, ಅದರಿಂದ ಉಂಟಾದ ಯಶೋಧರೆಯ ನೋವು; ಚಂದ್ರನಿಗೆ ಆಸೆಪಟ್ಟ ಪಾರಿಜಾತದ ಬೇನೆ; ತಿರಸ್ಕೃತರ ದೀನತೆ, ಹಾಳೂರಿನ ಭಂಗ; ಗಂಡುಹೆಣ್ಣುಗಳ ಸಂಬಂಧದಲ್ಲಿ ನಡೆವ ರಾಕ್ಷಸತೆ, ಹೊಲೆಯರ ಉತ್ತಮರ ನಡುವೆ ಬಲಿದಿರುವ ಅನ್ಯಾಯ, ದೇವಾಲಯ, ಮಠ, ಹರಿಕಥೆ ಇಂತಹ ಅವಕಾಶಗಳಲ್ಲಿ ಜನದ ಅಸಭ್ಯತೆ, ಶಕ್ತಿಯಿರುವವರ ಅಮಾನುಷ ವರ್ತನೆ — ಹೀಗೆ ಎಷ್ಟೋ ವಿರಸಗಳ ಎಣಿಕೆ ಅವರ ಬರವಣಿಗೆಯ ತುಂಬ ಇದೆ. ಅವುಗಳ ಹಿಂದಿರುವ ನೋಟ ಬದುಕನ್ನು ಬೆಸೆಯುವ ಸಮಗ್ರ ನೋಟ; ಕರಗುವ ನೋಟ, ತಿದ್ದುವ ಒಲಿಸಿ ಸರಿಪಡಿಸುವ ನೋಟ.

ಪ್ರಕೃತಿಯ ಸೌಂದರ್ಯ ಸೌಭಾಗ್ಯಗಳ ವರ್ಣನೆ ಅವರ ಕವಿತೆಯಲ್ಲಿ ಎಲ್ಲೆಲ್ಲಿಯೂ ಸಿಕ್ಕುವುದು. ಮನುಷ್ಯನು ಪ್ರಕೃತಿಯ ಒಂದಂಗ; ಅವನು ಅದನ್ನು ಹಳಿದು ಮೆಟ್ಟಿ ಅದಕ್ಕೆ ವಿರೋಧವಾದಂತೆ ಬಾಳುವುದಕ್ಕಿಂತ ಅದರಲ್ಲಿ ಸೇರಿಕೊಂಡು ಅದರ ಆವರಣದ ಪರಮಸಾರವೆಂಬಂತಹ ಬದುಕು ಬಾಳಬಾರದೆ ಎಂಬುದು ಅವರ ಯೋಚನೆ. ಸರಸಿಯ ನೀರ ಹೂಗಳ ಚೆಲುವೂ, ಚಿಗರಿಗಣ್ಣುಗಳ ಚೆಲುವೂ, ವಿಂಧ್ಯದಲ್ಲಿ ಪ್ರಕೃತಿಯ ಚೆಲುವೂ, ಆ ನಡುವೆ ನಿಂತ ಹೆಣ್ಣು ಚೆಲುವೂ ಒಂದೇ ಚೆಲುವಿನ ರೂಪಗಳು. ಚಿಗುರು, ಹೂ, ಎರಳೆ, ಹೆಣ್ಣು ಇವರು ಬೇರೆಮಾಡಿ ತೋರಿಸಬೇಕಾದ ಸತ್ವಗಳಲ್ಲ. ಮನಸ್ಸು, ನಡತೆ, ಭಾವ, ಮಾತು ಇವುಗಳ ಚೆಲುವೂ ಈ ಸೃಷ್ಟಿಯ ಚೆಲುವಿಗೆ ಸೇರಿಕೊಂಡರೆ ಬಾಳ ಚೆಲುವೂ ಫಲಿಸೀತು, ಸಮರಸ ಉಂಟಾದೀತು, ಆ ಮೂಲಕ ದೇವರ ಒಲವೇ ಅರಳಿ ಆಳೀತು ಎಂಬುದು ಅವರ ಭಾವ.

ಸಾಹಿತ್ಯ ಜೀವನದ ವಿಮರ್ಶೆಯೆನ್ನುವುದುಂಟು. ಅದನ್ನು ನುಡಿದ ಆರ್ನಾಲ್ಡ್ ಉತ್ತಮ ವಿಮರ್ಶಕನೂ ಕವಿಯೂ ಆಗಿದ್ದ. ಕಾವ್ಯಸತ್ಯ, ಕಾವ್ಯ ಸೌಂದರ್ಯಗಳಿಗೆ ಹೊಂದುವ ತತ್ವಗಳಿಗೆ ಒಳಪಟ್ಟರೆ ಮಾತ್ರ ಅಂತಹ ವಿಮರ್ಶೆ ಕವಿತೆಯಾಗುತ್ತದೆ ಎಂದೂ ಆ ಒಡನೆಯೇ ಆತನು ಹೇಳಿದ್ದಾನೆ. ಹಾಗೆ ಹೊಂದುವಂತಹವು ಶ್ರೀನಿವಾಸರ ಅನೇಕ ಕವಿತೆಗಳು. ನೇರವಾಗಿ

ಬೋಧಿಸುವ, ತತ್ವವನ್ನು ಮನಸ್ಸಿನಲ್ಲಿಟ್ಟು ಸ್ಥಾಪಿಸಲು ಬರೆದಿರುವ ಕವಿತೆಗಳೂ ಇವೆ. ಆದರೂ ಕವಿತಾವಿಲಾಸಕ್ಕೇ ಮೇಲ್ಗೈ ಆಗಿ ವಿಮರ್ಶೆಯೂ ಧರ್ಮದರ್ಶನವೂ ಒಳಗಿಂದ ಅಡಗಿ ನುಡಿಯುವ ಕವಿತೆಗಳೂ ಹಲವಾರು ಇವೆ. ಅವನ್ನು ಓದುವುದು ಅವಕ್ಕಾಗಿಯೇ; ಅಲ್ಲಿರುವ ತತ್ವಕ್ಕೆ, ಗದ್ಯಾರ್ಥಕ್ಕೇ ಅಲ್ಲ. ಜೀವನ ವಿಮರ್ಶೆಮಾಡಬೇಕೆಂದು ತೋರಿದ ಒಂದು ಕಾಲದಲ್ಲಿ 'ಮಲಾರ'ದ ೧೪ ಸಾಲಿನ ಪದ್ಯಗಳನ್ನು ಬರೆದು ಆ ಬಗೆಯ ಪ್ರಪಂಚವನ್ನೂ ತೆರೆದರು. 'ಮಲಾರ'ದ ಹತ್ತೆಂಟು ಪದ್ಯಗಳಲ್ಲಿ ಕಾವ್ಯಗುಣ ಜೀವನ ವಿಮರ್ಶೆ ಎರಡೂ ಸಮನಾಗಿ ಸೇರುವುದನ್ನು ಕಾಣಬಹುದು.

ಕವಿತೆಯಲ್ಲಿ ಮೃದುವಾದ ನಗೆಯನ್ನು ತಂದು ಸೇರಿಸುವುದು ಕಷ್ಟ. ಆ ಕಷ್ಟವನ್ನು ಅವರು ಕಾಣರೆಂಬಂತೆ ನಗೆಯ ವಿಲಾಸವನ್ನು ನೀಲಗಾರ ಮಾದ, ಆಕಾಶಗಂಗೆಯಲ್ಲಿ ನಡೆದ ಒಂದು ಘಟನೆ ಮುಂತಾದೆಡೆಗಳಲ್ಲಿ ನೀಳ್ಗವಿತೆಗಳಲ್ಲಿ ಬಹು ಚೆನ್ನಾಗಿ ತುಂಬಿದ್ದಾರೆ. ಅರೆತೆರೆದ ಅವರ ತುಟಿ, ಮುಗುಳುನಗೆ ನಕ್ಕು ಹೃದಯವನ್ನು ಅರಳಿಸಿ ಮನಸ್ಸನ್ನು ನಿರಾಳವಾಗಿ ಮಾಡುವುದು. ಸಣ್ಣ ಮಕ್ಕಳನ್ನೂ ಹೆಣ್ಣು ಜೀವನವನ್ನೂ ಕುರಿತು ಅವರ ಆದರ ಬಹಳ. ಮಕ್ಕಳಿಗೆ, ಅದಕ್ಕಿಂತ ಅತಿಶಯವಾಗಿ ತಾಯಿಹೆಣ್ಣಿಗೆ ಸಲ್ಲಿಸುವ ಕಾಣಿಕೆ ಅತಿಶಯವಾದದ್ದು. ಮನುಷ್ಯನ ನಯ ನಾಗರಿಕತೆಯೆಲ್ಲ ಗಂಡು ಹೆಣ್ಣಿನ ಪರವಾಗಿ ನಡೆದುಕೊಳ್ಳುವ ನಡತೆಯ ಸಂಸ್ಕಾರದಲ್ಲಿದೆ ಎಂಬಂತೆ ಇರುತ್ತದೆ ಹೆಣ್ಣನ್ನು ಕುರಿತು ಅವರು ಬರೆಯುವ ಬರಹ. ಅವರ ನಿಷ್ಪಕ್ಷಪಾತ ಹಲವು ವೇಳೆ ವಿಚಿತ್ರವಾಗುವುದು. ಕಿರಿಯರ, ವಿಮರ್ಶಕರ ಆಕ್ಷೇಪಣೆಯನ್ನು ಕುರಿತು ಉತ್ತರ ಕೊಡುವಾಗಲೂ ಒಬ್ಬ ಬೆಲೆಹೆಣ್ಣು ಹರಿಕಥೆಯನ್ನು ಮಾಡಿದುದನ್ನು ಕುರಿತು ಕಠಿನ ನುಡಿವಾಗಲೂ ಅದರ ಪರವಾಗಿಯೂ ನುಡಿಯಬಲ್ಲ ಮನಸ್ಸು ಅವರಿಗೆ ಇದೆ. ಒಂದೇ ರೀತಿ ನೋಡಿದರೆ ಅನ್ಯಾಯವಾದೀತೆಂದು ವಿರೋಧ ತೋರಿಸಿದ ವಸ್ತುವಿನ ಪರವಾಗಿ ಕೂಡ ಏನು ನುಡಿಯಬಹುದೊ ಅದನ್ನು ಉದಾರವಾಗಿ ನುಡಿಯುತ್ತಾರೆ. ಇದು ಅವರ ಮನಸ್ಸಿನ ವಿಶದತೆ ವಿಶಾಲತೆಗಳಿಗೆ ಸಾಕ್ಷಿ.

ಕತೆಹೇಳುವ ಸಂದರ್ಭಬಂದಾಗಲೆಲ್ಲ ಆ ಕವಿತೆಯ ಬಣ್ಣ ಬೆಳಗುವುದು. ಅವರ ಕಥನಕಾವ್ಯಗಳು ಸಾಮಾನ್ಯವಾಗಿ ಚೆನ್ನಾಗಿರುವುವು. ಒಂದು ವಿಶೇಷ ಜೀವಕಳೆ ಮೊದಲಿನಿಂದಲೂ ವಿಷಯವನ್ನು ಸುತ್ತಿಕೊಳ್ಳುವುದು.

ಕಥೆಯ ಪರಿಣಾಮಕ್ಕೆ ಕ್ರಿಯೆಯನ್ನು ನಡಸುವುದು. ಮೊದಲ ಕವಿತೆಗಳಲ್ಲಿ 'ಮದಲಿಂಗನ ಕಣಿವೆ' ಈಚಿನವುಗಳಲ್ಲಿ 'ರಾಮನವಮಿ' 'ಗೌಡರ ಮಲ್ಲಿ' 'ನವರಾತ್ರಿಯ ಕಥೆ' 'ಸೋಜಿಗದ ಹೊಳಲು' 'ಜೀನಿ ಡ ಆರ್ಕ್' 'ಪ್ರಮ-ದ್ವರೆ' ಮತ್ತು ನಾಮದ ಮಹಿಮೆಯ ಕೆಲವು ಭಾಗಗಳು — ಮುಂತಾದೆಡೆ ಬರುವ ಕವಿತೆಯ ಸೊಗಸೂ ಕಲ್ಪನೆಯೂ ಅಸಾಧಾರಣವಾದವು. ಚಾಸರನ 'ಕ್ಯಾಂಟರ್‌ಬರಿ ಟೇಲ್ಸ್' ಬಗೆಯ ನವುರು ಗರಿಮೆ ಉಳ್ಳವು ಇವು.

ಇನ್ನು ಅವರು ಬಳಸುವ ಮಾತು, ಅರ್ಥ, ಅಥವಾ ಛಂದೋರಚನೆಯನ್ನು ಕುರಿತು ಒಂದು ಮಾತು ಹೇಳಿ ಈ ಭಾಷಣವನ್ನು ಮುಗಿಸಬಹುದು. ಎಲ್ಲಿ ನಂತೆಯೇ ಇಲ್ಲಿಯೂ ಮಾತು ಸುಲಭ. ನೇರವಾಗಿ ಅರ್ಥ ಕೊಡುವಂಥಾದ್ದು. ನುಣುಪಾದ್ದು. ಅದು ಬಹುತರ ಎಲ್ಲರಿಗೂ ಅರ್ಥವಾಗುವ ಕನ್ನಡ. ಅತಿ ಗ್ರಾಮ್ಯವಲ್ಲದ ಅತಿ ಪ್ರೌಢವಲ್ಲದ ನುಡಿಗಟ್ಟಿನ ರೂಢಿ ಅವರಲ್ಲಿ ವಿಶೇಷ. ಛಂದಸ್ಸಿನ ಅನೇಕಪ್ರಕಾರಗಳಲ್ಲಿ ಅವರು ಕೃತಿಗಳನ್ನು ನಿರ್ಮಿಸಿದ್ದಾರೆಯಾದರೂ ನಾಲ್ಕುಪಾದಗಳ ಪದ್ಯಗಳು ಅವರಿಗೆ ಪ್ರಿಯ, ಹಿತ. ಕಥನಕವಿತೆಗಳಿಗೆ ಒಂದೊಂದು ಸಲ ಲಾವಣಿ ಧಾಟಿಗಳನ್ನೂ ಚೆನ್ನಾಗಿ ಹೊಂದಿಸಿಕೊಂಡಿದ್ದಾರೆ. ಸರಳರಗಳೆಯನ್ನು ಮೊದಲಿಂದಲೂ ತಮ್ಮ ಕೆಲಸಕ್ಕೆ ದುಡಿಸಿಕೊಂಡಿದ್ದಾರೆ. ಅದರ ಬನಿ, ಬಿಗಿಪು ಒಂದೊಂದು ಕಡೆ ಸಾಲದೆನ್ನುವವರುಂಟು. ಮಾತುಗಳ ಶಯ್ಯೆಯಲ್ಲಿ ಅಲ್ಲಲ್ಲಿ ಸಡಿಲಕಾಣವುದುಂಟು; ಸಾಲುಗಳಿಗಾಗಿ ಆಯ್ದು ಸೇರಿಸುವ ಪದಗಳಲ್ಲಿ ಅಗತ್ಯಕ್ಕೆ ತಕ್ಕ ಧಡುವತಿ ಇಲ್ಲದೆ ಇರಬಹುದು. ಆದರೆ ಕೃತಿಯ ಕಾರ್ಯಕ್ಕೂ ರಸಸಾಧನೆಗೂ ವಿರೋಧವಾಗುವಷ್ಟು ಇದೆಯೆಂದರೆ ನಾನು ಒಪ್ಪಲಾರೆ. ಸರಳರಗಳೆಯಲ್ಲಿ ಕಥನಕವನವನ್ನು ಸಾಮಾನ್ಯರೀತಿಯಲ್ಲಿ ಮೊದಲುಮಾಡಿ ಅಗತ್ಯಕ್ಕೆ ತಕ್ಕಂತೆ ಬೆಳಸುತ್ತಾರೆ. ಅತಿ ಉನ್ನತಿಗೆ ಎತ್ತದೆ, ಅತಿ ಗದ್ಯತೆಗೆ ಇಳಿಸಿ ನೆಲದಲ್ಲಿ ಉರುಳಾಡಿಸದೆ ಅವರ ಸರಳ ರಗಳೆ ಸಹಜ ವಾಗಿ ನಡೆಯುತ್ತದೆ. ಅದರ ಓಟವನ್ನೂ ಜೀವನಧರ್ಮವನ್ನೂ ಅರಿತು ಕೊಂಡವರು ಆ ಕೃತಿಗಳನ್ನು ಓದಬೇಕಾದ ರೀತಿಯಲ್ಲಿ ಓದಿದರೆ — ಇದು ಅಗತ್ಯ — ಅಲ್ಲಿ ಲಯದ ರಮ್ಯತೆಯನ್ನು ಕಾಣಬಹುದು. ಅಲ್ಲಿ ಅರ್ಥ ಭಾವ ಮತ್ತು ಯತಿವಿಲಾಸ ಇವೆ. ರಚನೆಯ ವಿಚಕ್ಷಣೆಯಿದೆ. ಘಟ್ಟದಿಂದ ಘಟ್ಟಕ್ಕೆ ಕಥಾಕ್ರಿಯೆಯನ್ನು ಮುಂದುವರಿಸುವ ಜಾಣ್ಮೆಗೆ ಹೊಂದಿಕೊಂಡು ನಡೆಯುವ ಚಿತ್ರಗಳ, ಸಂವಾದಗಳ, ವರ್ಣನೆಗಳ ಸೊಗಸು ಸೌಹಾರ್ದದಿಂದ

ಓದಿದರೆ ಮಾತ್ರ ಗೊತ್ತಾಗುವುದು. ಅದನ್ನು ಛಂದಸ್ಸು ಪ್ರತಿಫಲಿಸುವುದು. 'ಯಶೋಧರಾ' ನಾಟಕದಲ್ಲಿ ಅವರು ಸರಳ ರಗಳೆಯಿಂದ ಉತ್ತಮವಾದ ಕೆಲಸ ಮಾಡಿಸಿ ಗೆದ್ದಿದ್ದಾರೆ. ಅವರು ಇತರ ಬಗೆಯ ೮–೧೦ ಸಾಲಿನ ಪದ್ಯಗಳನ್ನೂ ಷಟ್ಪದಿ ಕಂದ ವೃತ್ತಗಳನ್ನೂ ಬರೆದಿದ್ದಾರೆ. ಹೆಚ್ಚು ಸಾಲಿನ ರಚನೆಯಲ್ಲಿ ಅವರು ಕೃತಕೃತ್ಯರಾಗಿರುವುದು 'ಸಾನ್ನೆಟ್' ಎಂಬ ೧೪ ಸಾಲಿನ ಪದ್ಯಗಳಲ್ಲಿ. ಅರ್ಥಭಾವಗಳ ಬಂಧುರತೆ, ರಚನಾ ಸಂಪುಷ್ಟಿ, ನಾದ ಲಯಗಳ ಬಿಗಿಕಟ್ಟು, ಸಮರಸತೆ, ಹೂಟ ಇವನ್ನು ಸಾಧಿಸುವದರಲ್ಲಿ ಅವರ ೧೦-೨೦ ಸಾನ್ನೆಟುಗಳು ಶ್ರೇಷ್ಠವರ್ಗಕ್ಕೆ ಸೇರಬಲ್ಲವು.

ನಾಟಕಗಳಲ್ಲಿಯೂ 'ಬಿನ್ನಹ' 'ಅರುಣ' 'ಮನವಿ' ಮುಂತಾದ ಪದ್ಯ ಸಂಕಲನಗಳಲ್ಲಿಯೂ ಹಾಡುಗಳಿವೆ. ಆ ಎಲ್ಲೆಲ್ಲಿಯೂ ಮೃದುವಾದ ಕೋಮಲವಾದ ಮನೋವೃತ್ತಿಯ ಸಂಚಾರ ಕಾಣಿಸುವುದು. ರಾಣಿಯ ಮನೆ, ಮೋಹ, ನಿರೀಕ್ಷೆ, ತೆಂಗಾಳಿ, ಪ್ರಾಚೀ ಸುಂದರಿ, ಕಾವೇರಿ, ಕಾಕನ ವನಗೀತೆ, ವೈಶಾಖದಲ್ಲಿ, ಪ್ರಾರ್ಥನಾಗೀತಗಳು ಮುಂತಾದ ಹಲವು ಹಾಡುಗಳು ಮೇಲ್ತರದವು. ಮನಸ್ಸಿನಲ್ಲಿ ಬಹುಕಾಲ ನಿಶ್ಶಬ್ದವಾಗಿ ನೆಲಸಿ ಸಂತೋಷ ಕೊಡುವಂಥವು. ಹಲವು ನಿದರ್ಶನಗಳನ್ನು ಕೊಡಬಹುದಾದರೂ ಇಲ್ಲಿ ಅವಕಾಶವಿಲ್ಲ. ಕಾಕನ ಹಾಡಿನ ಸೊಗಸು ಷೇಕ್ಸಪಿಯರ್ 'ಟೆಂಪೆಸ್ಟ್' ನಾಟಕದಲ್ಲಿನ ಏರಿಯೆಲ್ ಹಾಡಿನಂತೆ ಇದೆ. ದುಂಬಿ ಹೂವಿನ ಸಚಿತ್ರ ಅದರ ಸೊಬಗಿಗೆ ಸೊಕ್ಕಿ ಅದರ ಆಸ್ವಾದನೆಗೆ ಹೇಗೆ ಜೇಂಕರಿಸುವುದೋ ಹಾಗೆ ಅವನು ತನ್ನ ವನಶೋಭೆಗೆ ಸೊಕ್ಕುತ್ತಾನೆ. ಮಧುವನ್ನು ಸವಿದು ದುಂಬಿ ಹೇಗೆ ತೃಪ್ತವಾಗಿ ಮೆರೆಯುವುದೋ ಹಾಗೆಯೇ ತೃಪ್ತನಾಗಿ ಮೆರೆಯುತ್ತಾನೆ. ಆ ಚಿತ್ರಗಳ ತುಂಬು ಬಲುಸೊಗಸು. ಆ ವಸ್ತುಪ್ರಪಂಚ ನಮ್ಮ ಕಣ್ಣೆದುರಿಗೆ ನಿಲ್ಲುತ್ತದೆ. ಕಾಕನಂತೆ ಶ್ರೀನಿವಾಸರು ಚೆಲುವಿನ ಸುಖ ಸೌಭಾಗ್ಯಗಳ ಆರಾಧಕರು, ಕಾವಲವರು. ಆ ಬಗೆಯ ಸೌಭಾಗ್ಯದ ಭೋಗಿಗಳು.

---

# F⁶ ಆರೋಹಣ

ದಿ ಅಸೆಂಟ್ ಆಫ್ F⁶ ( The Ascent of F⁶ ) ಎಂಬುದು ೧೯೩೬ರಲ್ಲಿ ಬರೆದ ಒಂದು ಇಂಗ್ಲಿಷ್ ನಾಟಕ. ಅದನ್ನು ಬರೆದವರು ಹೆಸರಾದ ಇಬ್ಬರು ಇಂಗ್ಲಿಷ್ ಸಾಹಿತಿಗಳು. (೧) ಡಬ್ಲ್ಯು. ಎಚ್. ಆಡೆನ್ ಎಂಬವರು ಹೆಸರಾದ ಕವಿಗಳು. (೨) ಸಿ. ಐಷರ್‌ವುಡ್ ಎಂಬವರು ಒಳ್ಳೆಯ ಕಾದಂಬರಿಕಾರರು. ಇಬ್ಬರೂ ಸೇರಿ ಈ ನಾಟಕವನ್ನು ಬರೆದಿದ್ದಾರೆ. ಇದಲ್ಲದೆ, "ಆನ್ ದಿ ಫ್ರಾಂಟಿಯರ್" ಮತ್ತು "ದಿ ಡಾಗ್ ಬಿನೀತ್ ದಿ ಸ್ಕಿನ್" ಎಂಬ ಇನ್ನೆರಡು ನಾಟಕಗಳು ಇವರಿಬ್ಬರೂ ಕೂಡಿ ರಚಿಸಿದವು. ಇವರು ಚುರುಕಾದ ಬುದ್ಧಿಶಕ್ತಿಯುಳ್ಳವರು. ನಾಟಕದ ಮೂಲಕ ಬದುಕಿನ ಒಂದು ಹೊಸ ದರ್ಶನವನ್ನು ತೋರಿಸಬೇಕೆಂದೂ ಹಲವು ಬಗೆಯ ನಡವಳಿಕೆಗಳನ್ನು ವಿಮರ್ಶೆಮಾಡಬೇಕೆಂದೂ ಈ ನಾಟಕ ಕರ್ತೃಗಳಿಗೆ ಉದ್ದೇಶ ಇರುವಂತೆ ಸ್ಪಷ್ಟಪಡುತ್ತದೆ. ನಾಟಕಕ್ಕೂ ಅಲ್ಲಿ ವರ್ಣಿತವಾಗಿರುವ ಜನಗಳಿಗೂ ಸಂಬಂಧಪಟ್ಟಂತೆ ಚಿತ್ರಗಳು ಜೀವಂತವಾಗಿರುತ್ತವೆ. ಮೊದಲಿಂದ ಕಡೆಯವರೆಗೂ ಮುಂದೇನು ನಡೆಯುತ್ತದೆ ಎಂಬ ಆಸಕ್ತಿ ಊರುತ್ತದೆ. ನಾನಾ ಬಗೆಯ ಹಾಡು, ವಿನೋದ, ಮಾತುಕತೆ, ಮೇಳ, ನರ್ತನ ಮುಂತಾದವೂ ಇವರ ನಾಟಕಗಳಲ್ಲಿ ಬರುವುವು. ಒಟ್ಟಿನಲ್ಲಿ ಇಲ್ಲಿನ ದೃಷ್ಟಿ ಬದುಕಿನ ಒಂದು ಬಗೆಯ ನಾಟಕೀಯವಾದ ವಿಮರ್ಶೆ. ತತ್ವವನ್ನು ಕುರಿತ ಒಣ ವಿಮರ್ಶೆ ಅಲ್ಲ. ಈ ವಿಮರ್ಶೆ ನಾಟಕದಲ್ಲಿ ತೋರಿಸುವ ಸಂಗತಿಗಳೊಳಗೆ, ಆ ಮೂಲಕ, ರೂಪಗೊಂಡು ಕಾಣುತ್ತದೆ. ಇಂಥ ಜನರೂ ಇಂಥ ಕಾರ್ಯಗಳೂ ಇಂಥ ಆಸೆ ಆಕಾಂಕ್ಷೆಗಳೂ ಲೋಕದಲ್ಲಿ ಇಂದು ಎಲ್ಲೆಲ್ಲಿಯೂ ಕಾಣುವಂಥವೇ ಹೌದು. ಕೇವಲ ಕಾಲ್ಪನಿಕವಲ್ಲ.

೧

ಈ ನಾಟಕದಲ್ಲಿ ಸೂಡೋಲ್ಯಾಂಡ್ ಇಂಗ್ಲಿಷರಿಗೆ ಸೇರಿದ ಒಂದು ವಸಾಹತು ( Colony ). ಅಲ್ಲಿನ ಜನ 'ಅನಾಗರಿಕರು.' ಇಂತಹ ಹಲವಾರು ನಾಡುಗಳನ್ನು ಇಂಗ್ಲಿಷರೂ ಅವರಂತಹ ಇತರ ಬಿಳಿಯ ಜನರೂ

ತಮ್ಮ ವಶದಲ್ಲಿ ಇಟ್ಟುಕೊಂಡು ಆಳುತ್ತಾರೆ. ಇಂಥವುಗಳಿಂದಲೇ ಅವರ ಸಾಮ್ರಾಜ್ಯ. ಅವನ್ನು ದುಡಿಸಿ ಅವುಗಳಿಂದ ಪ್ರಯೋಜನ ಪಡೆಯುತ್ತಾರೆ. ಅವುಗಳಿಗಾಗಿ ತಮ್ಮ ತಮ್ಮಲ್ಲಿ ಕಾದಾಡುತ್ತಾರೆ. ಸೂಡೋಲ್ಯಾಂಡಿನ ಗಡಿ ಪ್ರಾಂತ ಒಂದು ಬೆಟ್ಟಸಾಲು. ಆ ಪ್ರದೇಶವನ್ನು ಇಂಗ್ಲಂಡಿಗೆ ತೆಗೆದುಕೊಳ್ಳಬೇಕೆ ಅದನ್ನು ಯೂರೋಪಿನ ಆಸ್ಟ್ವಿಯಾ ( ಒಂದು ಕಲ್ಪಿತ ಹೆಸರು ) ದೇಶಕ್ಕೆ ಸೇರಲು ಬಿಡಬೇಕೆ ಎಂಬ ಸಂಬಂಧದಲ್ಲಿ ಕಾರ್ಯ ಫಲಿಸಿದುದು ಇಲ್ಲಿ ಕಥಾವಸ್ತು. ಈ ಎರಡು ರಾಷ್ಟ್ರಗಳಿಗೂ ಅದಕ್ಕಾಗಿ ಸ್ಪರ್ಧೆ ಇರುವಂತೆ ವರ್ಣನೆ ಇದೆ. ಯಾರು ಮೊದಲು ಆ ಬೆಟ್ಟಸಾಲಿನ ಅತಿ ಎತ್ತರದ F6 ಶಿಖರ ಪ್ರದೇಶವನ್ನು ವಶಪಡಿಸಿಕೊಳ್ಳುತ್ತಾರೋ ಅವರಿಗೆ ಸುತ್ತುಮುತ್ತಲೆಲ್ಲ ಸಾಮ್ರಾಜ್ಯ ದೊರಕುವುದೆಂದು ತಿಳಿವಳಿಕೆ, ನಂಬಿಕೆ ಇದೆ. ಇದು ಹಿನ್ನೆಲೆ.

F6 ಶಿಖರವನ್ನು ಹತ್ತುವುದು ಬಹು ಕಷ್ಟ. ಹತ್ತಲು ಪ್ರಯತ್ನಪಟ್ಟವರು ಯಾರೂ ಈವರೆಗೆ ಕೃತಾರ್ಥರಾಗಿಲ್ಲ. ದುಸ್ಸಾಧ್ಯವಾದ ಈ ಕಾರ್ಯವನ್ನು ಮಾಡಲು ಸಾಮಾನ್ಯ ಆರೋಹಕರಿಗೆ ಧೈರ್ಯ ಸಾಲದು. ಆದುದರಿಂದ ಅದು ಎಲ್ಲ ಆರೋಹಿಗಳ ಕನಸು. ಇಂತಹ ಸನ್ನಿವೇಶದಲ್ಲಿ ಅದನ್ನು ಮೈಕಲ್ ರ್‍ಯಾನ್‌ಸಮ್ ಎಂಬಾತ ತನ್ನ ನಾಲ್ವರು ಜೊತೆಗಾರರೊಡನೆ ಏರುತ್ತಾನೆ. ಜೊತೆಯವರಲ್ಲಿ ಒಬ್ಬ ಹೊರತು ಉಳಿದವರೆಲ್ಲ ಈ ಪ್ರಯತ್ನದಲ್ಲಿ ಸಾಯುತ್ತಾರೆ. ಮೈಕಲ್‌ಗೆ ಪ್ರೇರೇಪಣೆ ಹೇಗೆ ಬಂದಿತು ? ನಿಶ್ಚಯ ಏಕೆ ಉಂಟಾಯಿತು ? ಅದಕ್ಕಾಗಿ ನಡೆದ ಪ್ರಯತ್ನದ ಸ್ವರೂಪವೇನು ? ಆರೋಹಣದ ವಿವರಗಳಾವುವು ? ಸಾಧಿಸಿದ ಪ್ರಯೋಜನವೊ ಅಪ್ರಯೋಜನವೊ ಎಂಥದು ? ಈ ಎಲ್ಲ ಸಂಬಂಧದಲ್ಲಿಯೂ ಅದನ್ನು ಏರಿದ ಮೈಕಲ್ ರ್‍ಯಾನ್‌ಸಮ್ ಮನಸ್ಸು, ಚಾರಿತ್ರ, ಗೆಲವು, ಸೋಲು ಎಂತಹವು ಎಂಬುದನ್ನು ಈ ನಾಟಕ ಚಿತ್ರಿಸುತ್ತದೆ. ಜೊತೆಗೆ ಸಾಮಾನ್ಯರ ಆಸೆ ಅಗತ್ಯಗಳಿಗೂ ಈ ಸಾಹಸಿಗಳ ಮತ್ತು ಶ್ರೀಮಂತ ಜೀವನಕ್ಕೂ ಇರುವ ವ್ಯತ್ಯಾಸವು ವ್ಯಂಗ್ಯಚಿತ್ರವಾಗಿ ರೂಪಿತವಾಗುವುದು. ‘ A ’ ದಂಪತಿಗಳ ಸಂಭಾಷಣೆ ನಾಟಕಕ್ಕೆ ಒಂದು ಸಂತತ ವ್ಯಾಖ್ಯಾನದಂತೆ ಮೇಳರೂಪದಲ್ಲಿ ಏರ್ಪಡುವುದು. ಸಂತೋಷ ಸುಖಗಳಿಲ್ಲದ ಅವರ ಜೀವನ ಮುಖ್ಯ ನಾಟಕದ ಕ್ರಿಯೆಯನ್ನು ಅಣಕಿಸುವಂತೆ, ಹಳಿಯುವಂತೆ ಇರುವುದು. ನಾಟಕದಲ್ಲಿ ಹಲವು ವಿಷಮ ವಿರಸಚಿತ್ರಗಳ ರೂಪಣವಿದೆ.

೨

ಬರಿಯ ಒಂದು ಬೆಟ್ಟ ಹತ್ತುವುದು ಇಲ್ಲಿ ಮುಖ್ಯವಲ್ಲ. ಅದರ ಹಿಂದೆ ಎರಡು ಆಶಯಗಳಿವೆ. ಒಂದು ರಾಜಕೀಯ, ಇನ್ನೊಂದು —ಇತರಾರಿಗೂ ತಿಳಿಯದೆ — ನಾಯಕನಲ್ಲಿಯೇ ಕಾರ್ಯಮಾಡುವ ಅಂತಃಪ್ರವೃತ್ತಿ. ರಾಜಕೀಯ ಹೊರಗೆ ವಿಜೃಂಭಿಸುತ್ತದೆ. ನಾಯಕನ ಆವೇಶ ಹಿಂದೆ ಅಡಗಿದ್ದರೂ ಅದೇ ಒಳಗೆ ಕಾರ್ಯಮಾಡುವ ದುರ್ದಮ್ಯ ಶಕ್ತಿ. ಅದರ ಪರಿವಾರವಾಗಿ ಇತರ ಲೌಕಿಕ ಶಕ್ತಿಗಳೂ ಬಣ್ಣಗಳೂ ಬೆರೆಯುತ್ತವೆ. ಇವೆರಡೂ ಈ ನಾಟಕದಲ್ಲಿ ಹೇಗೆ ಚಿತ್ರಿತವಾಗಿವೆ ಎಂಬುದು ನಾಟಕತಂತ್ರಕ್ಕೆ ಸಂಬಂಧಿಸಿದ ಅಂಶ.

ಎರಡಂಕದ ನಾಟಕ ಇದು. ಇಷ್ಟವಿಲ್ಲದ ಮೈಕಲ್ ರ್‍ಯಾನ್‌ಸಮ್ ಈ ಕಾರ್ಯವನ್ನು ಕೈಗೊಳ್ಳಲು ಒಪ್ಪಿಕೊಂಡನು. ಹೇಗೆ ಎಂಬುದನ್ನು ಮೊದಲ ಅಂಕ ತೋರಿಸುವುದು. ಇದರಲ್ಲಿ ಮೂರು ದೃಶ್ಯಗಳಿವೆ. ಎರಡನೆಯ ಅಂಕದಲ್ಲಿ ಬೆಟ್ಟದ ಆರೋಹಣ. ದಾರಿಯಲ್ಲಿನ ಕಷ್ಟನಿಷ್ಠುರ, ಸಾವು, ಬೆಟ್ಟದ ಒಂದು ಪ್ರದೇಶದಲ್ಲಿ ವಾಸವಾಗಿದ್ದ ಒಂದು ಮಠದವರ ವಿಹಾರ, ಕಡೆಯಲ್ಲಿ ಮೈಕಲ್ ಸಾಧಿಸಿದ ಜಯ, ಶಿಖರದ ಮೇಲೆ ಅವನು ಸತ್ತುಬಿದ್ದ ದೃಶ್ಯ— ಇವನ್ನು ಕಾಣಿಸಿ ಸತ್ಯದ ಒಂದು ಹೆಚ್ಚು ದರ್ಶನವನ್ನು ತೋರಿಸಿ ನಾಟಕ ಮುಗಿಯುತ್ತದೆ. ಮನುಷ್ಯನ ಸ್ವಭಾವಕ್ಕೂ ಮೂಲಪ್ರವೃತ್ತಿಗಳಿಗೂ ಸಂಬಂಧಿಸಿದುದು ಕಡೆಯಲ್ಲಿ ಕಾಣಿಸುವ ಆ ಸತ್ಯದರ್ಶನ.

ಮೊದಲಂಕದ ಮೊದಲ ದೃಶ್ಯದಲ್ಲಿ ಏಕಾಂತದಲ್ಲಿ, ವಿವಿಕ್ತವಾದ ಒಂದು ಬಂಡೆಯ ಮೇಲೆ ಕುಳಿತು ಡಾಂಟೆ ಕವಿ ಬರೆದ ಗ್ರಂಥವನ್ನು ಮೈಕಲ್ ರ್‍ಯಾನ್‌ಸಮ್ ಓದುತ್ತಿದ್ದಾನೆ. ಎತ್ತರದಲ್ಲಿ ಕುಳಿತ ಅವನಿಗೆ, ಕೆಳಗೆ ದೂರದ ಕಣಿವೆ ಪ್ರದೇಶದಲ್ಲಿ, ಹಳ್ಳಿಗಳಲ್ಲಿಯೂ ಜನಸಂದಣಿಯಿರುವ ಪಟ್ಟಣಗಳಲ್ಲಿಯೂ ಜನಜೀವನ ಯಾವ ರೀತಿಯದು ಎಂಬುದು ಗೊತ್ತು. ನಗರಗಳಲ್ಲಿ ಅಶಾಂತಿ, ಅನ್ಯಾಯ, ಮೋಹ, ರಾಗದ್ವೇಷ; ಹಳ್ಳಿಗಳಲ್ಲಿ ಅಜ್ಞಾನ; ಪಶುಜೀವನಕ್ಕಿಂತ ಹೆಚ್ಚು ಮೇಲಲ್ಲದ ದೈಹಿಕಜೀವನ. ಇವಕ್ಕಿಂತ ಮೇಲ್ಮಟ್ಟದ ಬದುಕು ಎಲ್ಲಿಯೂ ಇಲ್ಲ. ಈ ಎರಡಕ್ಕೂ ಮೀರಿದ ಬುದ್ಧಿ

ಶಕ್ತಿ, ಯೋಚನೆ, ಧರ್ಮಪ್ರವೃತ್ತಿ, ವಿವೇಚನಾಶಕ್ತಿ, ಆದರ್ಶ - ಉಳ್ಳವನು ಅವನು. ಡಾಂಟೆ ಪುಸ್ತಕದಲ್ಲಿ ಯೂಲಿಸಿಸ್ ತನ್ನ ಜೊತೆಯವರನ್ನು ಕುರಿತು ಧರ್ಮ, ಜ್ಞಾನ ಎಂಬ ಎರಡು ಮಾತುಗಳನ್ನು ಪ್ರಯೋಗಿಸಿದುದನ್ನು ಓದಿದ ಕೂಡಲೇ ಅವನಿಗೆ ಜುಗುಪ್ಸೆಯೂ ಕೋಪವೂ ಬರುತ್ತವೆ. ನಿಜವಾಗಿ ಯೂಲಿಸಿಸಿಗಾಗಲಿ, ಆ ಗ್ರಂಥವನ್ನು ಬರೆದ ಡಾಂಟೆಗಾಗಲಿ ಆ ಮಾತು ಗಳನ್ನು ಬಳಸಲು ಅಧಿಕಾರವಿಲ್ಲ ಎನ್ನುತ್ತ ಅವರಿಬ್ಬರ ಜೀವನದ ಸಂಗತಿ ಗಳನ್ನೂ ಸನ್ನಿವೇಶವನ್ನೂ ನೆನೆದು ಟೀಕಿಸುತ್ತಾನೆ. ಹಾಗೆಯೇ ಯೋಚನೆ ಬೆಳೆಯುತ್ತದೆ; ಜ್ಞಾನ, ಧರ್ಮ ಎಂಬ ಮಾತುಗಳು ಅಯೋಗ್ಯರ ಬಾಯಿಗೆ ಸಿಕ್ಕಿವೆ; ಅವನ್ನು ಬಳಸುವವರಿಗೆ ಅವುಗಳಲ್ಲಿ ನಂಬಿಕೆ ಇಲ್ಲ; ಶ್ರದ್ಧೆ ಇಲ್ಲ; ಪುಸ್ತಕಗಳಲ್ಲಿಯೊ ವಾದಗಳಲ್ಲಿಯೊ ಮತದವರ ಉಪದೇಶ ಸಮಯಗಳಲ್ಲಿ ಮಾತ್ರವೊ ಸ್ಪರ್ಧೆಗಳಲ್ಲಿ ಹುಡುಗರಿಗೆ ಬಹುಮಾನ ಹಂಚುವಾಗಲೊ ಇನ್ನೊಬ್ಬರಿಂದ ದುಡಿಸಿಕೊಳ್ಳಬೇಕಾದಾಗಲೊ ಅವಕ್ಕೆ ಬೆಲೆಯೇ ಹೊರತು ನಿಜವಾಗಿ ಜ್ಞಾನಧರ್ಮಗಳ ಅರಿವಾಗಲಿ, ಪ್ರಭಾವವಾಗಲಿ ಜೀವನದಲ್ಲಿ ಇಲ್ಲ—ಎನ್ನುತ್ತ ನಿಟ್ಟುಸಿರು ಬಿಡುತ್ತಾನೆ. ಧರ್ಮವಂತೆ! ಜ್ಞಾನವಂತೆ! ಇವರಿಗೆ ಫಲಿಸಬೇಕಾದುದು ಶಕ್ತಿ, ಪ್ರಭಾವ ಎನ್ನುತ್ತ ಸಿಡುಕುತ್ತಾನೆ. ಲೋಕಸ್ವಭಾವವನ್ನು ನೋಡಿದರೆಯೋ ಅವನ ಕಣ್ಣಿಗೆ ಎಲ್ಲೆಲ್ಲಿಯೂ ದುಃಖ, ಪಾಪ, ಅನ್ಯಾಯ, ದುರ್ಬಲರ ಶೋಷಣ ತುಂಬಿವೆ.

ಧರ್ಮಕ್ಕೆ ವಿರೋಧವಾಗಿ ಬಾಳನ್ನು ಮೋಹಗೊಳಿಸಲು ಹೊರತಳುಕಿನ ಸಾವಿರ ಮೋಹಗಳೂ ಪ್ರಚೋದನೆಗಳೂ ಹುಟ್ಟಿಕೊಳ್ಳುವುವು. ಎಂದಿಗೆ ಬಿಡುಗಡೆಗೊಂಡೇನೆಂದು ಇವುಗಳ ಸೆರೆಯಲ್ಲಿ ಮಾನವಜೀವನ ಏದುವುದು, ನಾನೂ ಇದಕ್ಕೆ ಹೊರತಲ್ಲ, ಹುಟ್ಟದಿರುವುದು ಮೇಲು, ಹುಟ್ಟಿದಿದ್ದಲ್ಲಿ ಅಥವಾ ಬೇಗ ತೀರಿಕೊಂಡರೆ, ಈ ಎಲ್ಲ ಅನ್ಯಾಯ ದೌರ್ಜನ್ಯಗಳಿಂದಲೂ ತಪ್ಪಿಸಿಕೊಳ್ಳಬಹುದು ಎನ್ನಿಸುತ್ತಿದೆ. ಮುಂದೆ ಬೆಳೆಯುವ ನಾಟಕ, ಕ್ರಿಯೆ ಈ ಚಿತ್ರದ ನಿದರ್ಶನವೆಂಬಂತಿದೆ. ಈ ಸಮಯದಲ್ಲಿ ಅವನ ಸ್ನೇಹಿತರು ಕೆಳಗಿಂದ ಅವನನ್ನು ಕೂಗಿ ಕತ್ತಲಾಗುವ ಮುಂಚೆ ಇಳಿಸಿ ಕರೆದುಕೊಂಡು ಹೋಗುತ್ತಾರೆ. ಲೋಕದ ಕರೆ, ಮೋಹನ, ಆಸುರೀವ್ಯವಹಾರಕ್ಕೆ ಪ್ರತಿನಿಧಿ ಗಳಾಗಿ ಆತನ ಸೋದರ ಜೇಮ್ಸ್ ಮತ್ತು ಅವನ ಸಂಗಡಿಗರು ನಿಲ್ಲುತ್ತಾರೆ.

ತೆರೆ ಬಿದ್ದ ಕೂಡಲೆ 'A' ದಂಪತಿಗಳ ಮೇಳಚಿತ್ರ: ಹೆಂಡತಿ

ಬೇಸತ್ತು ಸಂಜೆ ಗಂಡ ಬರುವುದಕ್ಕಾಗಿ ಕಾದಿದ್ದಾಳೆ. ಅವರ ಬದುಕಿಗೆ ಯಾವ ಹೊಸತೂ ಬಾರದು. ಯಾವ ವಿಶೇಷವೂ ಇಲ್ಲ. ಯಾವ ಸೌಂದರ್ಯ ಸಾಹಸಗಳೂ ಲಭ್ಯವಲ್ಲ. ಅವರು ಕೇಳುವ ಯಾವ ರೇಡಿಯೊ ವೃತ್ತಾಂತ ದಲ್ಲಿಯೂ ಓದುವ ಯಾವ ವರದಿಯಲ್ಲಿಯೂ ತಿರುಳಿಲ್ಲ. ಎಲ್ಲೂ ಮಾತು, ಮಾತು, ಮಾತು: ರಾಜಕೀಯದ ಮಾತು, ಸಂಧಾನ, ಷರತ್ತು, ಮಾನ, ಕಲಹಗಳ ಮಾತು. ಸಾಮಾನ್ಯ ಜನದ ಜೀವನಕ್ಕೂ ಅವರ ಬದುಕನ್ನು ಹೆಚ್ಚು ಸುಲಭವಾಗಿ, ಹೆಚ್ಚು ಸುಖವಾಗಿ ಮಾಡಲೂ — ಯಾವ ಪ್ರಯತ್ನವೂ ಎಲ್ಲಿಯೂ ಇಲ್ಲ. ಅವರನ್ನು ಒಲಿಸಿಕೊಳ್ಳುವುದು ಯುದ್ಧ ಸಮಯಗಳಲ್ಲಿ ಮಾತ್ರ. ದುಡಿಯುವುದಕ್ಕೆ ಬೇಕಾದರೆ ಅವರು; ಹೆತ್ತ ಮಕ್ಕಳನ್ನು ಬಲಿಕೊಡುವುದಕ್ಕೆ ಅವರು. ಅವರ ಮುಖದ ಮೇಲೆ ಒಂದು ಕಿರುನಗೆ ಸುಳಿಯುವಹಾಗಿಲ್ಲ. ತಮ್ಮ ಜನವನ್ನು ಕುರಿತು ಒಂದಂಶದಲ್ಲಿ ಹೆಮ್ಮೆಪಡುವಂತಿಲ್ಲ. ಕನಸಿನಲ್ಲಿಯಾದರೂ ಮಾಡಿ ಹರ್ಷಪಡುವಂತಹ ಒಂದು ವಿಶೇಷವಿಲ್ಲ. ತಮ್ಮ ಮನಸ್ಸಿನ ಸೆರೆಗಳಿಂದ ತಮ್ಮನ್ನು ಪಾರುಮಾಡಿಕೊಳ್ಳಲು ಒಂದು ಅವಕಾಶವಿಲ್ಲ. ಪಟ್ಟಣದ ಗೊಂದಲವನ್ನೂ ಒತ್ತಡಗಳನ್ನೂ ಬಿಟ್ಟು ಹೋಗಿ ಪ್ರಕೃತಿಯ ಶಾಂತವಾದ ರಮ್ಯಜೀವನದಲ್ಲಿ ಬೆರೆವ ಒಂದವಕಾಶವಿಲ್ಲ. ನಾಗರಿಕತೆ ದೊರಕಿಸಿರುವ ಯಾವುದಕ್ಕೆ ನಾವು ಕೃತಜ್ಞರಾಗಿರಬಹುದು? ಎಲ್ಲಕ್ಕೂ ಕಾಲ ಮೀರಿತು. ಲೋಕ ನಿರಾಶೆಗೊಂಡಿದೆ. ನಮ್ಮ ಜೀವ ಬರಡು, ಬೆಂಡು. ಬದುಕಲು ಸಂತೋಷವಿಲ್ಲ. ಅಂಥದೊಂದನ್ನು ಕೊಡಿ, ಬಹುಕಾಲ ಕಾದೆವು, ಇನ್ನು ಹೆಚ್ಚು ಕಾಲ ಕಾಯಲಾರೆವು ಎಂಬ ಕೂಗು ಇವರ ಮಾತಿನ ಸಾರ. ಇದು ನಾಟಕದ ಪಲ್ಲವಿಯಂತೆ ಇದೆ.

ಎರಡನೆಯ ದೃಶ್ಯ ವ್ಯವಹಾರ ಚಿತ್ರ: ವಸಾಹತು ಕಚೇರಿಯಲ್ಲಿ ನಡೆಯುತ್ತದೆ. ಮುಂದಿನದು ಮೈಕಲ್ ಮನೆಯಲ್ಲಿನ ದೃಶ್ಯ. ಅವನ ನಾಲ್ವರು ಸಂಗಡಿಗರ ಸ್ವಭಾವವನ್ನು, ಅವರಲ್ಲಿ ಪರಸ್ಪರ ಇರುವ ವಿಶ್ವಾಸದ ಕಟ್ಟನ್ನು ಅದು ತೋರಿಸುತ್ತದೆ. ಅಣ್ಣನು ಬಂದದ್ದು ತಮ್ಮನಿಗೆ ಇಷ್ಟವಿಲ್ಲ. ಚಿಕ್ಕಂದಿನಿಂದ ಹೀಗೆಯೇ. ಯಾವುದೋ ಕಾರ್ಯಕ್ಕಾಗಿ ತನ್ನನ್ನು ಹೊಂದಿಸಲೊ ದುಡಿಸಲೊ ಎಂದಿನಂತೆ ಇಂದೂ ಬಂದಿದ್ದಾನೆಂದು ಅವನ ನಿಜವಾದ ಊಹೆ. ಬಂದ ಕೆಲಸವನ್ನು ಹೇಳಿದ ಮೇಲಂತೂ ಅವನಿಗೆ ಒಳ ಉದ್ದೇಶ ಅರ್ಥವಾಗುವುದು. ಪ್ರತಿಷ್ಠೆ, ರಾಜತಂತ್ರ, ಹಣ, ಪ್ರಯೋಜನ — ಇವಕ್ಕೆ

ಸಂಬಂಧಿಸಿದ ಯಾವುವೋ ಅರ್ಥಗಳು ಅವನ ಪ್ರತಿ ಮಾತಿನ ಹಿಂದೆಯೂ ಇರುವುವೆಂದು ಗೊತ್ತು. "ನಮ್ಮಿಬ್ಬರ ಪ್ರಪಂಚ ಬೇರೆ ಬೇರೆ, ನಿನ್ನದರಲ್ಲಿ ನೀನಿರು, ನನ್ನದರಲ್ಲಿ ನಾನಿರುತ್ತೇನೆ" ಎನ್ನುವನು. ಇದಕ್ಕುತ್ತರವಾಗಿ ಜೇಮ್ಸ್ ಅವನ ಮನಸ್ಸನ್ನು ಮೋಹಿಸುವ ಮಾತನಾಡುವನು. "ಬ್ರಿಟಿಷ್ ಸರಕಾರದ ಪರವಾಗಿ ನೀನು ಒಂದು ಬಹು ಮುಖ್ಯವಾದ ಉಪಕಾರ ಮಾಡ ಬೇಕು ಎಂದು ನಾನು ಕೇಳುತ್ತಿರುವುದು; ನೀನು ಒಪ್ಪುವುದಿಲ್ಲವೆಂದು ನನಗೆ ಗೊತ್ತು; ನನ್ನಲ್ಲಿ ಅಪನಂಬಿಕೆ ನಿನಗೆ; ಆದರೆ ಈಗ ನಿನಗೆ ಒದಗು ತ್ತಿರುವುದು ಒಂದು ದೊಡ್ಡ ಅವಕಾಶ; ನಿನ್ನ ಒಟ್ಟು ಬದುಕಿನಲ್ಲಿಯೇ ಇಂಥದು ಬಹುದೊಡ್ಡದು; ನಿನ್ನ ಮನಸ್ಸಿಗೆ ಪ್ರಿಯವಾದ್ದನ್ನೇ ಈಗ ಮಾಡಬಹು ದಾಗಿದೆ. F⁶ ಹತ್ತುವುದಕ್ಕೆ ಒಂದು ಸಾಹಸಿಗರ ತಂಡವನ್ನು ತೆಗೆದುಕೊಂಡು ಹೋಗು" ಎನ್ನುವನು.

ಪರ್ವತಾರೋಹಣದ ಮೋಹ ಅವನ ವ್ಯಸನ. ಆದ್ದರಿಂದ ರ್‍ಯಾನ್‌ಸಮ್ ಮನಸ್ಸನ್ನು ಅಣ್ಣನ ಮಾತು ಸ್ವಲ್ಪ ಕಲಕುವುದು. ಇಂಗ್ಲಂಡಿನ ಭವಿಷ್ಯವೂ ಬ್ರಿಟಿಷ್ ಸಾಮ್ರಾಜ್ಯದ ಭವಿಷ್ಯವೂ ಹಲವು ರಾಜಕೀಯ ಪ್ರಯೋಜನಗಳೂ ಇವರ ಮೇಲೆ ನಿಂತಿವೆ ಎಂದಾಗ "ನಿನ್ನ ಪುರೋಭಿವೃದ್ಧಿಯೂ ಇದರೊಡನೆ ಸೇರಿಕೊಂಡಿಲ್ಲವೆ? ಎಲ್ಲಕ್ಕಿಂತ ಹೆಚ್ಚು ತೂಕ ಅದರದಲ್ಲವೆ?" ಎಂದು ಮೈಕಲ್ ಕೇಳಿ, "F⁶ ನನಗೆ ದೊಡ್ಡದು ನಿಜ; ಆದರೆ ಈಗ ಹೀಗೆ ಹೋಗಲು ನನಗೆ ಒಪ್ಪಿಕೆಯಿಲ್ಲ" ಎನ್ನುತ್ತಾನೆ.

ಮುಂದೆ ಇಸಬೆಲ್ ಎಂಬಾಕೆ ಬ್ರಿಟಿಷ್ ಮಹಿಳೆಯರೆಲ್ಲರ ಪರವಾಗಿ ಮಾತ ನಾಡುವಳು. ಈ ಕಾರ್ಯವನ್ನು ಸಾಧಿಸಿದರೆ ನಮ್ಮ ನಾಡಿನ ಮಹಿಳಾವರ್ಗವೆಲ್ಲ ನಿಮಗೆ ಕೃತಜ್ಞವಾಗಿರುವುದು, ಅವರ ವೀರಭಕ್ತಿ ನಿಮಗೆ ದೊರಕುವುದು ಎಂದು ಮೊರೆಯಿಡುವಳು. ಅವನು ಇನ್ನೂ ಒಲ್ಲೆನೆಂದಾಗ, "ಕಾರಣ ನನಗೆ ಗೊತ್ತು. ನೀವು ಹೆದರಿದ್ದೀರಿ" ಎನ್ನುವಳು. ಹೆಂಗಸು ಗಂಡಸನ್ನು ಕುರಿತು ಈ ಮಾತಾಡುವುದು ಗಂಡಸಿಗೆ ಕೆಣಕು ನುಡಿ; ಮೂದಲೆಯ ಚುಚ್ಚುನುಡಿ. ಅಂತಹ ಭಯ ತನ್ನಲ್ಲಿ ಬರಲಾರದು ಎಂದು ರ್‍ಯಾನ್‌ಸಮ್ ಹೇಳುವನು. ಇಲ್ಲಿಗೆ ಈ ಗುಂಪಿನ ಸ್ಟಾಗ್‌ಮ್ಯಾಂಟಲ್ ಎಂಬವನ ಸರದಿ ಬರುವುದು. ಲೋಕವ್ಯವಹಾರದ ಮಾತನ್ನು ಹೇಳಿ ಇವನನ್ನು ಒಪ್ಪಿಸಲು ಅವನು ಯತ್ನಿ ಸುವನು. "ನಾನು ನಿಮಗೆ ಇಂಗ್ಲಂಡಿನ ಹೆಸರಿನಲ್ಲಿಯೊ ಧ್ಯೇಯಗಳನ್ನು

ಸೂಚಿಸಿಯೊ ನುಡಿಯುತ್ತಿಲ್ಲ. ನಾನು ಲೌಕಿಕ ದೃಷ್ಟಿಯವನು, ಕಾರ್ಯಶೀಲನು. ನೀವೂ ಅಂಥವರೇ. ಇದನ್ನು ಏರುವುದರಿಂದ ಪ್ರಯೋಜನ ಉಂಟು. ಬೇಕಾದಷ್ಟು ಹಣ ಸಿಕ್ಕುತ್ತದೆ. ಆ ಹಣದಿಂದ ನಿಮ್ಮ ಸ್ವಂತ ಕಾರ್ಯಗಳನ್ನು ಮಾಡಿಕೊಳ್ಳಬಹುದು. ಈ ಸಾಹಸದಲ್ಲಿ ಕೇವಲ ರಾಜ ಕೀಯವಿದೆ. ಅದು ನಿಮಗೂ ಗೊತ್ತು, ನನಗೂ ಗೊತ್ತು. ಆ ಸಂಗತಿಯನ್ನು ಅಷ್ಟಾಗಿ ಹಚ್ಚಿಕೊಳ್ಳಬೇಡಿ. ಅಂತಹ ಕೊಳೆ ಕೆಲಸವನ್ನೆಲ್ಲ ನಿಮ್ಮ ಅಣ್ಣ, ನಾನು ಮಾಡುವೆವು. ನಮಗಭ್ಯಾಸವಿದೆ. ನಮ್ಮನ್ನು ಮರೆತುಬಿಡಿ. F⁶ಗೆ ಹೋಗಿ. ಅದರ ಸಂತೋಷಗಳೇನೊ ಆ ಎಲ್ಲವನ್ನೂ ಅನುಭವಿಸಿ. ಪರ್ವತಾ ರೋಹಣದ ಚರಿತ್ರೆಯಲ್ಲಿ ಅತ್ಯುನ್ನತ ಹೆಸರನ್ನು ಪಡೆಯಿರಿ. ಇನ್ನಿಪ್ಪತ್ತು ವರ್ಷ ವಯಸ್ಸು ಚಿಕ್ಕವನಾಗಿದ್ದರೆ ಜೊತೆಯಲ್ಲಿ ನನ್ನನ್ನೂ ಕರೆದುಕೊಂಡು ಹೋಗಿ ಎಂದು ನಾನೂ ಕೇಳುತ್ತಿದ್ದೆ" ಎನ್ನುವನು. ರ್‍ಯಾನ್‌ಸಮ್ ಇದಕ್ಕೆ ಉತ್ತರವಾಗಿ, "ನಾನು ಒಲ್ಲೆನೆನ್ನುವುದು ನಿಮಗೆ ಅರ್ಥವಾಗದು, ಒಲ್ಲೆ" ಎಂದು ತನ್ನ ನಿರ್ಣಯ ಹೇಳುವನು.

ಇಷ್ಟು ಹೊತ್ತಿಗೆ ಜೇಮ್ಸ್ ಏರ್ಪಾಟಿನಂತೆ ಇವರ ತಾಯಿ ಅಲ್ಲಿಗೆ ಬರು ವಳು. ತಾಯಿಗೂ ರ್‍ಯಾನ್‌ಸಮಿಗೂ ನಡೆವ ಸಂಭಾಷಣೆ ಈ ನಾಟಕದಲ್ಲಿ ಒಂದು ಉತ್ತಮವಾದ ಚಿತ್ರಖಂಡ, ಭಾವಖಂಡ. ತಾಯಪ್ರೇಮ ಸ್ವಾಭಿ ಮಾನ ಇಲ್ಲಿ ಬೆಸೆಯುವುವು. ಅವನ ಮನಸ್ಸು ಮುರಿಯುವುದು. ಆರೋಹಣ ವನ್ನು ಕೈಕೊಳ್ಳಲು ಅವನು ಒಪ್ಪುವನು. ಇನ್ನು ಮುಂದೆ ವೃತ್ತಪತ್ರಿಕೆಗಳ ವರು, ರೇಡಿಯೋದವರು ಈ ಸಮ್ಮತಿಯನ್ನೂ ಅದರ ಮಹತ್ವವನ್ನೂ ಬಗೆ ಬಗೆಯಲ್ಲಿ ಪ್ರಚಾರ ಮಾಡುವರು. ಸೂಡೋಲ್ಯಾಂಡ್ ವಿಚಾರ, ಮೈಕಲ್ ಯೋಗ್ಯತೆಯ ವಿಚಾರ, ಅವನ ವರ್ಣನೆ, ಚಾರಿತ್ರ್ಯ, ಸಾಧನೆ, ಅವನ ಸಾಹಸ, ಸಂಗಡಿಗರು, ಈ ಕಾರ್ಯದ ಹಿರಿಮೆಯ ವಿಚಾರ—ಇವೇ ಎಲ್ಲರ ಕಿವಿತುಂಬ, ಎಲ್ಲರ ಕಣ್ಣು ತುಂಬ. ಸ್ವಲ್ಪಕಾಲ ಎಲ್ಲರ ಮನಸ್ಸೂ—ಹಿಮ್ಮೇಳದ 'A' ದಂಪತಿಗಳದು ಕೂಡ— ಈ ಕಡೆ ಆಕರ್ಷಣೆಗೊಳ್ಳುತ್ತದೆ. ತಾಯಿ ತನ್ನ ಪ್ರೋತ್ಸಾಹದಲ್ಲಿಯೂ ಆಸೆ ಪ್ರೀತಿಗಳಲ್ಲಿಯೂ ಒಂದು ಕಡೆ "ನಿನ್ನ ಬಳಿಯೇ ನಾನಿದ್ದೇನೆ. ನಿನಗೆ ಸಹಾಯ ಮಾಡುತ್ತೇನೆ" ಎಂದರೆ ರ್‍ಯಾನ್‌ಸಮ್ ಉತ್ತರ ಇದು: "ನೀನಲ್ಲ, ಅಮ್ಮ; ನೀನಲ್ಲ ಕಡೆಗೆ ನನ್ನೊಡನಿದ್ದು ಕಾಪಾಡುವುದು; ಅದೊಂದು ಭೂತವಮ್ಮ". ಈ ಸಂಗತಿ ಮೊದಲಿಗೂ

ನಿಜ, ಕಡೆಗೂ ನಿಜ. ಇಲ್ಲಿಗೆ ಮೊದಲಂಕ ಮುಗಿಯಿತು.

ಎರಡನೆಯ ಅಂಕದ ನಾಲ್ಕು ದೃಶ್ಯಗಳಲ್ಲಿ ಆರೋಹಕರು ಹೊರಟದ್ದು, ಬೆಟ್ಟವನ್ನು ಹತ್ತಿದ್ದು ವರ್ಣಿತವಾಗುತ್ತದೆ. ದಾರಿಯ ನಡುವೆ ಸಿಕ್ಕಿದ ಮಠದ ಅಧಿಕಾರಿ ಇವನಿಗೆ ತೋರಿಸುವ ಒಂದು ಮಣಿಯ ಒಳಗೆ ಭೂತದ ಸ್ವರೂಪ ಕಾಣುತ್ತದೆ. ಈ ಭೂತ ಹೊರಗಿನ ಯಾವುದೂ ಅಲ್ಲ. ಅವರವರ ಮನಸ್ಸಿನ ಒಳಗೇ ಅಡಗಿ ಕೂತಿರುವ ಆಸೆ ಆಕಾಂಕ್ಷೆ, ಪ್ರತಿಷ್ಠೆ, ಭಾವಗಳ ಕಾಮನೆಯ ಪ್ರತಿರೂಪ. ಈ ಭೂತ ನಿಜ. ಅವರವರ ಸ್ವಭಾವಕ್ಕೆ ತಕ್ಕಂತೆ ಆಸೆಗೆ ತಕ್ಕಂತೆ ಅವರಿಗೆ ಕಾಣುತ್ತದೆ. ಕಾರ್ಯ ಮಾಡುತ್ತದೆ. ನಿನ್ನಂತಹ ತೊಡಕಾದ ಮತ್ತು ಸೂಕ್ಷ್ಮ ಸ್ವಭಾವದವನಿಗೆ ಭೂತ ಧರಿಸುವ ವೇಷಗಳು ಅತಿಸೂಕ್ಷ್ಮ. ಅದನ್ನು ಕನಸಿನಲ್ಲಿ ಕಾಣುವಂತೆ, ಒಂದು ಅಮೂರ್ತವಾದ ಭೀತಿ ಎನ್ನಲೆ? ಮುಸುಕು ಮುಂಜಾವ ನೀನು ಎಚ್ಚರ ಗೊಳ್ಳುತ್ತಿರುವಾಗ ನಿನ್ನ ಮೇಲೆ ಆ ವರೆಗೆ ಎರಗಿದ್ದು, ಆಗ ಹೊರಟು ಹೋಗುತ್ತಿರುವ ನೆಳಲು ಎನ್ನಲೆ? ನಿನಗೆ ಜೀವನದ ಸ್ವರೂಪ ಗೊತ್ತು. ನಿನ್ನ ಇಚ್ಛೆಯಿಂದ ಈ ಭೂತವನ್ನು ಅಡಗಿಸುತ್ತೇನೆಂದಿದ್ದೀಯೆ. ಭೂತ ವನ್ನು ಗೆದ್ದು ಮಾನವರನ್ನು ಕಾಪಾಡುತ್ತೇನೆಂದಿದ್ದೀಯೆ. ಲೋಕಕ್ಕೂ ನಿನ್ನ ಉಪಕಾರ ಬೇಕಾಗಿದೆ. ನಿನಗೆ ಅದನ್ನು ಮಾಡುವ ಶಕ್ತಿಯಿದೆ. ಬುದ್ಧಿ ಯಿದೆ. ನೀನು ಹೇಳಿದಂತೆ ನಿನ್ನ ಸುತ್ತಮುತ್ತಿನದೆಲ್ಲ ನಡೆಯುವುದು. ಕಣ್ಣು ಮುಚ್ಚಿಕೊಂಡು ವಿಧೇಯತೆ ತೋರಿಸುವುದು. ಯಾರಲ್ಲಿ ಭಕ್ತಿಯೂ ಸ್ವನಾಶದವರೆಗೂ ತಮ್ಮನ್ನು ತೆತ್ತುಕೊಳ್ಳುವ ವೀರಭಕ್ತಿಯೂ ಇವೆಯೋ ಅಂಥವರನ್ನು ಆಕರ್ಷಿಸುವ ಪ್ರಭಾವ ನಿನ್ನದು. ನಿನ್ನ ಇಚ್ಛಾಶಕ್ತಿಗೆ ಅಧೀನವಾಗಿ ಆ ಕಾರ್ಯ ನಡೆಯಬಲ್ಲದು. ಆದರೆ ಬೆಟ್ಟವೇರುವ ಹಟವನ್ನು ಬಿಡಬಲ್ಲೆಯ? ಎಂದು ಕೇಳುತ್ತಾನೆ. ಭೂತದ ಕರೆಯೇ ಪ್ರಬಲವಾಗಿ ರ್‍ಯಾನ್ಸಮ್ ಇಲ್ಲವೆನ್ನುತ್ತಾನೆ.

ಈ ಭಾಗದಲ್ಲಿನ ಇವರಿಬ್ಬರ ಸಂಭಾಷಣೆ ವಿಶೇಷ ಅರ್ಥವತ್ತಾದ್ದು; ಪ್ರಭಾವವುಳ್ಳದ್ದು. ಸ್ವಂತ ಸಂಸ್ಕಾರ ಕಾರ್ಯದಲ್ಲಿ ನಿಜವಾಗಿ ತಾನೂ ಕೃತಾರ್ಥ ನಾಗಿಲ್ಲವೆಂದು ಮಠಾಧಿಕಾರಿಗೆ ಗೊತ್ತು. ಮನಶ್ಶಾಂತಿ ಅವನಿಗೂ ದೊರೆತಿಲ್ಲ. ಅವನ ತೊಳಲಲ್ಲಿ ಅವನಿದ್ದಾನೆ. ಇತ್ತ ಉತ್ಕಟ ಸ್ವಾಭಿಮಾನದಿಂದ ಪ್ರೇರಿತ ವಾದ ಸ್ವಂತ ಹಟವನ್ನು ಕುರಿತು "ಇದರಿಂದ ನಾನು ನಾಶವಾಗುತ್ತಿದ್ದೇನೆ"

ಎಂದು ರ್ಯಾನ್‌ಸಮನೂ ಒಳಗೆ ಅರಿಯುತ್ತಾನೆ. ಈ ಅರಿವು ನಾಟಕದ ಬೆಳಕು.

ಮುಂದೆ ರ್ಯಾನ್‌ಸಮಿನೊಡನೆ ಮೂವರು ಗೆಳೆಯರು ಹೊರಡುತ್ತಾರೆ. ಆರೋಹಣದಲ್ಲಿ ಮೊದಲು ಹೊಚ್ಚ ಹೊಸದಾಗಿ ತಾನು ಕಂಡುಹಿಡಿದ ಐದೆಲೆಯ ಒಂದು ಸಸ್ಯವನ್ನು ಆ ಎತ್ತರದಲ್ಲಿ ಕಂಡು ತೃಪ್ತನಾಗಿ ಬರುತ್ತಿದ್ದಾಗ ಮೇಲಿಂದ ಒಂದು ದೊಡ್ಡ ಮಂಜಿನ ಬಂಡೆ ಉರುಳಿ ಬಿದ್ದು ಗೆಳೆಯನಾದ ಲ್ಯಾಂಪ್ ಸಾಯುತ್ತಾನೆ. ಮುಂದಿನ ಮಜಲಲ್ಲಿ ಶಿಖರಭಾಗಕ್ಕೆ ನಾಯಕನು — ತನ್ನನ್ನಲ್ಲ — ಡೇವಿಡ್ಡನನ್ನು ಕರೆದುಕೊಂಡು ಹೋಗುತ್ತಾನೆಂಬುದನ್ನು ಕೇಳಿ ಅಪಮಾನಗೊಂಡು ತನ್ನ ಕರುಬು ಅಯೋಗ್ಯತೆಗಳಿಗೆ ಪಶ್ಚಾತ್ತಾಪಪಟ್ಟು, ಉದ್ವೇಗದಲ್ಲಿ ಹೊರಗೆ ಹೋಗಿ, ಕಮರಿಯಿಂದ ಕೆಳಗೆ ಬಿದ್ದು ಇಯನ್ ಷಾಕ್ರಾಸ್ ಸಾಯುವನು. ಇನ್ನಷ್ಟು ಸಮಯದಲ್ಲಿ ಡೇವಿಡ್ ಕೂಡ ತೀರಿಕೊಳ್ಳುವನು. ಕಡೆಯಲ್ಲಿ ಆಸ್ಟ್ರಿಯಾದವನು ಕಾಲಿಡುವ ಮುಂಚೆಯೇ ರ್ಯಾನ್‌ಸಮ್ ಬ್ರಿಟಿಶರ ಪರವಾಗಿ F⁶ ಶಿಖರವೇರಿ ನಿಲ್ಲುವನು. ರಾಜಕೀಯ ಕಾರ್ಯ, ಆರೋಹಣದ ಕೀರ್ತಿ, ದೇಶದ ಲೌಕಿಕ ಹಿತ ಎಲ್ಲ ಸಾಧಿಸುವುವು. ಇಂಗ್ಲಂಡಿನಲ್ಲಿ ಎಲ್ಲೆಲ್ಲಿಯೂ ಇದರ ಸಂಭ್ರಮವೇ, ಇದರ ಪ್ರಶಂಸೆಯೇ ಆಗಿರುವಾಗ ಮೈಕಲ್ ಶಿಖರದ ಕೋಡು ಬಂಡೆಯ ಮೇಲೆ ಸತ್ತುಬಿದ್ದಿರುವನು.

ಅದನ್ನು ತಿಳಿಸುವ ಮುಂಚೆ ಕಡೆಯ, ಎನೆಯ ದೃಶ್ಯ ಒಂದು ಬಗೆಯಲ್ಲಿ ಕಲ್ಪನೆಯ ಸಂಕೇತದೃಶ್ಯವನ್ನು ತೋರಿಸುವುದು. ಇಷ್ಟು ಆಹುತಿಗಳನ್ನು ತೆಗೆದುಕೊಂಡ ಭೂತದ ಮೂರ್ತಿ ಸ್ವಾಭಿಮಾನ, ಆರೋಹಣಫಲ ಎಂಬುದರ ದರ್ಶನ ಅಲ್ಲಿ ಆಗುವುದು. ಲೋಕದ ಎಲ್ಲ ಅನ್ಯಾಯ, ಕಷ್ಟಗಳಿಗೂ ಕಾರಣವೇನೆಂಬ ಪ್ರಶ್ನೆಗೂ ಉತ್ತರ ಸಿಕ್ಕುವುದು.

---

# ಕಲಾಕೃತಿಯ ಅರ್ಥ

ಶಾಸ್ತ್ರಪ್ರಪಂಚದಲ್ಲಿ ಎಲ್ಲಕ್ಕೂ ಖಚಿತವಾದ ಅರ್ಥವಿರುತ್ತದೆ; ಇರಬೇಕು. ಯಾವ ಸಂದೇಹಕ್ಕೂ ಎಡೆಯಿಲ್ಲದಂತೆ ಪ್ರಮಾಣ, ಕಾರ್ಯಕಾರಣ ವ್ಯಾಪಾರ, ವಿವರಣೆ, ನಿದರ್ಶನ – ಅಲ್ಲಿ ಇರುತ್ತವೆ. ವಿಷಯಾಂಶಗಳಿಗಿರುವ ಪರಸ್ಪರ ಸಂಬಂಧವೂ, ಪರಿಶೀಲನೆಯಲ್ಲಿ ಬಳಸುವ ಬೆಲೆಗಳೂ ಯುಕ್ತಿಯೂ ಇಂಥವೇ ಎಂದು ಗೊತ್ತಿರುತ್ತದೆ. ವಾದಸರಣಿ, ಪರಿಭಾಷೆ ಮತ್ತು ತತ್ವವನ್ನು ಸ್ಥಾಪಿಸುವ ಕ್ರಮಗಳು ಸಿದ್ಧವಾಗಿರುತ್ತವೆ; ಸರ್ವಗ್ರಾಹ್ಯವಾಗಿರುತ್ತವೆ. ಯುಕ್ತಿಯನ್ನು ಒಪ್ಪುವ ಎಲ್ಲರೂ ಎಲ್ಲ ಕಾಲ ಎಲ್ಲ ದೇಶಗಳವರೂ ಬಹು ಮಟ್ಟಿಗೆ ಇದು ಹೀಗೆಯೇ ಸರಿ ಎಂದು ಅರ್ಥ ಮಾಡಲು ಅಲ್ಲಿ ಅವಕಾಶ ಹೆಚ್ಚು. ಉದ್ದೇಶವೇ ಅದು. ವಿಜ್ಞಾನದಲ್ಲಿಯೂ ಇದೇ ರೀತಿಯ ಅವಕಾಶ ಸೌಲಭ್ಯಗಳುಂಟು. ಜೊತೆಗೆ ಅದಕ್ಕೇ ವಿಶೇಷವಾದ ಅಳತೆ, ತೂಕ, ಎಣಿಕೆಗಳ ವಿಧಾನವೂ ಪರೀಕ್ಷೆ ಪ್ರಯೋಗಗಳ ಮಾರ್ಗವೂ ಸೇರುವುವು. ಪ್ರತೀಕ್ಷಣ ಪ್ರಯೋಗಗಳಿಂದ ಒಂದು ರೀತಿ ಏರ್ಪಟ್ಟ ವಾದವೋ ಸಿದ್ಧಾಂತವೋ ಸರಿ ಅಥವಾ ಅಲ್ಲ ಎಂದು ನೇರವಾಗಿ ಎಲ್ಲರೂ ಒಪ್ಪಿಯೇ ತೀರಬೇಕು. ಅವುಗಳಿಂದ ಹುಟ್ಟುವ ಅನುಮಾನವೂ ಹಾಗೆಯೇ ಸರ್ವಥಾ ನಿರ್ಣಾಯಕ. ವೇದಾಂತಾದಿ ದರ್ಶನಗಳಲ್ಲಿಯೂ ವಾದಭಾಗ ಇಂಥ ವಿಧಾನಗಳನ್ನು ಅನುಸರಿಸಿಯೇ ಸಾಕಲ್ಯದಿಂದ ತೀರ್ಮಾನಗಳನ್ನು ಸಾಧಿಸಬೇಕಾದೀತು. ಈ ಎಲ್ಲಿಯಾಗಲಿ ವಿಶದತೆ, ಖಚಿತತೆ, ಅಸಂದಿಗ್ಧತೆ, ಸಾಂಗತ್ಯಗಳಿಗೇ ಬೆಲೆ. ವ್ಯಕ್ತಿಯ ಅಂತಃಕರಣಕ್ಕೆ, ಭಾವರಂಜನೆಗೆ, ಮೋಹಕ್ಕೆ, ಅಭಿಮಾನಕ್ಕೆ ಸ್ಥಾನವಿಲ್ಲ. ಕಲೆಯ ಪ್ರಪಂಚದಲ್ಲಿ ಅರ್ಥ ಇಷ್ಟೇ–ಹೀಗೇ–ಸರಿ ಎಂದು ಖಂಡಿತವಾಗಿ ಎಲ್ಲ ಸಂದರ್ಭಗಳಲ್ಲಿಯೂ ಎಲ್ಲರೂ ಒಪ್ಪುವಂತೆ ಹೇಳುವುದು ಕಷ್ಟ. *

* ಆದರೆ ಇದನ್ನು ಸಾಧಿಸುವುದು ಪರಮ ಪ್ರಯತ್ನವಾಗಬೇಕಾದುದು ಅಗತ್ಯ. ಸಯಿನ್ಟಿಫಿಕ್ ಕ್ರಿಟಿಸಿಸಂ (ಶಾಸ್ತ್ರಶುದ್ಧ ವಿಮರ್ಶೆ) ಒಂದಿದೆಯೆಂಬವರಿಗೆ ಈ ಗುರಿಯೇ ಮೊಕ್ಕಾ. ಇಲ್ಲಿ ಮೊಕ್ಕಾ ಅಂತಹ ಯಾತ್ರಾಸ್ಥಾನ ಒಂದಿದೆಯೇ ಎಂಬುದೇ ಚರ್ಚಾಂಶವಾಗಬಲ್ಲದು.

ಕಲೆಯು ಸ್ವರೂಪವೇ ಈ ಕಷ್ಟಕ್ಕೆ ಕಾರಣ. ಕಲೆಗೂ ದರ್ಶನಾದಿಗಳಿಗೂ ಭೇದವುಂಟು. ಆದ್ದರಿಂದಲೇ ಕಲಾಕೃತಿಯೊಂದರ ಅರ್ಥವನ್ನು ಕುರಿತು ಬಗೆ ಬಗೆಯ ಭಿನ್ನಾಭಿಪ್ರಾಯ ಹುಟ್ಟುವುದು. ಅರ್ಥಗ್ರಹಣದಲ್ಲಿ ಈ ಭಿನ್ನತೆ ಉಂಟಾದರೆ ವಿಮರ್ಶೆ ಹೆಚ್ಚು ಕಡಿಮೆ ಆಗುವುದು ಸಹಜವೇ ಅಲ್ಲವೆ ?

ಕಲಾಕೃತಿಗಳ ಅರ್ಥ ಇದೇ ಸರಿ ಎಂದು ಹೇಳುವುದು ಶಕ್ಯವೆ ಇಲ್ಲವೆ ಎಂದರೆ ಇಲ್ಲವೆಂದು ಯಾರೂ ಹೇಳಲಾರರು. ಸ್ಥೂಲಾರ್ಥ ಎಲ್ಲರಿಗೂ ಸ್ಪಷ್ಟ ಗೋಚರವಾಗುವದು ; ಗ್ರಾಹ್ಯವಾಗಬಲ್ಲದು. ನಯ ಸೂಕ್ಷ್ಮಗಳಲ್ಲಿ ಕೃತಿ ಉತ್ತಮವಾದಂತೆಲ್ಲ ಗ್ರಹಣ ಕಷ್ಟತರವಾಗುವದು. ಈ ಕಷ್ಟ ಶಾಸ್ತ್ರಗಳಲ್ಲಿನಂತಲ್ಲ. ಕಲೆಗೇ ವಿಶೇಷವಾಗಿ, ಅದರ ಮೂಲಸ್ವರೂಪಕ್ಕೂ ಭಾವಗ್ರಹಣಕ್ಕೂ ಸಂಬಂಧಿಸಿದ್ದು. ಕಲೆಗಾರನ ಮನಸ್ಸಿನಲ್ಲಿ ಹುಟ್ಟಿ ಬೆಳೆದು ರೂಪಗೊಂಡ ಯಾವದೋ ಒಂದು ಅರ್ಥಕಲ್ಪನೆ ಇನ್ನೊಬ್ಬರ ಮನಸ್ಸನ್ನು ಮುಟ್ಟುವಾಗ ಪ್ರತಿ ಹೆಜ್ಜೆಯಲ್ಲಿಯೂ ಮಾರ್ಪಡಲು ಅವಕಾಶವಿದೆ. ವ್ಯಕ್ತಿಗಳ ಮತ್ತು ಬಳಸಿರುವ ದ್ರವ್ಯದ ವಾಹಕ ( Medium ), ವಸ್ತು, ಸಾಮಗ್ರಿ ಸಾಧನಗಳ ಲಕ್ಷಣಕ್ಕೂ ಚರಿತ್ರೆಗೂ, ಜನರ ಅನುಭವ, ಸಂಸ್ಕಾರ, ಭಾವಸೂಕ್ಷ್ಮತೆಗಳಿಗೂ ಹೊಂದಿರುತ್ತದೆ. ರಾಗದ್ವೇಷಗಳ ಕೆರಳುವಿಕೆಗೋ ಉಪಶಾಂತಿಗೋ ಉದಾಸೀನತೆಗೋ ಕಾರಣವಾಗುತ್ತದೆ. ಇದು ಕೇವಲ ಬುದ್ಧಿಗಾಗಲಿ, ಖಚಿತತೆಗಾಗಲಿ ಮಾತ್ರ ಒಳಪಟ್ಟುದಲ್ಲ. ಚಿತ್ತವೇಧಕವಾಗಿ ಮನಸ್ಸಿನ ಮೇಲೆ ಬಗೆ ಬಗೆಯ ಭಾವಪರಿಣಾಮಗಳನ್ನು ಉಂಟುಮಾಡುವುದು. ಹೊಳೆದ, ಅರಿತ ಅರ್ಥ ಅಗಲವಾಗಿ ಹರಡಿಕೊಳ್ಳುವದು. ಆವೇಶಗಳನ್ನೂ ಸುಖದುಃಖಗಳನ್ನೂ ಹರಿಸಬಲ್ಲ ಒಂದು ವ್ಯಾಪಾರ ಈ ಅರ್ಥಪ್ರಪಂಚದಲ್ಲಿ ಕವಿದು ಸೇರಿಕೊಂಡಿರುತ್ತದೆ. ಭಿನ್ನ ಪ್ರಕೃತಿ, ಸಂಸ್ಕಾರ, ಶಿಕ್ಷಣ, ರುಚಿಗಳುಳ್ಳ ಜನಕ್ಕೆ ಭಿನ್ನ ಫಲಗಳನ್ನು ತರುತ್ತದೆ.* ಗಣಿತದಲ್ಲಿ ಮೂರಕ್ಕೆ

---

* ಹೀಗಾಗಿ ಸಕಲ ಮನೋಜ್ಞತ್ವ ( Universal appeal ) ಎಂಬ ಮಾತಿಗೇ ಮಿತಿ ಉಂಟಾದೀತು. ಕಲೆಯಲ್ಲಿ ಏಕಲೋಕತೆಗಿಂತ ಭಿನ್ನಲೋಕತೆ, ಬಹುಲೋಕ ( Multiverse ) ಪ್ರಕಾಶಕ್ಕೇ ಬೆಲೆ. ಮನೋಪ್ರಪಂಚಗಳು ಬೇರೆಯಾದಂತೆ ಕಲೆಯ ಅರ್ಥವಿಲಾಸ ಅನೇಕ ಬಗೆಯಾಗುವುದು. ಗ್ರಹಣದಲ್ಲಿ

ಮೂರು ಸೇರಿದರೆ ಮೊತ್ತ ಆರಾಗಲೇಬೇಕು.* ಕಲೆಯಲ್ಲಿ ಮೂರಕ್ಕೆ ಮೂರು ಸೇರಿದಾಗ ಆರೇ ಆಗುತ್ತದೆಂಬ ನಂಬಿಕೆ ಖಂಡಿತವಿಲ್ಲ. ಜೊತೆಗೆ ಇನ್ನೂ ಏನೇನೊ ಆಗುತ್ತದೆ.† ಭೂಮಿ ಆಕಾಶಗಳಿಗೆ ಇರುವಷ್ಟು ವ್ಯತ್ಯಾಸ ಹುಟ್ಟಿಕೊಂಡು ಪ್ರಬಲಿಸಬಲ್ಲದು. ಕಲಾಸತ್ಯವೇ ಹೀಗೆ.

ಇರುವುದೆಲ್ಲ ಸತ್ಯ; § ಆಗುವುದೆಲ್ಲ ಸತ್ಯ; ಭಾವಿಸುವುದೆಲ್ಲ ಸತ್ಯ; ಆಗದಿದ್ದರೂ ಆಗುವುದೆಂದು ಭ್ರಮಿಸುವ ಭ್ರಮೆಗಳೂ, ಸಂಶಯ ಸಂದೇಹಗಳೂ ಸತ್ಯ. ಹೀಗೆ ವಸ್ತು ಸತ್ಯ, ಭಾವ ಅಥವಾ ಕಲ್ಪನಾ ಸತ್ಯ ಎಲ್ಲ ಸತ್ಯವೇ. ಗುಣಾರೋಪಣೆ, ವಾದ, ವಿಮರ್ಶೆ, ಅಣಕ, ಪಕ್ಷಪಾತ ಇವೂ ಹಾಗೇ. ಅದಕ್ಕೆ ಕಾಲ, ದೇಶ, ವರ್ತಮಾನ, ಲಿಂಗಾದಿ ಭೇದಗಳ ಮಿತಿ ಇಲ್ಲ. ಏಕೆಂದರೆ ಜೀವನದಲ್ಲಿ ಇವೆಲ್ಲ ಕಾರ್ಯಕಾರಿ; ಕರ್ಮಪ್ರೇರಕ. ‡ ಹಾಗೂ

---

ಕ್ರಮಕ್ರಮವಾಗಿ ಅರ್ಥ ಬೆಳೆಯುತ್ತದಾಗಿ ಮೊದಲ ಅರ್ಥ ಕೊನೆಯಲ್ಲಿಯೋ ಕೊನೆಯದು ಮೊದಲಿನದರಿಂದಲೊ ಮಾರ್ಪಡುವುದು.

* ನವೀನ ಗಣಿತದಲ್ಲಿ ಇದು ಹೀಗೆ ಆಗಬೇಕಿಲ್ಲವಂತೆ. ಆ ವಿಚಾರ ಸದ್ಯಃ ಬೇಡ.

† ಸಂಖ್ಯೆ ಆರಾದರೂ ಅನಾವಶ್ಯಕವೋ ಅತಿಶಯವೋ ಆಗಬಹುದು; ಬೇಸರ ತರಬಹುದು; ಒಟ್ಟಂದ ಕೆಡಿಸಬಹುದು; ವಿರಸ ಹುಟ್ಟಬಹುದು; ಸಂತೋಷ ಹೊಮ್ಮಬಹುದು; ಲಡಾಯಿ ಹತ್ತಬಹುದು; ತಲೆಗಳು ಕಡಿದು ಬೀಳಬಹುದು; ಮದುವೆಗಳೋ ನಿರ್ಣಯಗಳೋ ನೆರೆಯಬಹುದು; ಮುರಿಯಬಹುದು.

§ ಸತ್ಯವೆಂಬ ಪದದ ಅರ್ಥಗ್ರಹಣದಲ್ಲಿ ಒಂದು ಅನಿಶ್ಚಯ ಇರುವುದುಂಟು; ಮೂಲಾರ್ಥ ಇರವಿಗೆ ಸಂಬಂಧಿಸಿದ್ದು; ಜೊತೆಗೆ, ಅದನ್ನು ಕುರಿತು ಮನುಷ್ಯನು ಇದು ಹಾಗೆ, ಅದು ಮತ್ತೊಂದು ರೀತಿ, ಇದರ ಸ್ವರೂಪ, ಗುಣ, ಕ್ರಿಯೆ, ಪ್ರಯೋಜನ ಇಂಥಾದ್ದು ಮಾತ್ರ, ಬೇರೊಂದಲ್ಲ ಎಂದು ಮಾಡುವ ಯುಕ್ತಿ ಮುಂತಾದ ಬುದ್ಧಿವ್ಯಾಪಾರದ ಫಲವಾಗಿ ಮಾಡಿದ ವಿವೇಚನೆಗೆ ಸೇರುತ್ತದೆ. ಅದು ಅರಿವಿನ ಭಾಗ. ಇಂಗ್ಲೀಷಿನಲ್ಲಿ ಕೂಡ Truth ಎಂಬ ಪದಪ್ರಯೋಗದಲ್ಲಿ ಈ ಸಂದಿಗ್ಧತೆ ಹುಟ್ಟಿದೆ. ಅಲ್ಲಿಯೇ Reality ಎಂಬುದನ್ನು ಇರವನ್ನು ಸೂಚಿಸುವ ಅರ್ಥದಲ್ಲಿಯೂ Truth ಎಂಬುದನ್ನು ಅರಿವಿಂದ ಕಂಡು ಹೇಳುವ ಅರ್ಥದಲ್ಲಿಯೂ ಬಳಸಿದರೆ ಈ ಸಂದಿಗ್ಧತೆ ಸ್ವಲ್ಪ ನಿವಾರಣೆಯಾದೀತು.

‡ ಮನುಷ್ಯನ ಮನಸ್ಸನ್ನೂ ಬದುಕನ್ನೂ ಒಳಗಿನಿಂದಲೂ ಹೊರಗಿನಿಂದಲೂ ಮಿಡಿಸುವ, ಉದ್ವೇಗಗೊಳಿಸುವ ಎಲ್ಲವೂ ಸತ್ಯವೇ ಎಂಬುದನ್ನು ಒಪ್ಪಲಾರದವರು ವ್ಯವಹಾರ ಜಗತ್ತಲ್ಲದ ಬೇರೊಂದು ಅಲೌಕಿಕ ಪ್ರಪಂಚದವರು ಎನ್ನಬೇಕು.

ಸತ್ಯವೆನ್ನುವಾಗ ಕಲೆಯಲ್ಲಿ ವಿಶೇಷ ವಿವೇಚನೆ ಮಾಡುತ್ತೇವೆ. ಕಲೆಗಾರನು ಕಂಡು ಕಾಣಿಸುವ ಸತ್ಯದ ಸ್ವರೂಪವೂ ಅವನ ದರ್ಶನ ಮತ್ತು ಅವನ ಮಾಟಗಳೂ ( The Vision and the Design ) ಒಂದು ಬಗೆಯಲ್ಲಿ ಕೃತಕ.

ಕಲಾಕೃತಿಯಲ್ಲಿ ರೂಪಗೊಂಡಿರುವ ಸತ್ಯ ಯಾವುದು ಎಂಬುದನ್ನು ಅರ್ಥಮಾಡಿಕೊಳ್ಳಬೇಕಾಗಿರುವಾಗ ಹೀಗೇ — ಇನ್ನೂ ಅನೇಕ ವಿಚಿತ್ರ ಅಂಶಗಳು ಎಣಿಕೆಗೆ ಬರುವುವು. ಇದ್ದುದೇನು? ಕೃತಿಕಾರನ ಮನಸ್ಸಿನಲ್ಲಿ ಮೊದಲು ಸುಳಿದುದೇನು? ಅಲ್ಲಿ ಅದು ಹೇಗೆ ಬೆಳೆಯಿತು? ಎಲ್ಲಿನ ಯಾವ ಅಂಶಗಳು ಹೇಗೆ ಸೇರಿ ರೂಪಾಂತರವಾಯಿತು? ಕಡೆಗೆ ಇದು ಹೇಗೆ ಅವಯವ ಗೊಂಡಿತು, ಆಕೃತಿಗೊಂಡು ಅರ್ಥಸಂಪತ್ತಿ ಪಡೆಯಿತು? ಯಾವ ಕ್ರಿಯಾ ವಿಧಾನದಿಂದಲೂ ದ್ರವ್ಯಸಾಧನೆಗಳ ಪ್ರಯೋಗದಿಂದಲೂ ಅನುಭವ ಕುಶಲತೆಗಳ ನೆರವಿಂದಲೂ ಹೊರಬಂದು ಈ ನಿರ್ಮಿತಿಯಾಯಿತು ಎಂಬ ವರೆಗೂ ನಿರ್ಮಾಣವಿಧಾನದ ವ್ಯಾಪಿ ಇರುತ್ತದೆ.* ಪ್ರೇರಣೆ, ಕಲ್ಪನೆ, ಕ್ರಿಯಾಕುಶಲತೆ, ನಿರ್ಮಿತಿ—ಇದು ಜಾಡು. ಮೊದಲು ಸುಳಿದ ಅರ್ಥ ಸ್ಫುಟವಾದ ಆಕೃತಿಯನ್ನು ತಾಳಿ ಒಂದು ಸಮಗ್ರ ಕೃತಿಯಾಗುತ್ತದೆ. ಎಂದರೆ ವಸ್ತುಸ್ಥಿತಿ, ಸಾಮಗ್ರಿ ಯಾವುದೇ ಇದ್ದಿರಲಿ, ಕಲೆಗಾರನು ಅದನ್ನು ಕಂಡ ಸನ್ನಿವೇಶ, ರೀತಿ, ದೃಷ್ಟಿಯ ಫಲವಾಗಿ ಅವನು ಕಾಣಿಸುತ್ತಿರುವ ಅರ್ಥ ಅವನ ಕರ್ಮದಲ್ಲಿ ರೂಪಿತವಾಗಿ ಕೃತಿಯಾಯಿತು. ಅವನ ಮಟ್ಟಿಗೆ ಕ್ರಿಯೆ ಮುಗಿಯಿತು.

ಆದರೆ ಅದರ ಅರ್ಥ ಇದೇ ಸರಿ ಎಂದು ಅದನ್ನು ನೋಡಿದವರೂ ಪರಿಚಯ ಮಾಡಿಕೊಂಡವರೂ ಅರಿಯಬೇಕಲ್ಲವೆ? ಕೃತಿ ನಿರ್ಮಾಣ ಮಾಡಿದ ಮೇಲೆ ಕೃತಿಕಾರನು ಹಿಂದಕ್ಕೆ ಸರಿದು ನಿಲ್ಲುತ್ತಾನೆ; ಅಲ್ಲಿಗೆ ಅವನ ಅಲಂಕಾರ ಅಲಂ–ಅರಂ–ಆಯಿತು;† ಇನ್ನು ಮುಂದೆ ನೇರವಾಗಿ ಅವನ ನೆರವು

* ಇದರ ಪರಿಶೀಲನೆ, ವಿಧಾನ ನಿರೂಪಣೆ, ಇನ್ನೂ ಖಚಿತವಾಗಿ ನಡೆಯಬೇಕಾಗಿದೆ. ಮೂಲ ಕಲ್ಪನೆ, ಅದು ರೂಪಗೊಳ್ಳುವ ವಿಧಾನಗಳಿಗೆ ಸಂಬಂಧಿಸಿದ ಸಂಗತಿಗಳು ಇನ್ನೂ ಎಲ್ಲ ತಿಳಿದಿಲ್ಲ.

† Finished ಎಂಬ ಇಂಗ್ಲಿಷ್ ಮಾತಿನಲ್ಲಿನ ಎರಡು ಅರ್ಥಗಳೂ ಹೀಗೇ ಮುಗಿಯಿತು, ಇನ್ನು ಸಾಕು, ಸರ್ವಾಭರಣ ಭೂಷಿತವಾಗಿ ಸಜ್ಜುಗೊಂಡು ಹೊರ ಬಿದ್ದಿತು—ಎಂಬಲ್ಲಿ ಕೂಡಿರುವಂತೆ.

ಅಷ್ಟಾಗಿ ಅಗತ್ಯವಾಗಬಾರದು. ತಾಯಿ ಮಗುವಿನಂತೆ, ತಂದೆ ಮಗನಂತೆ ಈ ಎರಡೂ ಒಂದೇ ಕ್ರಿಯೆಯಲ್ಲಿ ಕೂಡಿದಂತೆ ಇಲ್ಲಿ ಸಂಬಂಧ ಹುಟ್ಟಿದುದು ಪೂರ್ತಿ ಬೇರೆ ಜೀವ; ವ್ಯಕ್ತಿ ಬೇರೆ. ಮಗುವಿನದರಂತೆಯೇ ಕೃತಿಯ ಜೀವನ ಇನ್ನು ಮುಂದೆ ಇಲ್ಲಿಯೂ ಬೇರೆ; – ಸ್ವತಂತ್ರ. ಮಗುವಿನ ಹಸುಳೆತನದಲ್ಲಿ ಅಸಹಾಯವಾದ ಅದರ ಪೋಷಣೆ, ಲಾಲನೆ ತಾಯಿ ತಂದೆಯರ ಹೊಣೆ. ಕಲಾನಿರ್ಮಿತಿಯ ವಿಚಾರ ಹಾಗಲ್ಲ. ಕೃತಿಯಾಗಿ ಒಂದು ಸಲ ರೂಪಗೊಂಡ ಮೇಲೆ ಅವನ ಕಾಪು ಅದಕ್ಕೆ ಬೇಕಿಲ್ಲ. ಅದರ ಬದುಕು ಬೇರೆಯಾಯಿತು. ಅಂದಿನಿಂದ ಎಂದೆಂದಿಗೂ ಅದು ಸ್ವಸಂಪೂರ್ಣ ಸತ್ವ; ಕಲೆಯಾಗಿ. ಇತರ ಜನ ಅದರಲ್ಲಿ ಕಾಣಲಾಗದ ಅರ್ಥವನ್ನು ಎಂಥ ಕಲೆಗಾರನೂ ತೋರಿಸಿ ಕೊಡಲಾರ.* ಪ್ರಪಂಚಕ್ಕೆ ಒಂದು ಹೊಸ ಪದಾರ್ಥ ಉಂಟಾಗಿ ಈಗ ಅದು ಎದುರಿಗೆ ಇದೆ. ಅದನ್ನು ಜನ ಸಂದರ್ಶಿಸುತ್ತಾರೆ. ತಮಗೆ ತೋರುವ ಅರ್ಥವನ್ನು ತೆಗೆದುಕೊಳ್ಳುತ್ತಾರೆ; ನುಡಿಯುತ್ತಾರೆ. ಕಂಡು ಪ್ರೀತಿಯನ್ನೊ ಅಪ್ರೀತಿಯನ್ನೊ ಪಡೆಯುತ್ತಾರೆ; ವಿಮರ್ಶೆ ಮಾಡಿ ಬೆಲೆ ಕಟ್ಟುತ್ತಾರೆ; ಅದರ ಉಪಯುಕ್ತತೆಯನ್ನು ಕುರಿತು ಹಾಗೆ, ಹೀಗೆ, ಇಷ್ಟು ಎನ್ನುತ್ತಾರೆ. ಒಪ್ಪಿಗೆಯಾಯಿತು, ಚೆನ್ನಾಗಿಲ್ಲ ಎನ್ನುತ್ತಾರೆ. ಕೃತಿಯಿಂದ ಬಗೆಬಗೆಯ ಬೋಧನೆಯಾಗುವ ಅರ್ಥವೂ ಅವರ ಮನಸ್ಸಿನಲ್ಲಿ ಆಗುವ ಪರಿಣಾಮಗಳೂ, ಅವರ ಸಂಸ್ಕಾರ, ಬೆಲೆ–ತೂಕ, ನಯ–ನಾಜೂಕು, ವಿವೇಚನೆ, ಔದಾರ್ಯ ಕಾರ್ಪಣ್ಯ, ಶುಚಿ–ರುಚಿ–ಇವೆಲ್ಲ ಆಗ ಅದರ ಅರ್ಥಾಂಗವಾಗಿ ಪ್ರಪಂಚಕ್ಕೆ ಸಂಚರಿಸಿ ಬರುತ್ತವೆ. ಸಹೃದಯರಾದ ವಿಮರ್ಶಕರು ಕೃತಿಯಿಂದ ಯಾವೆಲ್ಲ ಅನುಭವಗಳನ್ನು ಪಡೆಯುವರೋ, ಅದೆಲ್ಲ ಕೃತಿಯ ಅರ್ಥ. ಅವರ ಗ್ರಹಿಕೆ

* ನನ್ನಕಾಲದವರಾರಿಗೂ ನನ್ನ ಅರ್ಥವನ್ನು ಗ್ರಹಿಸುವ ಯೋಗ್ಯತೆಯಿಲ್ಲ. ಮುಂದಿನ ಕಾಲಗಳಲ್ಲಿ ನನಗೆ ಸಮಾನಸತ್ವರಾರಾದರೂ ಹುಟ್ಟಿದರೆ ಅವರಿಗೆ ತಿಳಿದೀತೋ ಏನೋ ಎಂಬ ಅಹಂತೆ ಇರುವಲ್ಲಿಯೂ ಇದು ಸತ್ಯ. ಒಬ್ಬ ಗಣಿತ ಕಾರನು ೪೦-೫೦ ವರ್ಷದ ಲೆಕ್ಕ ಮಾಡಿ ತನ್ನ ತೀರ್ಮಾನವನ್ನೂ ಸಮೀಕರಣ ಗಳನ್ನೂ ಬರೆದಿಟ್ಟನಂತೆ; ಕಡೆಯಲ್ಲಿ 'ಔಟ್'—ಇದು ಮುಗಿಯಿತು; ಇನ್ನಾ ರಿಗೂ ಎಂದಿಗೂ ಇದು ತಿಳಿಯದೆ ಇರಲಿ ಎಂದನಂತೆ. ಇಂಥ ಸಿದ್ಧಿ ವಿಚಿತ್ರ; ಬ್ರಹ್ಮರಾಕ್ಷಸತೆ ಇದು ಎಂದು ನಮ್ಮ ಗುರುಗೊಳೊಬ್ಬರು ಹೇಳುತ್ತಿದ್ದರು. ಆದರೆ ಮನಸ್ಸಿನ ಒಂದು ಸ್ಥಿತಿಯ ದ್ಯೋತಕ ಅದು.

ಯಲ್ಲಿನ ಲೋಪದೋಷ ಅನೌಚಿತ್ಯ ಕಳೆದು ಅದರ ಗ್ರಹಿಕೆಗೆ ಸೇರುವ ಭಾವ ಪುಷ್ಟಿಯೆಲ್ಲ ಅದಕ್ಕೆ ಸೇರುವುದು. ಕೃತಿ ದೊಡ್ಡದಾದಷ್ಟೂ* ಅನುಭವ ಶಾಲಿಗಳಾದ ರಸಿಕರ, ವಿಮರ್ಶಕರ ವಿವೇಚನೆ ಉತ್ತಮವಾದಷ್ಟೂ ಕೃತಿಯ ಅರ್ಥ ನಯವಾಗುವುದು, ಆಳವಾಗುವುದು, ವಿಸ್ತಾರವಾಗುವುದು. ಇಂತಹ ಅರ್ಥ ಬೆಳೆದು, ಆ ಅರ್ಥದ ಚರಿತ್ರೆ ಬೆಳೆದು ಆ ಚರಿತ್ರೆ ಹಬ್ಬುವುದು. ಇದನ್ನು ಅನುಭವಿಸಬಲ್ಲ ಮನುಷ್ಯರು ಪ್ರಪಂಚದಲ್ಲಿ ಇರುವವರೆಗೂ–ಕಡೆಯ ಮನುಷ್ಯನ ಕೊನೆಯ ಅರ್ಥಗ್ರಹಿಕೆಯ ವರೆಗೂ – ಈ ಅರ್ಥಚರಿತ್ರೆ ನಡೆಯುವುದು. ಈ ಬಗೆಯ ಕ್ರಿಯೆಗೆ ನಿಲವು, ನಿಲುಗಡೆ, ಇತಿಮಿತಿ ಇಲ್ಲ. ಇದೊಂದು ಅನಂತ ವ್ಯಾಪಾರ.

ಕೆಲವು ಕೃತಿಗಳ ಅರ್ಥ ಇಷ್ಟೇ ಸರಿ, ಅದರಲ್ಲಿ ಇನ್ನೇನೂ ಇಲ್ಲ ಎಂದು ಹೇಳಿ ಮುಗಿಸಬಹುದು. ಅಂತಹದು ಸಾಮಾನ್ಯಕೃತಿ. "ಹಾಸಿ ಉಂಡು ಬೀಸಿ ಎಸೆದ ಬಾಳೆ ಎಲೆಯಂತೆ". ಯಾವದೋ ಕೆಲಸ ಮಾಡಿತು; ಅದರ ಪ್ರಯೋಜಕತೆ ಅಲ್ಲಿಗೆ ಮುಗಿಯಿತು. ಹಲವು ವೇಳೆ ಅದರ ಅರ್ಥ ಅದರ ಮೇಲ್ಮಯ್ಯಲ್ಲಿಗೇ ತಿಳಿದುಹೋಗುವುದು. ಅದರಲ್ಲಿ ಮಟ್ಟ, ಪದರ, ಅಂತರಾಂತರ, ಹೃದಯ, ಗೂಢ— ಚರ್ವಣ ಮಾಡಿದಂತೆಲ್ಲ ಮೆಲುಕಿದಂತೆಲ್ಲ ರಸಪುಷ್ಟಿ— ಹೆಚ್ಚುವ ಅಂಥದೇನೂ ಇರುವುದಿಲ್ಲ.

ಲೋಕದ ಶ್ರೇಷ್ಠ ಕೃತಿಗಳೆಂದು ಹೆಸರುಗೊಂಡು ರಸಜ್ಞರ ಪ್ರೀತಿಗೂ ಗೌರವಕ್ಕೂ ಪುನಃಪುನಶ್ಚರ್ವಣಕ್ಕೂ ಎಡೆಗೊಟ್ಟು ಅಮರವಾಗುವ ಕೃತಿಗಳ ಅರ್ಥ ಹಾಗಲ್ಲ.† ಕಾಲದಿಂದ ಕಾಲಕ್ಕೆ ಅವುಗಳ ಅರ್ಥವಂತಿಕೆ ಹೊಸ ಅಂಶಗಳ ಪರಿಶೀಲನದಿಂದಲೂ ಹೊಸದರ್ಶನದಿಂದಲೂ ಕಳೆಗೊಳ್ಳುತ್ತದೆ. ಹೊಸ ಸನ್ನಿವೇಶ, ಮನಃಸ್ಥಿತಿಗಳಲ್ಲೂ ಅವುಗಳ ಪರಿಚಯವನ್ನು ಮಾಡಿಕೊಂಡವರು ಹೊಸ ಭಾವ, ಆದೇಶ, ಅರ್ಥಕಲ್ಪನೆಗಳನ್ನು ಮಾಡಿ

---

* ಇಷ್ಟಕ್ಕೆ ಅವಕಾಶ ಕೊಡುವಷ್ಟಾದರೂ ಕೃತಿ ಅರ್ಹವಾಗಿರಬೇಕು ಮಾತ್ರ— ದೊಡ್ಡ ಕೃತಿ, ಚಿಕ್ಕ ಕೃತಿ ಎಂದರೇನು? ಪ್ರಮಾಣಗಳಾವುವು? ಎಂಬುದೂ ವಿವೇಚನೆಗೆ ಒಳಪಡುವ ವಿಷಯ.

† ಇವು ಎಂದು ನಿಂತುಹೋಗುವುದೋ ಹೇಳುವ ಧೈರ್ಯ ಯಾರಿಗಿದೆ? ನಿಂತಂದು ಅವು ಮೃತ. ಅವುಗಳ ಭಾವಪ್ರೇರಕ, ಕ್ರಿಯಾಪ್ರೇರಕ ಶಕ್ತಿ ನಿಂತಿತು, ಆದ್ದರಿಂದ. ಅಮೃತತ್ವದ ಮೂಲಾಧಾರ ತತ್ವ ಇಲ್ಲಿದೆ ಎನ್ನಿಸುತ್ತದೆ.

ಕೊಂಡು ಅದರ ಅರ್ಥಚರಿತ್ರೆಗೆ ತಮ್ಮ ದರ್ಶನವನ್ನು ಸೇರಿಸುವಾಗ ಆದೇ ಆಗ ತಾನೇ ಕಂಡ ಸತ್ಯದಂತೆ, ಅದರ ಸೌಂದರ್ಯಮಂಡಲ ಪ್ರಕಾಶಗೊಳ್ಳುವುದು. ಕಲಾಸತ್ಯ ಹೀಗೆ ಸಂತತವಾಗಿ ನೂತನ; ಸನಾತನ. § ವಾಲ್ಮೀಕಿ, ಷೇಕ್ಸ್‌ಪಿಯರ್, ಸಾಫ್ರೋಕ್ಲೀಸ್, ವ್ಯಾಸಾದಿಗಳಿಂದ ಇಂದಿಗೂ – ಮುಂದಿಗೂ ದಿನದಿನವೂ ಕಾವ್ಯಕೃತಿ ಪ್ರೇರಿತವಾಗುವುದು ಶಕ್ಯ. ಅವರ ತಂದೆತನ ಈ ಕಾಲದ—ಬೇರೆ ದೇಶದ, ಭಾಷೆಯ ಮಕ್ಕಳಲ್ಲಿಯೂ ಸದಾ ನಡೆಯುತ್ತಿರುವುದು. ಅವರ ಅಮೃತತ್ವ, ವೀರ್ಯ, ಸೃಷ್ಟಿಶಕ್ತಿ ಹೀಗೆ ನಿರಂತರವಾದ್ದು. ಇದು ವಸ್ತುವಿಗೆ ಮಾತ್ರ ಸೇರಿದ್ದಲ್ಲ; ಕಲ್ಪನೆ, ಕಲಾದ್ರವ್ಯ, ಉಪಯೋಗಿಸುವ ಕರಣ ಸಾಧನಗಳಿಗೆ ಮಾತ್ರ ಮಿತವಾದ್ದಲ್ಲ; ಒಂದು ದೃಷ್ಟಿಗೆ, ರೂಪಣಕ್ರಮಕ್ಕೆ ಮಾತ್ರ ಒಳಪಡುವುದಿಲ್ಲ. ಈ ಎಲ್ಲಕ್ಕೆ ಸಂಬಂಧಿಸಿದ ಸಂಪ್ರದಾಯ ರೀತಿನವ್ಯತೆಗಳಲ್ಲಿ ಅಳಿದು ಮುಗಿಯುವುದಿಲ್ಲ; ಒಂದು ಜೀವಂತ ಕ್ರಿಯಾಪ್ರಸರ ( A live Continuum ) ಅದು. ಕಲೆಗಾರನ ಮನಸ್ಸಿನಲ್ಲಿ ಯಾವ ಕಲ್ಪನೆ ಜಾಗ್ರತವಾಯಿತೊ, ಯಾವ ಬೆಳಕು ಮಿಂಚಿ ಮಾಯವಾಯಿತೊ, ಅದು ಅವಯವಗೊಂಡು ಬಲಿತು ಪೂರ್ತಿ ರೂಪಗೊಂಡಾಗ ಯಾವ ಅಂಶಗಳು ಹಿಂಗಿ ಇನ್ನಾವ ಸತ್ವ ಸೇರಿಕೊಂಡಿತೊ, ಹುಟ್ಟಿದ ಕೃತಿಯನ್ನು ನೋಡಿದಾಗ ಯಾರು ಯಾರು ಹೇಗೆ ಹೇಗೆ ಅದನ್ನು ಅನುಭವಿಸಿ ಅರ್ಥ ಮಾಡಿಕೊಂಡರೊ, ವಿವೇಚನೆ ಮಾಡಿದರೊ, ಅದರಿಂದ ಏನೇನು ಫಲ ಪರಿಣಾಮಗಳುಂಟಾದುವೊ ಇವೆಲ್ಲ ಕೃತಿಯ ಅರ್ಥಪ್ರಪಂಚವೇ. ಕಲ್ಪಿಸಿದ, ಅನುಭವಿಸಿದ ಅರ್ಥ ಕೃತಿನಿಷ್ಠವಾಗಿ ಅಲ್ಲಿನ ಅಂಶಗಳಿಂದ ಸಾಧಿಸಬಲ್ಲವಾಗಿರುವವರೆಗೂ ಆ ಕಲ್ಪನೆಗೆಲ್ಲ ಅವಕಾಶವುಂಟು. ಅದೆಲ್ಲ ಸರಿ.

ಕೃತಿಕಾರನ ಮನಸ್ಸಿನಲ್ಲಿ ಈ ಹೊಸ ಕಂಡ ಅರ್ಥವಿತ್ತೆ ? ಎಂಬ ಪ್ರಶ್ನೆ ನ್ಯಾಯವಾಗದು. ಇತ್ತೋ ಇಲ್ಲವೋ ನಮಗೇನು ಗೊತ್ತು, — ಇದು ನನ್ನ ಅರ್ಥವಲ್ಲವೆಂದು ಅವನೇ ಹೇಳದೆ ಇರುವ ವರೆಗೂ ? ಅವನು ಹೇಳಿದರೆಷ್ಟು, ಬಿಟ್ಟರೆಷ್ಟು ? ನಾವು ಇಲ್ಲಿ ಈಗ ಯೋಚಿಸುತ್ತಿರುವುದು ಅವನ ಅರ್ಥವಲ್ಲ — ಕೃತಿಯ ಅರ್ಥ. ಅವನ ಅರ್ಥ ಅವನ ಕೃತಿಯಲ್ಲಿ ಬೇರೆಯಾಗಿ ಆಕೃತಿಗೊಂಡಿದೆಯೆಂದು ಇತರರೆಲ್ಲರಿಗೆ ತೋರುತ್ತಿದ್ದರೆ ಅವನ ಮನಸ್ಸಿನಲ್ಲಿ ಏನಿದ್ದರೆ

§ ಸನಾತನ ಸದಾತನ ಎರಡೂ ಒಂದೇ ಸತ್ಯದ ಎರಡು ಮುಖಗಳು.

ಏನು ? ಏನಿಲ್ಲದಿದ್ದರೆ ಏನು ? ಸ್ವಂತವಾಗಿ ಅವನು ಇದು ನನ್ನ ಅರ್ಥ ಎಂದು ಹೇಳಿದರೆ ಅದನ್ನೂ ಗಮನಕ್ಕೆ ತಂದುಕೊಳ್ಳಬಹುದು. ಕೃತಿಯು ಅರ್ಥಸಾಧಕವಾದ ಅಂಶಗಳಲ್ಲಿ ಅದೂ ಒಂದು. ಅಷ್ಟೇ ಕೃತಿಕಾರನ ಇಷ್ಟ ಅವನು ಹೇಳುವಂತೆ ನೆರವೇರಿದೆಯೆ ಇಲ್ಲವೆ ಎಂಬುದನ್ನು ಇತರರು ಪ್ರತ್ಯೇಕ ವಾಗಿ ಕೃತಿಯ ಆಧಾರದ ಮೇಲಿಂದ ನಿರ್ಣಯಿಸಬೇಕಾಗುತ್ತದೆ. ಎಂದರೆ, ಆತನ ಅರ್ಥ, ಉದ್ದೇಶ ಭವ್ಯವಾಗಿದ್ದು ಕೃತಿ ಆ ಮಟ್ಟಕ್ಕೆ ಏರಿಲ್ಲದಿರುವುದು ಶಕ್ಯ.* ಅವನ ಕಲ್ಪನೆಯ ನೂರು ಮಡಿ ಸುಂದರವಾದ — ಹೃದಯ ಸ್ಪೃಕ್ಕಾದ — ಅರ್ಥಸಂಪುಷ್ಟಿ ಹುಟ್ಟಿ ಅವನ ಕಾಲದ ಇತರರಿಗೊ ಬೇರೆ ಕಾಲದವರಿಗೊ ಹಾಯ್ದು ಅವರನ್ನು ರೋಮಾಂಚಗೊಳಿಸಬಹುದು. ಒಂದು ನೇರವಾದ ಉದ್ದಿಷ್ಟ ಭಾಗ; ಇನ್ನೊಂದು ಅದರಲ್ಲಿ ಇತರರು — ಬಹುಶಃ ತಾನೇ ಕೆಲವು ಕಾಲಾನಂತರ — ಕಂಡ, ಉಂಡ ಭಾಗ.

ಇಷ್ಟೆಲ್ಲ ಒಂದು ಕೃತಿಯ ವಿಚಾರವಾಯಿತು,— ಸ್ಥೂಲವಾಗಿ ಅದು ಕಲೆಗಾರನ ಮನಸ್ಸಿನಲ್ಲಿದ್ದ ಮಟ್ಟಿಗೂ ನಿಜ. ಅದನ್ನು ಅನುಭವಿಸಿದ ರಸಾನುಭವಿಗಳಲ್ಲಿ ಇದ್ದಷ್ಟೂ ನಿಜ. ಅದನ್ನು ಕುರಿತು ಅವರುಗಳು ಮಾಡಿದ ವ್ಯಾಖ್ಯಾನಾದಿಗಳೂ ಮಾಡಿದ ಪ್ರತಿಪಾದನೆಗಳೂ ನಿಜ. ಅನಂತಕಾಲದ ವರೆಗೂ ಈ ಅರ್ಥ ಬೆಳೆಯುವಾಗ ಕೃತಿಯ ಅರ್ಥವೆಂದರೆ ಈ ವ್ಯಾಪನೆಯುಳ್ಳ ಸಮಗ್ರ ಅರ್ಥಚರಿತ್ರೆಯೂ ಸೇರುತ್ತದೆ. ಯಾವ ಅರ್ಥಕಲ್ಪನೆ ನ್ಯಾಯ,

---

* ನನ್ನ ಕೃತಿಯನ್ನು ಜನ ಅರ್ಥಮಾಡಿಕೊಂಡಿಲ್ಲ, ಕೊಳ್ಳಲಾರರು ಎಂದು ಮುಂತಾಗಿ ಕೃತಿಕಾರನು ಈ ಕಾರಣದಿಂದಲೂ ಹೇಳಬಹುದು, ತಮ್ಮ ಮನಸ್ಸಿನಲ್ಲಿ ಸ್ಪಷ್ಟವಾಗಿದ್ದದ್ದು ಕೃತಿಯಲ್ಲಿ ಮೂಡಿಯೇ ಇರಬೇಕು ಎಂಬ ಭ್ರಾಂತಿಗೆ ಅವಕಾಶವುಂಟಾದ್ದರಿಂದ. ಅದು ಮೂಡದಿರಬಹುದು. ದ್ರವ್ಯವನ್ನು ಬಳಸುವ ಜಾಣ್ಮೆ, ಕೃತಿಗಾರಿಕೆ, ಶಕ್ತಿ ಅವನಲ್ಲಿ ಇಲ್ಲದಿರಬಹುದು. ಸಾಕಾದಷ್ಟು 'ಸಮಾಧಿ'ಯೋ ರೂಪಣಶಕ್ತಿಯೋ ಇಲ್ಲದಿರುವದರಿಂದ ಭ್ರಾಂತಿ ಇಂಥಲ್ಲಿ ಕರುಣಾಜನಕವಾಗುವುದು. ಆತನು ಅತಿ ಜಾಣನಾಗಿ ತನ್ನ ಕಾಲದವರ ಶಕ್ತಿಗಿಂತ ಬಹು ವೇಗವಾಗಿ ಚಿಂತಿಸಬಲ್ಲವನಾಗಿದ್ದರೆ ಸದ್ಯಕ್ಕೆ ಅವನ ಅರ್ಥ ಗ್ರಾಹ್ಯವಾಗದೆ ಕ್ಲಿಷ್ಟವಾಗಿದ್ದು ಮುಂದಿನ ಕಾಲಗಳಲ್ಲಿ ಹೆಚ್ಚು ಸುಲಭವಾಗುವ ಸಂಭವವೇನೊ ಉಂಟು. ಹಾಗೆಯೇ ಈ ಅಧಿಕಯೋಗ್ಯತಾವಾದವನ್ನು ಅಯೋಗ್ಯರು ತಮ್ಮ ಕೃತಿಯ ಪರವಾಗಿ ಅಡಿ ಗುಣಾರೋಪಣೆ ಮಾಡಿಕೊಳ್ಳಲೂ ಬಹುದು. ಇಂಥ ಜಾಣತನ ಐಲುತನಗಳಿಗೆ ಕೊನೆಯಿಲ್ಲ.

ಯಾವುದಲ್ಲ ಎಂದು ತೇಲಿ, ಅಳಿದ ಭಾಗ ಅಳಿದು ಉಳಿದು ನಿಂತದ್ದೂ ಬೆಳೆದದ್ದೂ ಈ ಪ್ರಪಂಚದ ಜೀವಸತ್ವವೇ ಆಗುವುದು.

ಕಲೆ ಎಂಬ ಮಾತು ಒಂದು ಬಗೆಯ ಕೃತಿಜಾತಿಯ ವಿಚಾರಕ್ಕೆ ಸಂಬಂಧಪಟ್ಟ ವಾಚಕ. ಒಂದೇ ಕಲೆಗೆ ಸಂಬಂಧಿಸಿದ ಎಲ್ಲ ಕಾಲದ ಎಲ್ಲ ರೀತಿಯ ಕೃತಿಗಳೂ ಒಂದರಿಂದ ಇನ್ನೊಂದು ಅರ್ಥವಾಗುವುವು. ತಾರತಮ್ಯಜ್ಞಾನ, ಇದಕ್ಕೆಲ್ಲ ಸಂಬಂಧಿಸಿದ ತತ್ವಭಾಗ — ಬೆಳೆಯುವುದು. ಸ್ಫೂರ್ತಿ, ನಿರ್ಮಿತಿ, ಆಸ್ವಾದನ, ವಿಮರ್ಶೆ ಈ ಎಲ್ಲದರ ಚರಿತ್ರೆ — ಎಂಬ ಭಾಗಗಳ ಸಾಂಗತ್ಯವನ್ನೂ ನಿರಂತರ ಪರಿಸರ ಸ್ವರೂಪವಾದ ಯಾವುದೋ ವ್ಯಾಪಾರ ಈ ಅರ್ಥದ ನೆಲಸನ್ನು ಸೂಚಿಸುವುದು. *

ಕಲೆ ಎಂಬುದು ಕಲೆಯಲ್ಲಿನ ಕೃತಿಗಳಲ್ಲಿ ಕಾಣುವುದು ಮಾತ್ರವಲ್ಲ; ಹಲವು ಬಗೆಯ ಕಲೆಗಳಿಗೆ ಸಂಬಂಧಿಸಿದ ಮಾತೂ ಹೌದು. ಪ್ರತಿ ಕಲೆಗೂ ಅದರದೇ ಆದ ವಿಶಿಷ್ಟ ಲಕ್ಷಣ ಉಂಟು. ಇತರ ಕಲೆಗಳಿಗೂ ಅದಕ್ಕೂ ಸಾಮಾನ್ಯವಾದ ಅಂಶಗಳುಂಟು. ಯಾವದೋ ನಿರ್ಮಾಣಶಕ್ತಿಯ ರೂಪಣಕ್ಕೆ ಸಂಬಂಧಿಸಿದ ಮನೋವ್ಯಾಪಾರವೊಂದು ಕಡೆ; ಕ್ರಿಯಾರಚನೆಯೊಂದು ಕಡೆ—ಪ್ರತಿಭಾತ್ಮಕವಾದ್ದು ಕರ್ಮಕೌಶಲರೂಪವಾದ್ದು—ಒಂದೇ

---

* ಉದಾ: ಕಡೆಗೆ — ಒಂದು ಮಂಚ, ಪೆಟ್ಟಿಗೆ ಎಂಬವನ್ನು ನೋಡೋಣ. ಜನ ಯಾವದೋ ಒಂದು ಉಪಯೋಗಕ್ಕಾಗಿ ಲೋಕದಲ್ಲಿ ಒಂದು ವಸ್ತುವನ್ನು ತಯಾರು ಮಾಡಿಕೊಳ್ಳುತ್ತಾರೆ. ಬಗೆಬಗೆಯ ಗಾತ್ರ, ಆಕಾರ, ಗುಣ ಉಳ್ಳ ಮಂಚಗಳೂ ಪೆಟ್ಟಿಗೆಗಳೂ ಅತ್ಯನಾಗರಿಕರಿಂದ ಹಿಡಿದು ಅತಿಕುಶಲ ಕಲೆಗಾರರ ಕೈವಾಡದಿಂದಾದ ಸುಂದರ ಕೃತಿನಿರ್ಮಿತಿಯವರೆಗೂ ಹರಡುವ ಮಂಚಗಳೂ ಪೆಟ್ಟಿಗೆಗಳೂ ದೇಶ ದೇಶಗಳಲ್ಲಿ ತಯಾರಾಗುತ್ತವೆ. ಒಂದು ಕಾಲದಿಂದ ಇನ್ನೊಂದಕ್ಕೆ ಒಂದು ದೇಶದಿಂದ ಬೇರೊಂದಕ್ಕೆ ವಸ್ತುಗಳಾಗಿ ಚಿತ್ರಗಳಾಗಿ ರೂಪಸೂಚಿಕೆಗಳಾಗಿ ( migration of forms ) ಬರುತ್ತವೆ. ಒರಟಾದವು, ವಿಕಾರವಾದವು ತ್ಯಾಜ್ಯವಾಗಿ ನಾಶವಾಗಿರುತ್ತವೆ; ಬೇಸರ ಅಸಹ್ಯ ತಂದಿರುತ್ತವೆ. ಒಂದನ್ನು ನೋಡಿ ಮತ್ತೊಂದು ಅದನ್ನು ಬದಲಿಸಿ, ಮೀರಿ ಇನ್ನೊಂದು ಆಕೃತಿಗೊಳ್ಳುತ್ತಿರುತ್ತವೆ. ಕೆಲವು ಸುರೂಪಿ ( ಆದರೆ ರೂಪ ಯಾವಾಗ ಸುರೂಪಿ ಯಾವಾಗ ಕುರೂಪಿ ಎಂಬದು ಇಲ್ಲಿ ವಿಚಾರ್ಯ ) — ಕೆಲವು ಚೆನ್ನಿಲ್ಲ ( ಏಕೆ? ಎಂಬದು ಬೆಲೆಗಳಿಗೆ ಸಂಬಂಧಿಸಿದ್ದು. ಯಾರಿಗೆ? ಎಂಬದು ರುಚಿ-ಸಂಸ್ಕಾರಗಳಿಗೆ ಹೊಂದಿದ್ದು) — ಹೀಗಾಗಿ ಅನಂತ ಕಾಲದ ವರೆಗೂ ಯಾವ ಯಾವ ಮಂಚಗಳೂ

ವಿಧಾನದ ಎರಡು ಮುಖಗಳಂತೆ, ವಾಕ್ ಅರ್ಥಗಳಂತೆ, ಸೂರ್ಯನ ಶಾಖ ಬೆಳಕುಗಳಂತೆ, ಹಾರುವ ಹಕ್ಕಿಯ ಎರಡೂ ರೆಕ್ಕೆಯ ಬಡಿತದಂತೆ — ಒಂದರೊಳಗೊಂದು, ಸೇರಿಕೊಂಡಿರುವುದು. ಕಲೆಯ ಅರ್ಥವೆಂದಾಗ ಈ ಮನೋವ್ಯಾಪಾರದ, ಈ ಕ್ರಿಯಾಯೋಗದ ಎಲ್ಲ ತತ್ವಭಾಗ, ಎಲ್ಲ ಚರಿತ್ರಭಾಗ, ಎಲ್ಲ ಕೃತಿಯ ಅನುಭವ ವಿಮರ್ಶ ಚರಿತ್ರಗಳ ಭಾಗ, ರುಚಿ ನೀತಿಗಳ ಭಾಗ ಸೇರುವುವು. ಒಂದು ವಿಶಿಷ್ಟ ರೀತಿಯಲ್ಲಿ ಆಸ್ವಾದಿಸಿದಾಗ ಮಾತ್ರ ಮಹಾ ಅನುಭವವನ್ನು ತಂದು ಜಗತ್ತನ್ನು ಸಂಸ್ಕಾರಗೊಳಿಸಬಲ್ಲ ಯಾವದೋ ಸತ್ವಪ್ರಕರಣವಾಗಿ ಪ್ರಭಾಮಂಡಲವನ್ನು ರಚಿಸಿಕೊಂಡು ಬಾಳಿನ ಸಾರವನ್ನು ಪೋಷಣೆ ಮಾಡುತ್ತಿರುವುದು.

---

ಪೆಟ್ಟಿಗೆಗಳೂ ಅಲ್ಲಿನ ಕುಸುರಿ, ನಯ, ನುಣುಪು, ಆಕಾರ, ಅಂಗರಚನೆ, ಸುಭಗತೆಗಳೊಡನೆ ತಯಾರಾಗುವುವೊ ಅವೆಲ್ಲವುಗಳ ಆಕೃತಿಸಂಪತ್ತಿ ಅವುಗಳ ಅರ್ಥಲಕ್ಷಣದಲ್ಲಿ ಸೇರಿರುತ್ತವೆ. ಮಂಚವೆಂದರೆ ಅಂಥ ಎಲ್ಲವೂ; ಪೆಟ್ಟಿಗೆಯೆಂದರೆ ಪೆಟ್ಟಿಗೆಯೆಂಬ ಹೆಸರಿನಲ್ಲಿ ಹುಟ್ಟಿದ, ಬಳಸಿದ ಎಲ್ಲವೂ. — ಜೊತೆಗೆ ಮಂಚ ಪೆಟ್ಟಿಗೆ ಎಂದರೆ ಆಲಂಕಾರಿಕವಾಗಿ ಬಲಿಯುವ ಲಕ್ಷಣವ್ಯಂಗ್ಯಾರ್ಥಗಳೂ, ಭಾವಾರ್ಥಗಳೂ, ಸಂಕೇತಗಳೂ ಒಡಬೆರೆತ ಸರಸ ವಿರಸಗಳ ವ್ಯಾಪಾರವೂ ಸೇರಿಕೊಂಡು ಸುಖ ದುಃಖಗಳನ್ನು ಉಂಟುಮಾಡುವವು. ಮೂಲಾರ್ಥವನ್ನು ಪೋಷಿಸುವುವು. ವಸ್ತುಸತ್ವಗಳಾದ ಇಂಥವುಗಳ ಅರ್ಥವೇ ಹೀಗೆ ಹರಡುವುದೆಂದಾಗ ಗಾನ, ನಾಟ್ಯ, ಚಿತ್ರಾದಿಗಳಲ್ಲಿನ ಪ್ರತಿಭಾಸಂಪನ್ನವಾದ ಸತ್ವಗಳ ಅರ್ಥವಂತಿಕೆ ಇನ್ನೆಷ್ಟು ಸರಸ ಪ್ರಸರವುಳ್ಳದ್ದಾಗಬಹುದೆಂಬುದನ್ನು ಕಲ್ಪಿಸಿಕೊಳ್ಳಬಹುದು.

# ಮನೋಹರ ಗ್ರಂಥಮಾಲೆ, ಧಾರವಾಡ



ಈ ಗ್ರಂಥಮಾಲೆಯು ಹದಿನೈದನೆಯ ಅಗಸ್ಟ ೧೯೩೩ಕ್ಕೆ ಪ್ರಾರಂಭವಾಗಿದೆ.

ಕಾದಂಬರಿ, ಸಣ್ಣಕತೆ, ನಾಟಕ, ಹರಟೆ, ದಿನಚರಿ ಮೊದಲಾದ ಸರಸಸಾಹಿತ್ಯವನ್ನೂ ಕಾವ್ಯ, ವಿಮರ್ಶೆ, ವೇದಾಂತ, ವಿಜ್ಞಾನ ಮೊದಲಾದ ವಿಚಾರಸಾಹಿತ್ಯವನ್ನೂ ಸಂಗೀತ, ನೃತ್ಯ, ಚಿತ್ರಕಲೆ, ಶಿಲ್ಪಕಲೆ, ಆರೋಗ್ಯ, ಗ್ರಹಜೀವನ, ಸೂಚಿಶಿಲ್ಪ, ಗೃಹಾಲಂಕಾರ, ಪ್ರವಾಸ ಪರಿಚಯ ಮೊದಲಾದ ಸರ್ವಜ್ಞಾನ ಪರಿಚಯವನ್ನು ಮಾಡಿಕೊಡುವ ಪ್ರಯೋಜಕ ಸಾಹಿತ್ಯವನ್ನೂ ಈ ಗ್ರಂಥಮಾಲೆಯು ಪ್ರಕಟಿಸುತ್ತದೆ.

ಈ ಕಾರ್ಯದಲ್ಲಿ ಶ್ರೀಯುತರಾದ ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ ಇವರು ಪ್ರಾರಂಭದಿಂದಲೂ ಈ ಗ್ರಂಥಮಾಲೆಗೆ ಸಾಹಿತ್ಯ ವಿಷಯದಲ್ಲಿ ಸಲಹೆಗಾರರಾಗಿ ಮಾರ್ಗದರ್ಶನ ಮಾಡುತ್ತಿದ್ದಾರೆ.

ಇಡಿ ಕನ್ನಡ ನಾಡಿನ ಸಿದ್ಧಹಸ್ತ ಬರೆಹಗಾರರೆಲ್ಲರೂ ಈ ಗ್ರಂಥಮಾಲೆಗಾಗಿ ಗ್ರಂಥಗಳನ್ನು ಬರೆದುಕೊಟ್ಟು ಅದರ ಗೌರವವನ್ನೂ ಕೀರ್ತಿಯನ್ನೂ ಹೆಚ್ಚಿಸಿದ್ದಾರೆ; ಗ್ರಂಥಮಾಲೆಯ ಸಾಹಿತ್ಯಸ್ಥಾನವನ್ನು ಉನ್ನತವಾಗಿಸಿದ್ದಾರೆ.

ಗ್ರಂಥಮಾಲೆಯ ಹೊಸ ವರ್ಷಾರಂಭವು ಅಗಸ್ಟ ತಿಂಗಳಿಂದಾಗುತ್ತದೆ.

ಅಗಸ್ಟದಿಂದ ಜುಲೈ ವರೆಗಿನ ಒಂದು ವರ್ಷದ ಅವಧಿಯಲ್ಲಿ ಈ ಗ್ರಂಥಮಾಲೆಯು ತನ್ನ ಗ್ರಾಹಕರಿಗೆ, ಅವರಿಂದ ಸಂದ ಚಂದಾಹಣದಲ್ಲಿ ಒಂದು ಸಾವಿರ ಪುಟಗಳ ಸಾಹಿತ್ಯವನ್ನು ಸಲ್ಲಿಸುವುದು. ಅಂಚೆಯ ದರ ಮೊದಲಿಗಿಂತಲೂ ಹೆಚ್ಚೆಚ್ಚು ಏರುತ್ತ ಬಂದಿದ್ದರಿಂದ ಗ್ರಂಥಗಳನ್ನು ಒಂದೇ ಕಂತಿನಲ್ಲಿ, ಹೆಚ್ಚೆಂದರೆ ಎರಡು ಕಂತುಗಳಲ್ಲಿ ಮಾತ್ರ ಚಂದಾದಾರರಿಗೆ ರಜಿಸ್ಟರದಿಂದ ತಲುಪಿಸಲಾಗುತ್ತದೆ.

ಆಯಾ ವರ್ಷದಲ್ಲಿ ಪ್ರಕಟವಾಗುವ ಗ್ರಂಥಗಳ ಸಂಖ್ಯೆಯು ಅವುಗಳ ಪುಟಸಂಖ್ಯೆಯ ಪ್ರಮಾಣದ ಮೇಲಿಂದ ಹೆಚ್ಚುಕಡಿಮೆಯಾಗಬಹುದು.

ಗ್ರಂಥಮಾಲೆಯ ಸದ್ಯದ ವಾರ್ಷಿಕ ಚಂದಾ ಆರು ರೂಪಾಯಿ ಎಂಟಾಣೆ ಮಾತ್ರ ( ೬-೮-೦ ) ಇದೆ.

[ ಅಗಸ್ಟ ೧೯೫೪ರ ಹಿಂದೆ ಗ್ರಂಥಮಾಲೆಯ ವಾರ್ಷಿಕ ಚಂದಾ ೮ ರೂಪಾಯಿ ಇದ್ದುದನ್ನು, ಹೊಸ ವರ್ಷದಿಂದ—ಅಂದರೆ ಅಗಸ್ಟ ೧೯೫೪ರಿಂದ ಪ್ರಾರಂಭವಾಗುವ ವರ್ಷದಿಂದ—ಆರು ರೂಪಾಯಿ ಎಂಟಾಣೆಗೆ ಇಳಿಸಲಾಗಿದೆ. ]

ಗ್ರಂಥಮಾಲೆಗೆ ಒಂದೇ ಸಲಕ್ಕೆ ೧೫೦ ರೂಪಾಯಿ ಸಲ್ಲಿಸಿದವರನ್ನು ಅಜೀವ ಚಂದಾದಾರರನ್ನಾಗಿ ಮಾಡಿಕೊಂಡು, ಅವರಿಗೆ ಆ ವರ್ಷದಿಂದ ಪ್ರಾರಂಭ ಮಾಡಿ ಕೊಂಡು ಅವರ ಆಜನ್ಮಪರ್ಯಂತ ಮಾಲೆಯ ಗ್ರಂಥಗಳನ್ನು ಹಾಗೆಯೆ ಸಲ್ಲಿಸ ಲಾಗುವುದು. ಮತ್ತು ಬಿಡಿಮುತ್ತುಗಳನ್ನೂ ಅವರಿಗೆ ಅರ್ಧ ಬೆಲೆಗೆ ಕೊಡಲಾ-ಗುವುದು.

ವರ್ಷದಲ್ಲಿ ಯಾವಾಗ ಬೇಕಾದರೂ ಹೊಸದಾಗಿ ಚಂದಾದಾರರಾಗಬಹುದು.

ಚಂದಾಹಣವನ್ನು ಮುಂಗಡವಾಗಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಮನಿಯಾರ್ಡರ ಮೂಲಕ ಕಳುಹಿಸಿಕೊಡಬೇಕು.

ಗ್ರಂಥಮಾಲೆಯ ಹಿಂದಿನ ಗ್ರಂಥಗಳಿಗೆ ಚಂದಾಸವಲತ್ತು ಅನ್ವಯಿಸುವುದಿಲ್ಲ.

ಗ್ರಂಥಗಳಿಗಾಗಿ ಬೇಡಿಕೆ ಕಳಿಸಿಕೊಡುವವರು "ಮಾರಾಟಕ್ಕೆ ದೊರೆಯುವ ಗ್ರಂಥಗಳ" ಪಟ್ಟಿಯನ್ನು ದಯವಿಟ್ಟು ಗಮನಿಸಬೇಕು.

ಪುಸ್ತಕವ್ಯಾಪಾರಿಗಳಿಗೆ (Recognised) ಮುಖಬೆಲೆಯ ಮೇಲೆ ೧೮⅓% ಕಮಿಶನ್ ಕೊಡಲಾಗುವದು. ನೂರು ರೂಪಾಯಿಗಳ ಮೇಲ್ಪಟ್ಟ ಬೇಡಿಕೆಗಳಿಗೆ ೨೫% ಕಮಿಶನ್ ಕೊಡಲಾಗುವದು. ಪ್ಯಾಕಿಂಗ್, ಅಂಚೆವೆಚ್ಚ ಪ್ರತ್ಯೇಕ.

ವಿಳಾಸ :

ಸಂಪಾದಕ :

ಮನೋಹರ ಗ್ರಂಥಮಾಲಾ, ಧಾರವಾಡ

---

# ಮಾರಾಟಕ್ಕೆ ದೊರೆಯುವ ಗ್ರಂಥಗಳು



## ಕಾದಂಬರಿಗಳು :

| | | | | | |
|---|---|---|---|---|---|
| ೧. | ಧರ್ಮಸೆರೆ | ಜಡಭರತ | ೨ | ೦ | ೦ |
| ೨. | ನಿಸರ್ಗ | ಮಿರ್ಜಿ ಅಣ್ಣಾರಾಯ | ೩ | ೮ | ೦ |
| ೩. | ಅನಂತ | ಸತ್ಯಬೋಧ | ೧ | ೪ | ೦ |
| ೪. | ಕಾರಣಪುರುಷ | ರ. ಶ್ರೀ. ಮುಗಳಿ | ೧ | ೮ | ೦ |
| ೫. | ಗಂಗಾಸಾನಿ | ವರಗಿರಿ | ೧ | ೧೪ | ೦ |
| ೬. | ಮಾದನ ಮಗಳು | ಎಂ. ವಿ. ಸೀ. | ೬ | ೦ | ೦ |
| ೭. | ಮುನಿಯನ ಮಾದರಿ | ಅಶ್ವತ್ಥ | ೨ | ೧೨ | ೦ |
| ೮. | ಮರ್ಯಾದೆ ಮಹಲು | ಅಶ್ವತ್ಥ | ೩ | ೮ | ೦ |
| ೯. | ಮೇದಿನಾಪುರದ ಮಲ್ಲ | ಗುರುರಾಜ ಜೋಶಿ | ೧ | ೮ | ೦ |
| ೧೦. | ಇಂದ್ರಚಾಪ | ತಲ್ಚೇರ ರಂಗರಾವ್ | ೨ | ೮ | ೦ |
| ೧೧. | ಎರಡನೆಯ ಸಂಬಂಧ | ಎನ್ಕೆ. ಕುಲಕರ್ಣಿ | ೩ | ೦ | ೦ |
| ೧೨. | ಗೃಹದಾರಣ್ಯಕ | ನಾ. ಕಸ್ತೂರಿ | ೧ | ೮ | ೦ |
| ೧೩. | ಗೃಹದೇವತೆ | ಶ್ರೀಮತಿ ಚಂಪಕಮಾಲಾ | ೪ | ೦ | ೦ |
| ೧೪. | ಔರಂಗಜೇಬ | ಕೆ. ವಾಸುದೇವಾಚಾರ್ಯ | ೩ | ೦ | ೦ |
| ೧೫. | ಯುವನಸ್ವೈರಂಧ್ರಿ | ಕೆ. ವಾಸುದೇವಾಚಾರ್ಯ | ೨ | ೪ | ೦ |
| ೧೬. | ವಾಲ್ಮೀಕಿವಿಜಯ | ಕೆ. ವಾಸುದೇವಾಚಾರ್ಯ | ೧ | ೦ | ೦ |

## ನಾಟಕಗಳು :

| | | | | | |
|---|---|---|---|---|---|
| ೧೭. | ಎತ್ತಿದ ಕೈ | ರಂ. ಶ್ರೀ ಮುಗಳಿ | ೧ | ೧೪ | ೦ |
| ೧೮. | ಯುಗಾಂತರ | ವಿ. ಕೃ. ಗೋಕಾಕ | ೦ | ೧೨ | ೦ |
| ೧೯. | ಬಿತ್ತಿದ ಬೆಳೆ | ಶಿವರಾಮ ಕಾರಂತ | ೧ | ೦ | ೦ |
| ೨೦. | ವೇಣುಮಾವ | ಶ್ರೀಮತಿ ಪ. ಸೀತಾದೇವಿ | ೦ | ೧೨ | ೦ |
| ೨೧. | ಮಗು | ಅಶ್ವತ್ಥ | ೧ | ೮ | ೦ |
| ೨೨. | ಹೊಸ ಸಂಸಾರ | ದ. ರಾ. ಬೇಂದ್ರೆ | ೨ | ೮ | ೦ |
| ೨೩. | ಪತಿತೋದ್ಧಾರ | ಎನ್ಕೆ ಹುಯಿಲಗೋಳ | ೧ | ೮ | ೦ |
| ೨೪. | ಭಾಗ್ಯಶ್ರೀ | ಲ. ಜಿ. ಬೇಂದ್ರೆ | ೧ | ೦ | ೦ |
| ೨೫. | ನಲದಮಯಂತಿ | ಕೆ. ವಾಸುದೇವಾಚಾರ್ಯ | ೧ | ೮ | ೦ |
| ೨೬. | ವಿಮರ್ಶಕ ವೈದ್ಯ | ವಿ. ಕೃ. ಗೋಕಾಕ | ೦ | ೬ | ೦ |

## ಸಣ್ಣಕತೆ, ಲಲಿತಪ್ರಬಂಧಗಳು :

| | | | | | |
|---|---|---|---|---|---|
| ೨೭. | ಕುರಿಹಿಂಡು | ಜಲಧರ | ೨ | ೮ | ೦ |
| ೨೮. | ಹೂಬಾಣಗಳು | ಪ. ರಮಾನಂದ | ೩ | ೦ | ೦ |
| ೨೯. | ಜಡಭರತನ ಕನಸುಗಳು | ಜಡಭರತ | ೧ | ೮ | ೦ |
| ೩೦. | ಪ್ರೇಮವಿಜಯ | ಕೆ. ವಾಸುದೇವಾಚಾರ್ಯ | ೨ | ೮ | ೦ |
| ೩೧. | ತೊಳೆದ ಮುತ್ತು | ,, ,, | ೩ | ೨ | ೦ |
| ೩೨. | ಬೆಳಗಿದ ದೀಪಗಳು | ,, ,, | ೧ | ೧೨ | ೦ |
| ೩೩. | ಬಹುಮಾನ ಪಡೆದ ಬರಹಗಳು | ವಿವಿಧ ಲೇಖಕರು | ೧ | ೧೨ | ೦ |
| ೩೪. | ಚೀನದ ಬಾಳು-ಬದುಕು | ,, ,, | ೭ | ೦ | ೦ |
| ೩೫. | ಬಾಳ ಹೊಳೆ | ಅಶ್ವತ್ಥ | ೨ | ೮ | ೦ |
| ೩೬. | ಮಾಲಾ ಮತ್ತು ಇತರ ಕತೆಗಳು | ಶ್ರೀಮತಿ ಕಾತ್ಯಾಯಿನಿ | ೨ | ೦ | ೦ |
| ೩೭. | ಕೆಂಪು ಗುಲಾಬಿ | ಶ್ರೀಮತಿ ಸೀತಾರತ್ನ | ೧ | ೮ | ೦ |
| ೩೮. | ಬಾಗಿನ | ಶ್ರೀಮತಿ ಆರ್. ಲಲಿತಮ್ಮ | ೧ | ೦ | ೦ |

## ಕಾವ್ಯಗಳು :

| | | | | | |
|---|---|---|---|---|---|
| ೩೯. | ಗರಿ | ಅಂಬಿಕಾತನಯದತ್ತ ಒಳ್ಳೆ ಕಾಗದ | ೨ | ೮ | ೦ |
| ೪೦. | ಸಖೀಗೀತ | ,, ,, | ೨ | ೮ | ೦ |
| ೪೧. | ಬಾಳದೇಗುಲದಲ್ಲಿ | ವಿ. ಕೃ. ಗೋಕಾಕ ಒಳ್ಳೆ ಕಾಗದ | ೫ | ೦ | ೦ |
| | | ಸಾದಾ | ೩ | ೮ | ೦ |
| ೪೨. | ಸಮುದ್ರಗೀತಗಳು | ,, ,, | ೧ | ೦ | ೦ |
| ೪೩. | ಬಾಸಿಗ | ರಂ. ಶ್ರೀ. ಮುಗಳಿ | ೧ | ೦ | ೦ |
| ೪೪. | ಮಹಾಯುದ್ಧ | ಅಶ್ವತ್ಥ | ೧ | ೮ | ೦ |

## ಇತರ ಸಾಹಿತ್ಯ :

| | | | | | |
|---|---|---|---|---|---|
| ೪೫. | ಸಾಹಿತ್ಯ ಮತ್ತು ವಿಮರ್ಶೆ | ದ. ರಾ. ಬೇಂದ್ರೆ | ೧ | ೮ | ೦ |
| ೪೬. | ದತ್ತವಾಣಿ | ಮಿರ್ಜಿ ಅಣ್ಣಾರಾಯ | ೧ | ೪ | ೦ |
| ೪೭. | ಮಾತೃವಾಣಿ | ಮಧುರಚೆನ್ನ | ೧ | ೪ | ೦ |
| ೪೮. | ಯುಗಪ್ರವರ್ತಕ ಬಸವಣ್ಣ | ಚಿಂತಾಮಣಿ | ೧ | ೦ | ೦ |
| ೪೯. | ಯಾತ್ರಿಕ | ರಂಗನಾಥ ದಿವಾಕರ | ೨ | ೦ | ೦ |
| ೫೦. | ಕವಿ-ಕಾವ್ಯ-ದೃಷ್ಟಿ | ವಿ. ಸೀತಾರಾಮಯ್ಯ | ೨ | ೦ | ೦ |

---